ಮುದ್ರಣ :

**ಶಾರದಾ ಪ್ರಕಟನಾಲಯ**

ಅರಳೇಪೇಟೆ,

ಬೆಂಗಳೂರು – ೨.

ರಕ್ಷಾಪತ್ರ :

**ಜಿ. ಕೆ. ಮೂರ್ತಿ**

[illegible]ಚಿತ್ರ :

**ಷಣ್ಮುಗಂ ಪ್ರೋಸೆಸ್ ಸ್ಟುಡಿಯೋ**

ಬೆಂಗಳೂರು.

ಮೊದಲ ಮುದ್ರಣ : ಜೂನ್ ೧೯೫೪.



ಬೆಲೆ :

**ಒಂದೂವರೆ ರೂಪಾಯಿ**

# ಪ್ರೇರಣೆ

ಬೆಳಗಾವಿಯಿಂದ ಹಳ್ಳಿಗೆ ಹೊರಟಿದ್ದ ನಾನು ಅಂದು ಸಾಯಂಕಾಲದ ರೈಲು ಹತ್ತಿದಾಗ ಕಿಟಕಿಯ ಬಳಿ ಮುಖವಿಟ್ಟು ಕುಳಿತಿದ್ದ ಹದಿಮೂರರ ಪ್ರಾಯದ ಹುಡುಗಿಯೊಬ್ಬಳನ್ನು ಕಂಡೆ. ಪಕ್ಕದಲ್ಲಿ ಅವಳ ತಂದೆಯೂ ಕುಳಿತಿದ್ದರು. ಅವರಿಬ್ಬರೂ ನನಗೆ ಚಿರಪರಿಚಿತರೇ ಆಗಿದ್ದವರು. ನಾನು ಓದುತ್ತಿದ್ದ ಪ್ರಾಥಮಿಕ ಶಾಲೆಯಲ್ಲಿ ಅವರೊಬ್ಬರು ಶಿಕ್ಷಕರು. ಅವರ ಏಕಮಾತ್ರ ಕನ್ಯೆ ಆ ಹುಡುಗಿ. ವರಮಹಾರಾಯನೊಬ್ಬನಿಗೆ ಅವಳನ್ನು ತೋರಿಸಲೆಂದು ಬೆಳಗಾವಿಗೆ ಬಂದಿದ್ದ ಅವರು ಮರಳಿ ಊರಿಗೆ ಹೊರಟಿದ್ದರು.

" ಏನಾಯಿತು ಮಾಸ್ತರರೇ ?" ಎಂದು ನಾನು ಕೇಳಿದೆ.

" ಸಾವಿರ ರೂಪಾಯಿ ಕೇಳುತ್ತಾರೆ ತಮ್ಮಾ," ಎಂದು ಗದ್ಗದ ಕಂಠದಿಂದ ಹೇಳಿದರವರು.

ಗಾಡಿಯಲ್ಲಿನ ದೀಪದ ಬೆಳಕಿನಲ್ಲಿ ಆ ಹುಡುಗಿಯ ದೊಡ್ಡ ದೊಡ್ಡ ಕಣ್ಣುಗಳ ತುಂಬಾ ನೀರು ತುಂಬಿಬಂದಿದ್ದುದನ್ನು ಕಂಡು ನನ್ನ ಕರುಳಿನಲ್ಲಿ ಕಲಮಲವಾಯಿತು. ಆ ಬಡ ಬ್ರಾಹ್ಮಣ ಉಪಾಧ್ಯಾಯ ಸಾವಿರ ರೂಪಾಯಿ ವರದಕ್ಷಿಣೆ ತೆತ್ತು ಮಗಳ ಮದುವೆ ಮಾಡಲು ಸಮರ್ಥರಿರಲಿಲ್ಲ.

೧೯೩೩ ನೆಯ ವರ್ಷದ ಸಂಗತಿ ಅದು.

ಇಂದಿಗೂ, ಆ ಸಂಜೆ, ರೈಲಿನಲ್ಲಿನ ಆ ಸನ್ನಿವೇಶ, ಅಶ್ರುಪೂರ್ಣ ನಯನಗಳ ಆ ಸೋದರಿಯ ದೀನಮುದ್ರೆ ನನ್ನ ಕಣ್ಣೆದುರು ಕಟ್ಟಿದಂತಿದೆ.

ಈ ಕಾದಂಬರಿಯನ್ನು ನಾನು ರಚಿಸಲು ಆ ಕನ್ಯೆಯ ಕಂಬನಿಗಳೂ ಪ್ರೇರಕವಾಗಿವೆಯೆಂದು ಹೇಳಬೇಕು.

× × × ×

೧೯೩೪. ಆಗ ನಾನಿನ್ನೂ ಹೈಸ್ಕೂಲು' ವಿದ್ಯಾರ್ಥಿ.

ನಮ್ಮ ಕೊಟಡಿಯ ಹತ್ತಿರದ ಮನೆಯೊಂದರಲ್ಲಿ ಕೆಳ – ಮಧ್ಯಮವರ್ಗದ ಬ್ರಾಹ್ಮಣ ಪರಿವಾರವೊಂದು ನೆಲಸಿತ್ತು. ಮನೆಯೊಡೆಯ ಮೂವತ್ತು

ರೂಪಾಯಿ ಸಂಬಳದ ಗುಮಾಸ್ತೆ. ಮನೆ ತುಂಬಾ ಮಕ್ಕಳು. ನಾಲ್ಕು ಜನ ಹೆಣ್ಣು ಮಕ್ಕಳಲ್ಲಿ ಇಬ್ಬರು ವಯಸ್ಕರಾಗಿದ್ದರೂ ವರದಕ್ಷಿಣೆ ತೆರುವ ಶಕ್ತಿ ತಂದೆಗಿರಲಿಲ್ಲವಾದುದರಿಂದ ಇನ್ನೂ ಅವಿವಾಹಿತರಾಗಿಯೆ ಉಳಿದಿದ್ದರು. ದೊಡ್ಡ ಹುಡುಗಿಗೆ ಹತ್ತೊಂಭತ್ತರ ಪ್ರಾಯ. ಎದುರು ಮನೆಯಲ್ಲಿ ಕೆಲಸಕ್ಕಿದ್ದ ಅಡುಗೆಯವನೊಬ್ಬನೊಡನೆ ಅವಳಿಗೆ ಸ್ನೇಹ ಬೆಳೆದು ಸಂಬಂಧವೂ ಉಂಟಾಯಿತು. ಮುಂದೆ ಆಗಬೇಕಾದ್ದು ಆಯಿತು. ಗರ್ಭಿಣಿಯಾದ ಹುಡುಗಿ ಒಂದು ರಾತ್ರೆ ಮನೆಯಿಂದ ಮಾಯವಾದಳು. ಎರಡು ದಿನಗಳ ತರುವಾಯ, ಊರ ಹೊರಗಿನ ಕೆರೆಯಲ್ಲಿ ಕಳೇಬರ ಕಾಣಿಸಿಕೊಂಡಿತು. ಸಹಪಾಠಿಗಳ ಜತೆಯಲ್ಲಿ ನಾನೂ ಹೋಗಿದ್ದೆ, ಅದನ್ನು ನೋಡಲೆಂದು.

ಆ ನಿರಪರಾಧಿ, ಮುಗ್ಧ, ನಿರ್ಮಲ ಯುವತಿಯ ಆ ಕಳೇಬರ ಇಂದಿಗೂ ನನ್ನ ಕಣ್ಣೆದುರು ಕಟ್ಟಿದಂತಿದೆ.

ಈ ಕಾದಂಬರಿಯನ್ನು ನಾನು ರಚಿಸಲು ಆ ಹತಭಾಗ್ಯಳ ಕಳೇಬರವೂ ಪ್ರೇರಕವಾಗಿದೆಯೆಂದು ಹೇಳಬೇಕು.

× × × ×

೧೯೪೦. ಬೇರೊಂದು ಊರು.

ಬೀದಿಯಲ್ಲಿ ನೆರೆದ ಜನರ ಮಾತು ಕೇಳಬರುತ್ತಿತ್ತು.

"ಮುಸಲ್ಮಾನರ ಹುಡುಗನನ್ನು ಕಟ್ಟಿಕೊಂಡು ಓಡಿಹೋದಳಂತೆ ಆ ಕುಲಟೆ!"

"ಓಡಿಹೋಗುವದೇ ಆಗಿದ್ದರೆ ಹಿಂದೂ ಹುಡುಗರ ಜತೆಗಾದರೂ ಹೋಗಬಹುದಿತ್ತಲ್ಲ! ಇವಳಿಗೆ ಮುಸಲರವನೇ ಬೇಕಾಗಿದ್ದನೇನೊ. ಪಾಪಿ!"

"ಇವಳು ಕಾಲೇಜಿಗೆ ಹೋಗಲು ಷುರು ಮಾಡಿದಾಗಲೇ ನನಗನ್ನಿಸಿತ್ತು, ಇಂಥಾದ್ದೇನಾದರೂ ರಾಡಿ ಮಾಡಿಯಾಳು ಅಂತ."

"ಬ್ರಾಹ್ಮಣರ ಮರ್ಯಾದೆಯನ್ನೇ ತೆಗೆಯಹತ್ತಿದರು ಇಂಥ ಹಲ್ಕಾ ಹುಡುಗಿಯರು!"

ಆ ಹುಡುಗಿ ನನಗೂ ಪರಿಚಿತೆಯಾಗಿದ್ದಳು. ಅವಳು ಕುಲಟೆಯೂ ಆಗಿರಲಿಲ್ಲ, ಪಾಪಿಯೂ ಆಗಿರಲಿಲ್ಲ, 'ಹಲ್ಕಾ' ಆಗಿರಲಿಲ್ಲ. ಅವಳ ಹೃದಯ

ಒಳ್ಳೆಯದೇ ಆಗಿತ್ತು, ನಡತೆಯೂ ಒಳ್ಳೆಯದೇ ಆಗಿತ್ತು. ತನಗೆ ಅನುರೂಪವಾಗುವಂಥ ಬ್ರಾಹ್ಮಣ ಯುವಕನೊಬ್ಬನನ್ನೇ ವರಿಸಲು ಅವಳು ಸಿದ್ಧವಾಗಿಯೆ ಇದ್ದಳಾದರೂ ವರದಕ್ಷಿಣೆಯಿಲ್ಲದೆ ಅವಳನ್ನು ಮದುವೆಯಾಗಲು ಯಾರೂ ಮುಂದೆ ಬರಲಿಲ್ಲ. ಕಾಲೇಜಿನಲ್ಲಿ ಸಹಪಾಠಿಯಾಗಿದ್ದ ಮಹಮ್ಮದೀಯ ಯುವಕನೊಬ್ಬನೊಡನೆ ಅವಳಿಗೆ ಸಹಜವಾದ ರೀತಿಯಲ್ಲಿ ಸಂಬಂಧ ಬೆಳೆದು ಬಂದಿತ್ತು. ವಿವಾಹಕ್ಕೆ ಸಮಾಜದ ಸಮ್ಮತಿ ದೊರೆಯುವುದು ಸಾಧ್ಯವಿರಲಿಲ್ಲವಾದುದರಿಂದ ಆ ಊರನ್ನೇ ತ್ಯಜಿಸಿ ಹೋಗಬೇಕಾದ ದುರ್ಧರ ಪ್ರಸಂಗ ಬಂದಿತ್ತು, ಅವಳ ಮೇಲೆ.

ಹಣೆಗೆ ಕೈ ಚೆಲ್ಲಿ ಅಸಹಾಯರಾಗಿ ಕುಳಿತಿದ್ದ ಅವಳ ತಂದೆ ತಾಯಿಗಳ ಹತಾಶ ಮುಖಗಳು ನನ್ನ ಕಣ್ಣೆದುರು ಇಂದಿಗೂ ಮೂಡಿದಂತಿವೆ.

ಈ ಕಾದಂಬರಿಯನ್ನು ನಾನು ರಚಿಸಲು ಆ ಸನ್ನಿವೇಶವೂ ಪ್ರೇರಕವಾಗಿದೆಯೆಂದು ಹೇಳಬೇಕು.

× × × ×

೧೯೫೪. ಇಪ್ಪತ್ತು ವರ್ಷಗಳ ತರುವಾಯ—

ಅದೇ ಸಮಸ್ಯೆ. ಅಂಥವೇ ಸನ್ನಿವೇಶಗಳು.

ಬಡವರಾದ ತಂದೆ ತಾಯಂದಿರು ಸುರಿಸುವ ಕಣ್ಣೀರು. ವರಗಳಿಗೆ ಮುಖ ತೋರಿಸಿ ತೋರಿಸಿ ಅವಮಾನಿತರಾಗಿ ತಿರಸ್ಕೃತರಾಗಿ ಕುಮಾರಿಯರು ಸುರಿಸುವ ಕಣ್ಣೀರು. ತಮ್ಮ 'ಜಾತಿ'ಯವರಲ್ಲದ ಯುವಕರನ್ನು ಪ್ರೀತಿಸಿ ಅವರೊಡನೆ ಓಡಿಹೋಗಿ ಸಮಾಜದ ಕಟುನಿಂದೆಗೊಳಗಾಗಿ ಪರಿತಪಿಸುವ ಯುವತಿಯರ ನಿಟ್ಟುಸಿರು....

ವಿಷಮ ಸಮಾಜ ವ್ಯವಸ್ಥೆಯ ಪರಿಣಾಮವಾಗಿ ಎಳೆ ವಯಸ್ಸಿನಲ್ಲಿಯೆ ಸಾವನ್ನಪ್ಪಿಕೊಳ್ಳುವ ಪ್ರಣಯಿಗಳ ಹೃದಯದ್ರಾವಕ ವೃತ್ತಾಂತಗಳು....

ಈ ಕಾದಂಬರಿಯನ್ನು ನಾನು ರಚಿಸಲು ಈ ಎಲ್ಲ ಅಂಶಗಳೂ ಪ್ರೇರಕವಾಗಿವೆ.

× × × ×

ಒಂದು ಕಾದಂಬರಿಯನ್ನು ರಚಿಸಿದ ಮಾತ್ರಕ್ಕೆ ಈ ಎಲ್ಲ ಸಮಸ್ಯೆಗಳು ಪರಿಹಾರವಾಗಬಹುದೆಂಬ ಭ್ರಮೆಯೇನೂ ನನಗಿಲ್ಲ; ಸಣ್ಣ ಕಥೆ, ಕಾದಂಬರಿ

ಮೊದಲಾದ ಲಲಿತಕೃತಿಗಳು ಇಂಥ ಮಹಾ ಕಾರ್ಯವನ್ನೆಂದಿಗೂ ಸಾಧಿಸಲಾರವು. ಅದು ಅವುಗಳ ಉದ್ದೇಶವೂ ಅಲ್ಲ. ಸಮಕಾಲೀನ ಜೀವನದ ವಾಸ್ತವಿಕ, ಸಹಾನುಭೂತಿಪೂರ್ವಕ, ಕಲಾತ್ಮಕ ಚಿತ್ರಣವಷ್ಟೇ ಕಾದಂಬರಿಯ ಉದ್ದೇಶವೆಂದು ನನ್ನ ತಿಳಿವಳಿಕೆ. ಆ ಚಿತ್ರಣದಿಂದಾಗಿ ವಾಚಕರ ಮನಸ್ಸಿನಲ್ಲಿ ರಸಾನುಭೂತಿಯುತ್ಪನ್ನವಾಗಿ, ತನ್ಮೂಲಕ ಅವರ ಸಹಾನುಭೂತಿ ಮತ್ತು ವಿಚಾರ ಶಕ್ತಿಗಳಿಗೆ ಪ್ರಚೋದನೆ ಲಭಿಸುವಂತಾದರೆ ಕಾದಂಬರಿಯ ಉದ್ದಿಶ್ಯ ಸಾರ್ಥಕವಾದ ಹಾಗೆ.

ಈ ನಿಟ್ಟಿನಲ್ಲಿ ಪ್ರಸ್ತುತ ಕೃತಿ ಯಶಸ್ವಿಯಾಗುವುದೊ, ಇಲ್ಲವೊ ಎಂಬುದೇನೂ ನನಗೆ ತಿಳಿಯದು. ಪ್ರಾಮಾಣಿಕವಾದ ರೀತಿಯಲ್ಲಿ ಕೃತಿರಚನೆ ಮಾಡುವುದಷ್ಟೆ ನನಗೆ ಸೇರಿದ ಕೆಲಸ. ಮಾಡಬೇಕಾಗಿದ್ದುದನ್ನು ಮಾಡಿ ಮುಗಿಸಿದಾಗ ಲಭಿಸುವ ಸಾತ್ವಿಕ ಸಮಾಧಾನದಿಂದಲೇ ನಾನು ತೃಪ್ತ.

ಮಲಾಮರಡಿ,
೧೦ ಏಪ್ರಿಲ್ ೧೯೫೪

**ಬಸವರಾಜ ಕಟ್ಟೀಮನಿ.**

**ಸಮರ್ಪಣ :**

ಹಿರಿಯ ಸಾಹಿತಿ, ಹಿರಿಯ ಜೀವ:

**ಶ್ರೀರಂಗರಿಗೆ –**

ಆದರಪೂರ್ವಕವಾಗಿ.

# ಈ ಲೇಖಕರ ಇತರ ಕೃತಿಗಳು

## ಕಾದಂಬರಿ

ಸ್ವಾತಂತ್ರ್ಯದೆಡೆಗೆ
ಮೂಡಿ ಮಡಿದವರು
ಜ್ವಾಲಾಮುಖಿಯ ಮೇಲೆ
ಮೋಹದ ಬಲೆಯಲ್ಲಿ
ಬೀದಿಯಲ್ಲಿ ಬಿದ್ದವಳು
ಮಣ್ಣು ಮತ್ತು ಹೆಣ್ಣು
ಜರತಾರಿ ಜಗದ್ಗುರು
ಖಾನಾವಳಿಯ ನೀಲಾ
ನೀ ನನ್ನ ಮುಟ್ಟಬೇಡ

## ಸಣ್ಣ ಕಥೆ

ಕಾರವಾನ್
ಗುಲಾಬಿ ಹೂ
ಆಗಸ್ಟ್ ಒಂಭತ್ತು
ಸೆರೆಯಿಂದ ಹೊರಗೆ
ಜೋಳದ ಬೆಳೆಯ ನಡುವೆ

# ಜನಿವಾರ ಮತ್ತು ಶಿವದಾರ

ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿಚಾತ್ಮನಿ ।

ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ ॥

—ಭಗವದ್ಗೀತೆ.

ಇಷ್ಟರಲ್ಲಿಯೆ ಪ್ರಕಟವಾಗಲಿದೆ!

**ಬಸವರಾಜ ಕಟ್ಟೀಮನಿಯವರ**

ಮುಂದಿನ ಕಾದಂಬರಿ

# ಬಂಗಾರದ ಜಿಂಕೆಯ ಹಿಂದೆ

ಸುಮಾರು ೩೦೦ ಪುಟ

**ಬೆಲೆ ಒಂದೂವರೆ ರೂಪಾಯಿ**

# ೧

ಹನ್ನೊಂದು ಐದು.

ಕಣ್ಣಿವೆಗಳನ್ನು ಪಿಳುಕಿಸುತ್ತ, ಗೋಡೆಯ ಮೇಲಿದ್ದ ಆ ದೊಡ್ಡ ಗಡಿಯಾರವನ್ನೆ ಮತ್ತೆ ದಿಟ್ಟಿಸಿದ ರಾಮುಚಂದ್ರ.

ಹನ್ನೊಂದು ಐದು. ತಾಸಿನ ಮುಳ್ಳು ಹನ್ನೊಂದರ ಮೇಲೆ. ಮಿನಿಟಿನ ಮುಳ್ಳು ಐದರ ಮೇಲೆ. ಸಂದೇಹವೇನೂ ಇಲ್ಲ. ಗಡಿಯಾರದಲ್ಲಿ ನಿಜಕ್ಕೂ ಹನ್ನೊಂದು ಐದಾಗಿದೆ.

ಐದು ಮಿನಿಟು ತಡವಾಯಿತು. ತ್ಚ್....ತ್ಚ್....ಈ ಹಾಳು ಮಳೆ.... ತಾನು ಕಚೇರಿಗೆ ಹೊರಟು ನಿಂತಾಗಲೇ ಸ್ಫೂರ್ತಿ ಬರುವುದೋ ಏನೋ ಇದಕ್ಕೆ! ಈಗಾಗಲೇ ಅನೇಕ ಸಲ ತಡವಾಗಿ ಬಂದುದಕ್ಕೆ ಎಚ್ಚರಿಕೆಯ ಕಟುಮಾತು ಆಡಿಸಿಕೊಂಡುದಾಗಿದೆ. ಸಾಹೇಬನಂತೂ ಮೊದಲಿನಿಂದಲೂ ತನ್ನ ಬಗೆಗೆ ಗುಸು ಗುಸು ಎನ್ನುತ್ತಲೇ ಇದಾನೆ – ಕಚೇರಿಯ ಸಂಚಾಲಕತ್ವವನ್ನು ಆತ ವಹಿಸಿ ಕೊಂಡಂದಿನಿಂದಲೂ. ತಾನು ಬ್ರಾಹ್ಮಣನಾಗಿದ್ದುದೇ ತನ್ನ ಮಹಾಪರಾಧ, ಸಾಹೇಬನ ದೃಷ್ಟಿಯಲ್ಲಿ. ಕಚೇರಿಯಲ್ಲಿ ಏಕಮಾತ್ರ ಬ್ರಾಹ್ಮಣ ಕಾರಕೂನನಾಗಿದ್ದ ತನ್ನನ್ನಾತ ಎಂದಿನಿಂದಲೂ ಅಸಹನೆಯಿಂದಲೇ ನೋಡುತ್ತ ಬಂದಿದ್ದಾನೆ, ಯಾವುದಾದರೊಂದು ನೆಪ ಹುಡುಕಿ ತನ್ನನ್ನು ಕೆಲಸದಿಂದ ತೆಗೆದು ಹಾಕಬೇಕೆಂದು ಅಂದಿನಿಂದಲೂ ಕಾದುಕೊಂಡಿದ್ದಾನೆ. ಮ್ಯಾನೇಜರ್ ಗುರು ಬಸಪ್ಪನಿಗೂ ಅಷ್ಟೆ; ತನ್ನನ್ನು ಕಂಡರಾಗುವುದಿಲ್ಲ. ತನ್ನ ವಿರುದ್ಧ ಸಾಹೇಬನಿಗೆ

ದೂರು ಹೇಳುತ್ತಿರುವುದೇ ಅವನದೊಂದು ಉದ್ಯೋಗವಾಗಿದೆ. ತಾನು ಮಾಡುವ, ಮಾಡದಿರುವ ಸಣ್ಣ ಪುಟ್ಟ ತಪ್ಪುಗಳನ್ನೂ ಕೂಡ ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ಕಾಯುತ್ತಿರುತ್ತಾನೆ, ಗುರುಬಸಪ್ಪ. ಸಾಹೇಬನಿಗೆ ಬೇಕಾಗಿದ್ದುದೂ ಅದೇ. ತನ್ನ ತಪ್ಪುಗಳ ಯಾದಿಯೊಂದನ್ನು ತಯಾರಿಸಿ ಡೈರೆಕ್ಟರ್ ಬೋರ್ಡಿನೆದುರು ಇಟ್ಟು ತನ್ನನ್ನು ನೌಕರಿಯಿಂದ ತೆಗೆದೊಗೆಯಲು ಹೊಂಚು ಹಾಕುತ್ತಿದ್ದಾರೆ ಅವರಿಬ್ಬರೂ. ಅವರ ಈ ಆಟವನ್ನು ನಡೆಯಗೊಡಬಾರದು. ತಾನು ಬಲು ಎಚ್ಚರದಿಂದಿರಬೇಕು. ತನ್ನಿಂದ ಯಾವ ಪ್ರಮಾದವೂ ಘಟಿಸಬಾರದು. ತಾನು ಕಚೇರಿಗೆ ಬರುವುದರಲ್ಲೂ ಎಂದೂ ತಡವಾಗಬಾರದು....

ಆದರೂ....

ತಡವಾಗಬಾರದೆಂದು ತಾನೆಷ್ಟೇ ಎಚ್ಚರದಿಂದಿದ್ದರೂ ಕೂಡ ಒಂದೊಂದು ದಿನ ಏನೇನೋ ಅಡ್ಡಿ ಅಡಚಣೆ ಬಂದು ತಡವಾಗಿಯೇ ಆಗುತ್ತದೆ. ಮೊನ್ನೆ ಹತ್ತು ನಿಮಿಷ ವಿಲಂಬವಾಗಿತ್ತು. ಇಂದು ಐದು ನಿಮಿಷ....

ಅಡ್ಡಮಳೆಯ ಹೊಡೆತಕ್ಕೆ ಸಿಲುಕಿ ಒದ್ದೆಯಾಗಿದ್ದ ಟೊಪ್ಪಿಗೆಯನ್ನು ಕೊಡಹುತ್ತ ರಾಮಚಂದ್ರ ಸಹಜವಾಗಿಯೆ ಮ್ಯಾನೇಜರನ ಕುರ್ಚಿಯ ಕಡೆ ದೃಷ್ಟಿ ತೂರಿದ. ಯಾವುದೋ ಫೈಲನ್ನು ತಿರುವಿ ಹಾಕುತ್ತ ಕುಳಿತಿದ್ದ ಗುರುಬಸಪ್ಪನ ದೃಷ್ಟಿಯೂ ಅದೇ ವೇಳೆಗೆ ರಾಮಚಂದ್ರನತ್ತ ತಿರುಗಿತು. ಕರಿ ಬಿಳಿಯ ಕೂದಲುಗಳಿಂದ ತುಂಬಿದ ಗುರುಬಸಪ್ಪನ ಮುಖದ ಮೇಲೆ ರಾಕ್ಷಸೀ ಆನಂದದ ಭಾವ ಮೂಡಿ ಮಾಯವಾಯಿತು. "ಮತ್ತೆ ತಡವಾಗಿ ಬಂದೆಯಲ್ಲವೆ? ಮತ್ತೆ ಸಿಕ್ಕಿದೆಯಲ್ಲವೇ ನನ್ನ ಕೈಯಲ್ಲಿ?" ಎಂದು ಹೇಳುವಂತೆ ಅವನ ದೃಷ್ಟಿ ರಾಮಚಂದ್ರನ ಮೇಲೆಲ್ಲ ಹರಿದಾಡಿತು. ತನ್ನ ಮೈಮೇಲೆ ಹಾವು ಹರಿದಾಡಿದ ಹಾಗೆ ಭಾಸವಾಗಿ ರಾಮಚಂದ್ರ ಒಳಗೊಳಗೇ ನಡುಗುತ್ತಾ ಪಡಸಾಲೆಯನ್ನು ದಾಟಿ, ಮಹಡಿಯ ಮೆಟ್ಟಲುಗಳನ್ನೇರಿ ಕಾರಕೂನರ ಕೊಟಡಿಗೆ ಬಂದ. ಆ ವೇಳೆಗಾಗಲೆ ತಮ್ಮ ತಮ್ಮ ಕೆಲಸಗಳಲ್ಲಿ ಮಗ್ನರಾಗಿದ್ದ ಕಾರಕೂನರು ಭಯಚಕಿತ ದೃಷ್ಟಿಯಿಂದ ಅವನನ್ನೊಮ್ಮೆ ನಿಟ್ಟಿಸಿ ನೋಡಿ ಮತ್ತೆ ತಮ್ಮ ಕಾಗದಗಳಲ್ಲಿ ತಲ್ಲೀನರಾದರು. ಅಕೌಂಟೆಂಟ್ ವೀರಣ್ಣನೊಬ್ಬ ಮಾತ್ರ ದನಿಯೆತ್ತಿ ಕೇಳಿದ:

"ಯಾಕ್ರಿ, ಏನು ವಿಶೇಷ?"

ರಾಮಚಂದ್ರ ಅವನನ್ನು ಮನಸ್ಸಿನಲ್ಲಿಯೆ ವಂದಿಸುತ್ತಾ ತನ್ನ ಕುರ್ಚಿಯ ಮೇಲೆ ಕುಳಿತುಕೊಂಡು ಮೆಲ್ಲಗಿನ ದನಿಯಲ್ಲಿ ಉತ್ತರವಿತ್ತ :

"ಏನಿಲ್ಲರಿ. ಮನೆಯಿಂದ ಹೊರಟಿದ್ದಂತೆ ಮಳೆ ಬಂದು ಬಿಟ್ಟಿತು."

"ಕೊಡೆ ತರಬೇಕಾಗಿತ್ತು ?" ಎಂದು ಕೇಳಲಿಲ್ಲ ವೀರಣ್ಣ. ರಾಮಚಂದ್ರನ ಪರಿಸ್ಥಿತಿಯನ್ನೆಲ್ಲ ಚೆನ್ನಾಗಿ ತಿಳಿದಿದ್ದವನು ಆತ. ಎಂಥ ಮಳೆಯೇ ಇರಲಿ, ಎಂಥ ಬಿಸಿಲೇ ಇರಲಿ, ಯಾವಾಗಲೂ ಕೊಡೆಯಿಲ್ಲದೆಯೇ ಕಚೇರಿಗೆ ಬರುತ್ತಿದ್ದವನು ರಾಮಚಂದ್ರ. ಅವನು ಕೊಡೆ ತೆಗೆದುಕೊಂಡು ಬಂದುದನ್ನು ಕಚೇರಿಯಲ್ಲಿ ಎಂದೂ ಯಾರೂ ಕಂಡಿರಲಿಲ್ಲ. ಮಳೆಗಾಲದಲ್ಲಾದರೆ ನಿಜವಾದ ಮಳೆಯಲ್ಲಿ, ಬಿಸಿಲುಗಾಲದಲ್ಲಾದರೆ ಬೆವರಿನ ಮಳೆಯಲ್ಲಿ ತೊಯಿಸಿಕೊಂಡು, ದೀರ್ಘವಾಗಿ ಉಸಿರುಬಿಡುತ್ತಾ ಕಚೇರಿಗೆ ಬರುವ ರಾಮಚಂದ್ರನ ಕರುಣಾ ಜನಕಮೂರ್ತಿ ಎಲ್ಲರಿಗೂ ಚಿರಪರಿಚಿತವಾದುದಾಗಿತ್ತು. ಅವನ ಕಷ್ಟವನ್ನು ಕಂಡು ಎಲ್ಲರೂ ಕನಿಕರಪಡುವರು. ಅದಕ್ಕಿಂತ ಹೆಚ್ಚಿಗೆ ಅವರೇನನ್ನು ಮಾಡಲೂ ಸಾಧ್ಯವಿರಲಿಲ್ಲ. ರಾಮಚಂದ್ರನ ಪರಿಸ್ಥಿತಿಗೂ ಅವರ ಪರಿಸ್ಥಿತಿಗೂ ಹೆಚ್ಚಿನ ವ್ಯತ್ಯಾಸವೇನೂ ಇರಲಿಲ್ಲ. ಅವರೂ ಅಂಥ ತೊಂದರೆಗಳನ್ನು ಅನುಭವಿಸುತ್ತಿದ್ದವರೇ. ಕೊಡೆಯಿದ್ದರೆ ಕೋಟು ಇರುತ್ತಿರಲಿಲ್ಲ, ಕೋಟಿದ್ದರೆ ಚಪ್ಪಲಿಯಿರುತ್ತಿರಲಿಲ್ಲ. ಸಿಕ್ಕುವ ಸಂಬಳ ಸಂಸಾರಕ್ಕೇ ಸಾಲುತ್ತಿರಲಿಲ್ಲ. ಎಲ್ಲರಿಗೂ ಕಷ್ಟವೇ.

ಎಂಥ ಕಷ್ಟವಾದರೇನು, ಎಂಥ ದುರ್ಗತಿ ಬಂದರೇನು, ಎಲ್ಲವನ್ನೂ ಮೂಕವಾಗಿ ಸಹಿಸಿಕೊಳ್ಳದೆ ಬೇರೆ ವಿಧಿಯಿರಲಿಲ್ಲ. "ವಿಜಯ ವಿಮಾ ಕಂಪನಿ"ಯ ಆ ನೌಕರಿಯನ್ನು ಬಿಟ್ಟರೆ ಬೇರೆ ಒಳ್ಳೆಯ ನೌಕರಿ ಸಿಗಬಹುದೆಂಬ ಭರವಸೆಯಾದರೂ ಎಲ್ಲಿದ್ದಿತು ? ಇಲ್ಲಿ ಸಿಗುತ್ತಿದ್ದ ಸಂಬಳ ತೀರ ಅಲ್ಪವಾದರೂ ಅದಕ್ಕಿಂತ ಹೆಚ್ಚು ಸಂಬಳದ ಕೆಲಸಗಳು ಸಿಕ್ಕುವುದೂ ಅಸಂಭವವಾಗಿದ್ದುದರಿಂದ ಸಿಕ್ಕಿದುದರಲ್ಲಿಯೆ ತೃಪ್ತಿಪಟ್ಟುಕೊಳ್ಳುತ್ತ ಎಲ್ಲರೂ ಅಲ್ಲಿಯೆ ಕೊಳೆಯದೆ ಬೇರೆ ಮಾರ್ಗವಿರಲಿಲ್ಲ. ತಮ್ಮ ದುಸ್ಥಿತಿಯ ಬಗೆಗೆ ಎಲ್ಲರಿಗೂ ಅಸಮಾಧಾನ. ಪರಸ್ಪರರ ಬಗೆಗೆ ಸಹಾನುಭೂತಿ, ಕನಿಕರ ಅಷ್ಟೆ. ರಾಮಚಂದ್ರನ ಪರಿಸ್ಥಿತಿಯ ಬಗೆಗಂತೂ ಎಲ್ಲರಿಗೂ ಮರುಕ. ಪ್ರತಿಯೊಬ್ಬರಿಗೂ ಅವರವೇ ಆದ ತೊಂದರೆಗಳಿದ್ದುವಾದರೂ ಅವನಷ್ಟು ತೊಂದರೆಗಳು ಮಾತ್ರ ಇನ್ನಾರಿಗೂ ಇರಲಿಲ್ಲ.

ಅಯ್ಯೋ ಪಾಪ – ಎಂದು ಎಲ್ಲರೂ ನೊಂದುಕೊಳ್ಳುವವರೇ. ನೊಂದುಕೊಳ್ಳು ವುದೆಷ್ಟೋ ಅಷ್ಟೆ. ಅವನ ತೊಂದರೆಗಳನ್ನು ಪರಿಹರಿಸುವುದು ಅವರಿಗಾದರೂ ಎಲ್ಲಿ ಸಾಧ್ಯವಿತ್ತು ?

ಬೆಳೆದು ನಿಂತಿದ್ದ ತಂಗಿಗೊಬ್ಬ ವರನನ್ನು ಹುಡುಕಲು ರಾಮುಚಂದ್ರ ಪಡುತ್ತಿದ್ದ ಪಾಡನ್ನು ಕಂಡು ಕಳವಳಗೊಂಡು ಅಕೌಂಟೆಂಟ್ ವೀರಣ್ಣ ಆಗಾಗ ಹೇಳುತ್ತಿದ್ದ :

" ನೀವು ಲಿಂಗಾಯತರಾದರೂ ಆಗಿದ್ದರೆ ಇಷ್ಟು ತ್ರಾಸಾಗುತ್ತಿರಲಿಲ್ಲ ನಿಮಗೆ ರಾಮುಚಂದ್ರರಾವ್. ನಮ್ಮ ತಮ್ಮನಿಗೇ ನಿಮ್ಮ ತಂಗಿಯನ್ನು ತೆಗೆದು ಕೊಂಡು ಬಿಡುತ್ತಿದ್ದೆ, ನೋಡಿರಿ."

ರಾಮುಚಂದ್ರ ವಿಷಣ್ಣ ನಗೆ ಬೀರಿ ಸುಮ್ಮನಾಗುತ್ತಿದ್ದ ; ಉತ್ತರವೀಯು ತ್ತಿರಲಿಲ್ಲ.

ರಾಮುಚಂದ್ರ ಲಿಂಗವಂತನಾಗಿದ್ದರೆ ಅವನಿಗಿಷ್ಟು ಕಷ್ಟವಾಗುತ್ತಿರಲಿಲ್ಲ ವೆಂದು ಕಚೇರಿಯ ಕೆಲಸಗಾರರೆಲ್ಲರಿಗೂ ಅನ್ನಿಸುತ್ತಿತ್ತು. ನಾಲ್ಕು ವರ್ಷ ಗಳಿಂದಲೂ ಕಷ್ಟಪಡುತ್ತಿದ್ದ ರಾಮುಚಂದ್ರ – ತನ್ನ ತಂಗಿಗೊಬ್ಬ ವರನನ್ನು ಹುಡುಕಲು ಮ್ಯಾನೇಜರನನ್ನು ಕಾಡಿ ಬೇಡಿ ರಜೆ ಪಡೆದುಕೊಳ್ಳುವುದು, ವರಗಳನ್ನು ಶೋಧಿಸುತ್ತ ಆ ಊರು ಈ ಊರು ಸುತ್ತುವುದು. ಪಕ್ವವಾದ ಕಿತ್ತಳೆ ಹಣ್ಣಿನಂತೆ ಕಾಂತಿಯುತವಾಗಿದ್ದ ರಾಮುಚಂದ್ರನ ಮುಖ ಈ ನಾಲ್ಕು ವರ್ಷಗಳ ಅಲೆದಾಟದಲ್ಲಿ ಒಣಗಿ ಕೃಶವಾಗಿ ಕಳಾಹೀನವಾಗಿದ್ದಿತು. ಮೂವತ್ತೆಂಟರ ಪ್ರಾಯದಲ್ಲೇ ಅವನ ಮೈಮೇಲೆ ಮುಪ್ಪು ಕಾಣಿಸಿಕೊಳ್ಳ ತೊಡಗಿದ್ದಿತು. ನಿರಾಸೆಯಿಂದಲೂ ಚಿಂತೆಯಿಂದಲೂ ಕೊರಗಿ ಸೊರಗುತ್ತಿದ್ದ ಅವನ ದೇಹದ ದುಸ್ಥಿತಿಯನ್ನು ನಿರೀಕ್ಷಿಸುತ್ತ ಕಚೇರಿಯ ಕೆಲಸಗಾರರೆಲ್ಲ ಮರುಗುವರು.

" ಚಿಂತೆ ಮಾಡಿದರೇನು ಬರುತ್ತದೆ ರಾಮುಚಂದ್ರರಾವ್ ? ನೀವು ಸ್ವಲ್ಪ ಪ್ರಕೃತಿಯ ಕಡೆ ಲಕ್ಷ್ಯ ಕೊಡಿರಿ," ಎಂದು ಮತ್ತೆ ಮತ್ತೆ ಹೇಳುತ್ತಿದ್ದ ವೀರಣ್ಣ.

ಆಗಲೂ ರಾಮುಚಂದ್ರ ವಿಷಾದಪೂರಿತ ನಗೆ ನಕ್ಕು ಸುಮ್ಮನಿರುತ್ತಿದ್ದ.

ಕಚೇರಿಯ ಕೆಲಸಕ್ಕೆ ಸಂಬಂಧವಿಲ್ಲದ ಮಾತುಗಳನ್ನು ಕಚೇರಿಯಲ್ಲಿ ಆಡಿ ಕಾಲಹರಣ ಮಾಡಬಾರದೆಂದು ಮ್ಯಾನೇಜರ್ ಗುರುಬಸಪ್ಪ ಕಟ್ಟುನಿಟ್ಟಾಗಿ

ವಿಧಿಸಿದ್ದ. ಅಂತೆಯೆ, ಕಾರಕೂನರ ಕೊಟಡಿಯಲ್ಲಿ ವಿಶೇಷ ಮಾತುಕತೆಯೆಂದೂ ನಡೆಯುತ್ತಿರಲಿಲ್ಲ. ಕುರ್ಚಿ ಮೇಜು ಕಪಾಟು ಪುಸ್ತಕ ಫೈಲುಗಳ ಹಾಗೆ ಆ ಕಾರಕೂನರೂ ಜಡ ವಸ್ತುಗಳಂತೆ ಸದ್ದಿಲ್ಲದೆ ಸ್ತಬ್ಧವಾಗಿ ಕುಳಿತು ತಮ್ಮ ತಮ್ಮ ಕೆಲಸ ನೋಡಿಕೊಳ್ಳುತ್ತಿದ್ದರು. ರಾಮಚಂದ್ರನಿಗೂ ಅದೇ ಅಭ್ಯಾಸವಾಗಿತ್ತು. ಆ ಕಟ್ಟಳೆಯನ್ನು ಲೆಕ್ಕಿಸದೆ ಆಗಾಗ ದನಿಯೆತ್ತಿ ಮಾತನಾಡುತ್ತಿದ್ದವನೆಂದರೆ ವೀರಣ್ಣನೊಬ್ಬನೆ. ಮ್ಯಾನೇಜರ್ ಗುರುಬಸಪ್ಪ, ಸಂಚಾಲಕ ರಾವ್‌ಸಾಹೇಬ್ ಲಿಂಗಪ್ಪ ಇಬ್ಬರಿಗೂ ಆತ ಅಂಜುತ್ತಿರಲಿಲ್ಲ. "ವಿಮಾ ಕಂಪನಿಯ ಆಫೀಸೆಂದರೇನು ಜೇಲಲ್ಲ. ಮಾತಾಡುವ ಸ್ವಾತಂತ್ರ್ಯ ಕೂಡ ಇಲ್ಲಾಂದರೆ ಯಾರಾದರೂ ನಕ್ಕಾರು. ಸಾಹೇಬನಾಗಲಿ ಮ್ಯಾನೇಜರಾಗಲಿ ಸರ್ವಾಧಿಕಾರಿಗಳಲ್ಲ. ಅವರೂ ಕಂಪನಿಯ ನೌಕರರೇ. ನಮ್ಮ ಮೇಲಿನವರಾದರೇನಾಯಿತು, ನಮ್ಮನ್ನು ದನಗಳಂತೆ ನಡಿಸಿಕೊಳ್ಳಲು ಅವರಿಗೇನು ಅಧಿಕಾರ!" ಎಂದು ವಾದಿಸುತ್ತ ನಿರ್ಭಯದಿಂದ ವರ್ತಿಸುತ್ತಿದ್ದ ವೀರಣ್ಣ, ಕಾರಕೂನರು, ಸಿಪಾಯಿಗಳೆಲ್ಲರ ಕಷ್ಟ ಸುಖಗಳನ್ನು ವಿಚಾರಿಸುತ್ತ ಅವರೆಲ್ಲರ ಗೌರವಾದರಗಳಿಗೆ ಪಾತ್ರನಾಗಿದ್ದ. ರಾವ್‌ಸಾಹೇಬ್ ಲಿಂಗಪ್ಪನವರೆದುರು ದಿಟ್ಟತನದಿಂದ ನಿಂತುಕೊಂಡು ಮಾತನಾಡುವ ಧೈರ್ಯವಿದ್ದುದು ವೀರಣ್ಣನೊಬ್ಬನಲ್ಲಿಯೆ. ಇತರ ಕೆಲಸಗಾರರನ್ನೆಲ್ಲ ಹೆದರಿಸುತ್ತಿದ್ದ ಮ್ಯಾನೇಜರ್ ಗುರುಬಸಪ್ಪನೂ ವೀರಣ್ಣನ ಬಗೆಗೆ ಒಳಗೊಳಗೇ ಅಂಜುತ್ತಿದ್ದ.

"ಸಾಹೇಬ್ರು ಕರೀತಾರ," ಸಿಪಾಯಿ ಬಸಪ್ಪನ ದನಿ ಕೇಳಿ ಕಾರಕೂನರೆಲ್ಲ ಬೆಚ್ಚಿ ಅವನತ್ತ ದೃಷ್ಟಿ ತಿರುಗಿಸಿದರು.

"ಯಾರನ್ನ?" ಎಂದ ವೀರಣ್ಣ.

"ರಾಯರನ್ನ," ಎಂದ ಬಸಪ್ಪ. ರಾಮಚಂದ್ರನನ್ನು ಸಂಬೋಧಿಸುತ್ತಿದ್ದುದು ಹಾಗೆ.

ಎದೆ ಡಬಡಬನೆ ಬಡಿದುಕೊಳ್ಳುತ್ತಿದ್ದ ಹಾಗೆ ರಾಮಚಂದ್ರ ಎದ್ದು, ಆಗತಾನೆ ನಿದ್ದೆಯಿಂದೆದ್ದವರಂತೆ ತೂಗಾಡುತ್ತಾ, ಮತ್ತೆ ಮೆಟ್ಟಲುಗಳನ್ನಿಳಿದು ಸಂಚಾಲಕರ ಕೊಟಡಿಯಲ್ಲಿ ಅಡಿಯಿರಿಸಿದ.

"ವಿಜಯ ವಿಮಾ ಕಂಪನಿ"ಯ ಸಂಚಾಲಕ ರಾವ್‌ಸಾಹೇಬ್ ಲಿಂಗಪ್ಪ

ನವರು ಮುಖವನ್ನು ಮೇಲಕ್ಕೆತ್ತದೆ, ದೃಷ್ಟಿಯನ್ನಷ್ಟೆ ರಾಮಚಂದ್ರನ ಕಡೆ ತಿರುಗಿಸಿ ದರ್ಪಪೂರಿತ ಸ್ವರದಲ್ಲಿ ನುಡಿದರು :

" ನಿಮಗೆ ಎಷ್ಟು ಸಾರಿ ವಾರ್ನ್ ಮಾಡಿದರೂ ಉಪಯೋಗವಾಗಲಿಲ್ಲ. ಆಫೀಸಿನ ಕೆಲಸದ ಕಡೆ ನಿಮಗೆ ಲಕ್ಷ್ಯವೇ ಇದ್ದ ಹಾಗೆ ಕಾಣುವದಿಲ್ಲ. ಯಾವಾಗಲೂ ತಡಮಾಡೇ ಬರೂದು...."

" ಕ್ಷಮಿಸಬೇಕು ಸಾಹೇಬರೆ. ಮಳೆಯಲ್ಲಿ ಸಿಕ್ಕದ್ದರಿಂದ ಐದು ಮಿನಿಟು ತಡವಾಯ್ತು."

" ನಿಮ್ಮೊಬ್ಬರ ಮ್ಯಾಲೇ ಬೀಳ್ತದೇನೋ ಮಳೆ. ನಮ್ಮ ಮ್ಯಾಲ ಬೀಳುವದಿಲ್ಲೇನು ಅದು ?" ಸಾಹೇಬರ ದನಿಯಲ್ಲಿ ತೀಕ್ಷ್ಣ ಅಣಕವಿತ್ತು.

" ನಮ್ಮ ಹಾಗೆ ನಡೆಯುತ್ತ ಬರುವದಿಲ್ಲ ನೀವು. ಆಫೀಸಿನ ಕಾರಿನಲ್ಲಿ ಬರುತ್ತೀರಿ," ಎಂದು ಹೇಳಬೇಕೆನ್ನಿಸಿತು ರಾಮಚಂದ್ರನಿಗೆ. ಅನ್ನಿಸಿದುದೆಷ್ಟೊ ಅಷ್ಟೆ. ಸಾಹೇಬನಿಗೆ ಅಂಥ ಮಾತು ಆಡುವುದು ಸಾಧ್ಯವೆ ?

" ಮಳೆಗಾಲದಲ್ಲಿ ಯಾರೂ ಆಫೀಸಿಗೆ ಬರೂದೇ ಇಲ್ಲೇನೊ. ಕೊಡೆ ಇಟ್ಟು ಕೊಂಡೀರೋ ಇಲ್ಲೋ ?" ಮತ್ತೆ ಕೇಳಿದರು ಸಾಹೇಬರು.

" ಅ....ಹಂ....ಇಲ್ಲ....ಇಲ್ಲ...." ಎಂದು ತೊದಲಿದ ರಾಮಚಂದ್ರ.

" ಯಾಕೆ ?"

" ಎಂಭತ್ತು ರೂಪಾಯಿ ಸಂಬಳದಲ್ಲಿ ಕೊಡೆ ಕೊಂಡುಕೊಳ್ಳುವದಾದರೂ ಹ್ಯಾಗೆ ? ಒಂದು ಕೊಡೆಗೆ ಹದಿನೈದು ರೂಪಾಯಿಯಾಗುತ್ತದೆ ಈಗ," ಎಂದು ಹೇಳಬೇಕೆನ್ನಿಸಿತು. ಅನ್ನಿಸಿದುದೆಷ್ಟೊ ಅಷ್ಟೆ. ರಾಮಚಂದ್ರ ಮೌನವಾಗಿ ನಿಂತು ಕೊಂಡಿದ್ದ.

" ಹೋಗಿರಿ. ಇನ್ನೊಮ್ಮೆ ತಡಮಾಡಿದಿರೆಂದರೆ ನೆಟ್ಟಗಾಗುವದಿಲ್ಲ ನೋಡಿರಿ," ಎಂದು ನುಡಿದು ಸಾಹೇಬರು "ಮ್ಯಾನೇಜರ್," ಎಂದು ಕೂಗಿದರು. ಗುರುಬಸಪ್ಪ ಧಾವಿಸಿ ಬಂದು ಕೈ ಹಿಸುಕಿಕೊಳ್ಳುತ್ತ ನಿಂತು ಕೊಂಡ.

" ಈ ತಿಂಗಳು ಇವರ ಸಂಬಳದಲ್ಲಿ ಒಂದು ರೂಪಾಯಿ ಕಟ್ ಮಾಡಿರಿ. ತಡಮಾಡಿ ಬಂದದ್ದಕ್ಕೆ ಫೈನ್ ಹಾಕಿದ್ದೇನೆ."

" ಆಗಲಿ ಸಾಹೇಬರೆ. ಹಿ ಹಿ ಹ್ಹಿ....ಹಿ ಹಿ ಹ್ಹಿ...." ಎಂದ ಗುರುಬಸಪ್ಪ.

ರಾಮಚಂದ್ರ ತಲೆ ತಗ್ಗಿಸಿಕೊಂಡು ಹೊರಟುಹೋದ. ಎಂಭತ್ತು ರೂಪಾಯಿಗಳಲ್ಲಿ ಒಂದು ರೂಪಾಯಿ ಹೋಯಿತು. ತನ್ನಂಥವನಿಗೆ ಒಂದು ರೂಪಾಯಿಯೂ ಬಹಳ ಮಹತ್ವದ್ದು. ಸಂಸಾರದ ಖರ್ಚು, ತಮ್ಮ ಮತ್ತು ತಂಗಿಯರ ವಿದ್ಯಾಭ್ಯಾಸದ ಖರ್ಚು, ತಂಗಿಗೆ ವರ ಹುಡುಕಲು ಅಲೆದಾಟದ ಖರ್ಚು....ಒಂದೇ, ಎರಡೇ? ತನ್ನ ಎಂಬತ್ತು ರೂಪಾಯಿ, ತಂದೆಯ ವಿಶ್ರಾಂತಿ ವೇತನ ನಲವತ್ತು ರೂಪಾಯಿ. ನೂರಿಪ್ಪತ್ತು ರೂಪಾಯಿಗಳಲ್ಲಿ ಈ ಎಲ್ಲ ಖರ್ಚುಗಳೂ ನಡೆಯಬೇಕು. ಅದರಲ್ಲೂ ನಗರವಾಸ. ತುಟ್ಟಿಯ ಕಾಲ. ಕಾಳು ಕಡ್ಡಿ, ಸೌದೆ, ಹಾಲು, ಬಟ್ಟೆ ಎಲ್ಲವೂ ತುಟ್ಟಿ. ತಿಂಗಳಿಗೆ ಹದಿನೈದು ರೂಪಾಯಿ ಮನೆಬಾಡಿಗೆಗೇ ಹೋಗುತ್ತದೆ. ತಂದೆಗೆ ಮತ್ತೊಂದು ಅಂಗಿಯಿಲ್ಲ, ತಮ್ಮನಿಗೆ ಮತ್ತೊಂದು ಕೋಟಿಲ್ಲ, ತಂಗಿಗೆ ಮತ್ತೆರಡು ಸೀರೆಗಳಿಲ್ಲ, ತನ್ನ ಹೆಂಡತಿಯ ಮಾತಂತಿರಲಿ. ಅವಳು ಮನೆಯಲ್ಲಿಯೆ ಇರುವಾಕೆ. ಅವಳದು ಹೇಗೂ ನಡೆದೀತು. ಕಾಲೇಜಿಗೆ ಹೋಗುವ ಶಾಂತಳಿಗೆ ಇನ್ನೆರಡು ಸೀರೆಗಳಾದರೂ ಅವಶ್ಯವಾಗಿ ಬೇಕು.

ಸೀರೆ....

ರಾಮಚಂದ್ರ ಮನಸ್ಸಿನಲ್ಲಿಯೆ ನಗತೊಡಗಿದ.

ಸೀರೆ ಬೇಕು, ರವಿಕೆ ಬೇಕು, ಚಪ್ಪಲಿ ಬೇಕು, ಒಡವೆಗಳೂ ಬೇಕು. ಮುಖ್ಯವಾಗಿ ಒಂದು ವರ ಬೇಕು.

ಹದಿನೇಳು ಮುಗಿಯುತ್ತ ಬಂತು ಶಾಂತಾಗೆ. ಋತುಮತಿಯಾದುದಕ್ಕೆ ಆಗಲೆ ಮೂರು ವರ್ಷಗಳಾಯಿತು. ತನಗಿಂತಲೂ ಎತ್ತರವಾಗಿ ಬೆಳೆದಿದ್ದಾಳೆ. ಅವಳ ಮೈ ನೋಡಿದರೆ ಭಯವಾಗುತ್ತದೆ. ನೆರೆಹೊರೆಯ ಜನ ನಾಲ್ಕೈದು ವರ್ಷಗಳಿಂದಲೂ ನಗುತ್ತಿದ್ದಾರೆ, ಅವಳನ್ನು ಕಂಡು. "ಈ ದರಿದ್ರರ ಹುಡುಗೀನ್ನ ಯಾರು ಕಟ್ಟಿಕೋತಾರೆ ಬಿಡಿರಿ!" ಎಂದು ಅಣಕವಾಡುತ್ತಿದ್ದಾರೆ.

ಕುರ್ಚಿಯಲ್ಲಿ ದೇಹವನ್ನು ಚೆಲ್ಲಿ ರಾಮಚಂದ್ರ, ಮೇಜಿನ ಮೇಲಿನ ಫೈಲನ್ನು ತಿರುವತೊಡಗಿದ. ಫೈಲಿನಲ್ಲಿದ್ದ ಕಾಗದಗಳ ಮೇಲೂ ತಂಗಿಯ ಮುಖವೇ ಅವನಿಗೆ ಕಾಣಿಸತೊಡಗಿತು. ಕೋಟಿನ ಜೇಬಿನಲ್ಲಿದ್ದ ಕಾಗದವನ್ನು ಮೆಲ್ಲಗೆ ಹೊರದೆಗೆದು ಮತ್ತೊಂದು ಸಲ ಓದಿಕೊಂಡ. ಆ ದಿನ ಬೆಳಿಗ್ಗೆಯಷ್ಟೆ

ಕೈಸೇರಿದ ಕಾಗದ ಅದು. ದೂರದ ರೈಲ್ವೆ ನಿಲ್ದಾಣವೊಂದರಲ್ಲಿ ಅಸಿಸ್ಟಂಟ್ ಸ್ಟೇಶನ್ ಮಾಸ್ತರಾಗಿದ್ದ ಅವನ ಗೆಳೆಯ ಸೇತುರಾಮ ಬರೆದಿದ್ದುದು. ತನ್ನ ತಂಗಿಗೊಬ್ಬ ಯೋಗ್ಯ ವರನನ್ನು ಹುಡುಕಿಕೊಡಬೇಕೆಂದು ತನ್ನ ಸ್ನೇಹಿತರಿಗೆಲ್ಲ ಬಿನ್ನವಿಸಿಕೊಂಡಿದ್ದ ಹಾಗೆ ರಾಮಚಂದ್ರ, ಸೇತುರಾಮನನ್ನೂ ಕೇಳಿಕೊಂಡಿದ್ದ. " ನೋಡೋಣ, ಯತ್ನಿಸುತ್ತೇನೆ," ಎಂದು ಹೇಳಿದ್ದ ಸೇತುರಾಮ ಮಾತುಕೊಟ್ಟ ಮೇರೆಗೆ ಅಲ್ಲಿ ಇಲ್ಲಿ ಯತ್ನಿಸಿ ಒಂದು ಕಡೆ ಒಬ್ಬ ವರನನ್ನು ಕಂಡು ಗೆಳೆಯನಿಗೆ ಪತ್ರ ಬರೆದಿದ್ದ.

"ಯಾರ ಪತ್ರ ರಾಮಚಂದ್ರರಾವ್ ?" ಎಂದು ಸಹಜವಾಗಿ ಕೇಳಿದ ವೀರಣ್ಣ.

"ಇದೇ? ನೋಡಿರಿ, ಗೊತ್ತಾಗುತದೆ," ಎಂದು ಅದನ್ನು ವೀರಣ್ಣನ ಕೈಗೆ ಕೊಟ್ಟ ರಾಮಚಂದ್ರ.

ವೀರಣ್ಣ ಕಾಗದವನ್ನೋದಿ ನೋಡಿ, "ಸ್ಥಳ ಏನೋ ಚಲೋದಿದ್ದಾಂಗ ಕಾಣುತ್ತದೆ. ಹುಡುಗನೂ ಕಲಿತವನಿದ್ದಾನೆ. ಏನಡ್ಡಿಯಿಲ್ಲ." ಎಂದು ನುಡಿದ.

"ಅದೆಲ್ಲಾ ಸರೀರಿ. ಆದರೆ ವರದಕ್ಷಿಣಾದ್ದು ಒಂದು ದೊಡ್ಡ ಪ್ರಶ್ನೆ ಬರುತ್ತದಲ್ಲ? ಕಲಿತವರಿದ್ದಷ್ಟೂ ಅವರ ಕಿಮ್ಮತ್ತು ಹೆಚ್ಚು."

"ಹೂಂ. ಅದೂ ಖರೇ."

"ತೋರಿಸುವದಕ್ಕೆ ಕರಕೊಂಡು ಬರ್ರಿ ಅಂತ ಬರೆದಾರೆ – ರಜಾ ಒಂದು ಸಿಗಬೇಕಲ್ಲ ನನಗೆ? ರಜಾ ಕೊಟ್ಟು ಕೊಟ್ಟು ಸಾಹೇಬರಿಗೂ ಬೇಸರ ಬಂದಿರಬೇಕು."

"ಏನು ಉಪಕಾರ ಮಾಡ್ತಾರೇನು ನಿಮಗೆ ರಜಾ ಕೊಟ್ಟು? ಹಕ್ಕಿನ ರಜಾ ಅದೆ. ತಗೊಳ್ಳರಿ."

"ಹಕ್ಕಿನ ರಜಾ ಎಲ್ಲಾ ಎಂದೋ ತೀರಿಹೋಗಿದೆ. ಈಗ ಜಡ್ಡು ಗಿಡ್ಡು ಅಂತ ನೆಪಾ ಹೇಳಿ ತಪ್ಪಿಸಿಕೋಬೇಕು. ಅದೂ ಸುಲಭ ಅಲ್ಲ. ಡಾಕ್ಟರ ಸರ್ಟಿಫಿಕೇಟು ತೋರಿಸಬೇಕಾಗುತ್ತದೆ ಸಾಹೇಬರಿಗೆ."

"ಬಸ್ಯಾ, ಏ ಬಸ್ಯಾ," ಕೆಳಗಿನಿಂದ ಸಾಹೇಬರು ಕೂಗುವುದು ಕೇಳಿಸಿತು. ಸಿಪಾಯಿ ಬಸಪ್ಪ ಅವಸರದಿಂದ ಮೆಟ್ಟಲು ಇಳಿದು ಸಾಹೇಬರ

ಕೊಟಡಿಗೆ ಧಾವಿಸಿದ. ರಾಮುಚಂದ್ರ ಮಾತು ನಿಲ್ಲಿಸಿ ಕಚೇರಿಯ ಕೆಲಸದಲ್ಲಿ ಮನಸ್ಸು ತೊಡಗಿಸಲು ಯತ್ನಿಸತೊಡಗಿದ.

ಬಸಪ್ಪ ಕೆಳಗಡೆ ಹೋಗಿದ್ದವನು ಮತ್ತೆ ಮೇಲೆ ಬಂದು ಸಾಹೇಬರ ಚೀಟಿಯೊಂದನ್ನು ರಾಮುಚಂದ್ರನೆದುರಿಗಿರಿಸಿದ. ಸಾಹೇಬರು ಸ್ವಲ್ಪದರಲ್ಲಿಯೆ ಅಪ್ಪಣೆ ವಿಧಿಸಿದ್ದರು!

"ಈ ದಿನ ನೀವು ಒಂದು ಗಂಟೆ ಹೆಚ್ಚು ಕೆಲಸಮಾಡಿ ಏಳು ಐದಕ್ಕೆ ಆಫೀಸಿನಿಂದ ಹೋಗಬೇಕು."

ದಿನವೂ ಕಚೇರಿಯ ಕೆಲಸ ಮುಗಿಯುವುದು ಆರು ಗಂಟೆಗೆ. ಇಂದು ಒಂದು ಗಂಟೆ ಹೆಚ್ಚಾಯಿತು.

—ಒಂದು ತಾಸು ಹೆಚ್ಚಿನ ಕೆಲಸ.

—ಒಂದು ರೂಪಾಯಿ ದಂಡ.

ರಾಮುಚಂದ್ರನ ಮೈಯೆಲ್ಲವೂ ಉರಿಯತೊಡಗಿತು. ತನ್ನನ್ನಿವರು ಪೀಡಿಸುವುದಕ್ಕೊಂದು ಮಿತಿಯೇ ಇಲ್ಲವಲ್ಲ. ತಾನು ಜನಿವಾರದವನೆಂಬ ಒಂದೇ ಒಂದು ಕಾರಣದಿಂದಾಗಿ ತನಗಿಂಥ ಕಿರುಕಳ. ಗುರುಬಸಪ್ಪ, ಲಿಂಗಪ್ಪ, ಇಬ್ಬರೂ ಭಯಂಕರ ಜಾತ್ಯಂಧರು. ಇಂಥವರ ಕೈಕೆಳಗೆ ಕೆಲಸಮಾಡುವುದಕ್ಕಿಂತ ಕೂಲಿಮಾಡಿ ಹೊಟ್ಟೆ ಹೊರೆಯುವುದೇ ಮೇಲು. ಆದರೆ....ತಾನು ಜನಿವಾರದವ. ಉಚ್ಚ ಕುಲದವ. ಬ್ರಾಹ್ಮಣ. ಕೂಲಿ ಮಾಡಬೇಕೆನ್ನಿಸಿದರೂ ಮಾಡುವಂತಿಲ್ಲ. ಶಾರೀರಿಕ ಶ್ರಮದ ಕೆಲಸಕ್ಕೆ ಅವಶ್ಯವಿರುವ ಶಕ್ತಿಯೂ ತನ್ನಲ್ಲಿಲ್ಲ. ಅಂಥ ಕೆಲಸಗಳಿಗೆ ಬಗ್ಗುವ ಶರೀರವೇ ಅಲ್ಲ ತನ್ನದು. ಕಾಯ ಕಷ್ಟವನ್ನು ತಡೆದುಕೊಳ್ಳಬಲ್ಲ ರಕ್ತವೂ ತನ್ನದಲ್ಲ. ಬುದ್ಧಿಜೀವಿಗಳಾಗಿ, ಅವರಿವರ ನೌಕರರಾಗಿ ಬಾಳುವುದೇ ತಮ್ಮ ಜಾತಿಯ ಹಣೆಬರಹವೊ ಏನೊ ಯಾರು ಬಲ್ಲರು. ಈ ವಿಮಾ ಕಂಪನಿ....ಇದರ ಸಂಚಾಲಕ....ಇದರ ಮ್ಯಾನೇಜರ್....

ರಾಮುಚಂದ್ರ ಹಾಗೆ ಯೋಚಿಸುತ್ತಿದ್ದುದು ಅದೇ ಮೊದಲ ಸಲವೇನೂ ಅಲ್ಲ. ರಾವ್‌ಸಾಹೇಬ್ ಲಿಂಗಪ್ಪ ಕಂಪನಿಯ ಸಂಚಾಲಕತ್ವ ವಹಿಸಿ ಕೊಂಡಂದಿನಿಂದ ಆ ರೀತಿ ಯೋಚಿಸಿ ಬೇಸರಪಟ್ಟುಕೊಳ್ಳುವುದು ರಾಮು ಚಂದ್ರನಿಗೆ ನಿತ್ಯವಿಧಿಯಾಗಿ ಪರಿಣಮಿಸಿದೆ. ದಿನವೂ ಒಂದಿಲ್ಲೊಂದು ತಕರಾರು

ಇದ್ದೇ ಇರುತ್ತದೆ. ತನ್ನ ಕೆಲಸದಲ್ಲಿ ಏನಾದರೊಂದು ತಪ್ಪು ಹುಡುಕುತ್ತಲೇ ಇರುತ್ತಾರೆ – ಮ್ಯಾನೇಜರ್, ಸಾಹೇಬ ಇಬ್ಬರೂ. ನಿತ್ಯವೂ ಸಂಜೆ ಕಚೇರಿ ಯಿಂದ ಹೊರಡುವಾಗಲೆಲ್ಲ ತಲೆ ಕಾಯ್ದು ಬಿಸಿಯಾಗಿರುತ್ತದೆ. ಮನೆ ಯಲ್ಲಾದರೂ ಅದು ಶಾಂತವಾಗುವಂತಿದ್ದರೆ....! ಅದೂ ಸಾಧ್ಯವಿಲ್ಲ. ಮನೆಯ ಹೊಸತಿಲಲ್ಲಿ ಅಡಿಯಿರಿಸಿದೊಡನೆ ಸಂಸಾರದ ಸಮಸ್ಯೆಗಳು. ತಂಗಿಯ ವಿವಾಹದ ಚಿಂತೆ....

ರಾಮಚಂದ್ರ ಯಂತ್ರದಂತೆ ಕೆಲಸ ಮಾಡುತ್ತಲಿದ್ದ. ಕೆಲಸ ಮಾಡು ತ್ತಿದ್ದಾಗ ಬೇರೆ ವಿಚಾರಗಳನ್ನು ತಲೆಗೆ ಹಾಕಿಕೊಳ್ಳಬಾರದು. ಅದೆಲ್ಲ ಸರಿಯೆ. ಆದರೆ, ವಿಚಾರಗಳು ಬರುವುದೇನೂ ನಿಲ್ಲುವುದಿಲ್ಲವಲ್ಲ. ಅದಕ್ಕೇನು ಮಾಡ ಬೇಕು? ಯಂತ್ರದ ಹಾಗೆಯೆ ಮಾನವನೂ ಬುದ್ಧಿ, ಮೆದುಳು, ಮನಸ್ಸು, ಹೃದಯಗಳಿಲ್ಲದವನಾಗಿದ್ದರೆ ಒಳ್ಳೆಯದಾಗುತಿದ್ದಿತೇನೊ....

ಅಂದು, ಅಪರಾಹ್ನದ ಬಿಡುವಿನಲ್ಲಿ ಎಂದಿನಂತೆ ಚಹಕ್ಕೆ ಹೋಗಲೂ ಅವನಿಗೆ ಮನಸ್ಸು ಬರಲಿಲ್ಲ.

"ಬರ್ರಿ, ರಾಮಚಂದ್ರರಾವ್. ಹೋಗಿ ಬರೋಣ," ಎಂದು ವೀರಣ್ಣ ಎರಡು ಸಲ ಒತ್ತಾಯಮಾಡಿ ಕರೆದರೂ ಆತ ತನ್ನ ಸ್ಥಳದಿಂದ ಕದಲಲಿಲ್ಲ. "ನೀವು ಹೋಗಿ ಬರ್‍ರಿ ವೀರಣ್ಣಾ," ಎಂದಿಷ್ಟೆ ನುಡಿದು ಮೌನವಾಗಿ ಕೆಲಸದಲ್ಲಿ ತೊಡಗಿದ.

"ನೀವು ಹೀಗೆಲ್ಲಾ ಮಾಡಿದರೆ ತಲೆ ಕೆಡಿಸಿಕೊಳ್ಳುತ್ತೀರಿ." ಎಂದ ವೀರಣ್ಣ.

"ಈಗಲಾದರೂ ಅದು ನೆಟ್ಟಗಿರುವದು ಅಷ್ಟರಲ್ಲೇ ಇದೆಯಲ್ಲ!" ಎಂದ ರಾಮಚಂದ್ರ.

# ೨

ಆರು ಗಂಟೆಯಾಗುತ್ತಲೂ ಕಾರಕೂನರು ಒಬ್ಬೊಬ್ಬರಾಗಿ ಎದ್ದು ಹೊರಟುಹೋದರು. ಅವರು ಹೋಗುವುದನ್ನು ನೋಡಿಯೂ ನೋಡದವನಂತೆ ರಾಮುಚಂದ್ರ ತನ್ನ ಕೆಲಸದಲ್ಲಿ ತೊಡಗಿಕೊಂಡಿದ್ದ. ಲೆಕ್ಕದ ಪುಸ್ತಕದಲ್ಲಿನ ಲೆಕ್ಕವನ್ನು ಬಾಯಿಗೂಡಿಸುತ್ತಿದ್ದ ವೀರಣ್ಣನೊಬ್ಬ ಮಾತ್ರ ಇನ್ನೂ ತನ್ನ ಕೆಲಸ ಮುಂದುವರೆಸಿದ್ದ.

" ಟೈಂ ಆಯಿತಲ್ಲ ವೀರಣ್ಣಾ ?" ಎಂದ ರಾಮುಚಂದ್ರ.

" ಆಗಲಿ. ಇಂದು ಇದೊಂದು ಕೆಲಸ ಮುಗಿಸಿಯೇ ಹೋಗಬೇಕೆಂತ ಮಾಡಿದೇನೆ," ಎಂದ ವೀರಣ್ಣ.

ಕೆಳಗಡೆ ಪಡಸಾಲೆಯಲ್ಲಿದ್ದ ಗಡಿಯಾರದಲ್ಲಿ ಏಳು ಗಂಟೆಯಾದುದು ಕೇಳಿಸುವವರೆಗೂ ಅವರಿಬ್ಬರೂ ತಮ್ಮ ತಮ್ಮ ಪುಸ್ತಕಗಳಲ್ಲಿ ಲಕ್ಷ್ಯ ತೊಡಗಿಸಿದ್ದರು. ಗಡಿಯಾರ ಏಳರ ಗಂಟೆ ಬಾರಿಸುತ್ತಲೂ ಸಿಪಾಯಿ ಬಸಪ್ಪ ಅಟ್ಟವನ್ನೇರಿ ಬಂದು ಕಾರಕೂನರ ಕೊಟಡಿಯ ಬಾಗಿಲು ಮುಚ್ಚುವ ಸಿದ್ಧತೆಗೆ ತೊಡಗಿದ.

" ಸಾಹೇಬರು ಹೋದರೇನು ಬಸಪ್ಪಾ ?" ವೀರಣ್ಣ ಕೇಳಿದ.

" ಇಲ್ಲರಿ. ಇನ್ನೂ ಅದಾರ."

" ಮ್ಯಾನೇಜರು ?"

" ಅವರೂ ಅದಾರ."

ತಾನು ಏಳು ಐದರವರೆಗೆ ಕಚೇರಿಯಲ್ಲಿದ್ದುದನ್ನು ಕಂಡು ಮನವರಿಕೆ ಮಾಡಿಕೊಂಡು ಹೋಗುವ ಉದ್ದೇಶದಿಂದಲೇ ಅವರಿಬ್ಬರೂ ಕಾಯ್ದು ಕುಳಿತಿರ ಬೇಕೆಂದು ರಾಮಚಂದ್ರನಿಗೆನ್ನಿಸದಿರಲಿಲ್ಲ. ಅವನ ತುಟಿಗಳ ಮೂಲೆಗಳಲ್ಲಿ ವಿಚಿತ್ರ ನಗೆಯ ತೆರೆಯೊಂದು ಕಾಣಿಸಿಕೊಂಡು ಮಾಯವಾಯಿತು. ವೀರಣ್ಣ ಅದನ್ನು ಗುರುತಿಸಿ ಮುಗುಳ್ನಗೆ ಬೀರಿದನಷ್ಟೆ. ಮಾತನಾಡಲಿಲ್ಲ.

ಮತ್ತೆ ಐದು ನಿಮಿಷ ತಡೆದು ಅವರಿಬ್ಬರೂ ಮೆಟ್ಟಲುಗಳನ್ನಿಳಿದು ಕಚೇರಿಯನ್ನು ತ್ಯಜಿಸಿ ಹೊರಡುತ್ತಿದ್ದ ಹಾಗೆ ಲಿಂಗಪ್ಪನವರು ವೀರಣ್ಣನನ್ನು ಕಂಡು ಕೊಂಚ ವಿಸ್ಮಿತರಾಗಿ, ಅವನನ್ನು ಕೂಗಿದರು.

" ನೀವ್ಯಾಕೆ ನಿಂತೀರಿ ಇಷ್ಟು ಹೊತ್ತು ?"

" ಕೆಲಸ ಮುಗಿಸಬೇಕಾಗಿತ್ತು. ಅದಕ್ಕಾಗಿ," ಎಂದು ಶಾಂತ ಸ್ವರದಲ್ಲಿ ಉತ್ತರವಿತ್ತ ವೀರಣ್ಣ.

" ಆಫೀಸಿನ ನಿಯಮಗಳಂತೆ ನಡಕೊಳ್ಳಬೇಕು ನೀವು. ತಡಮಾಡಿಯೂ ಬರಬಾರದು. ತಡಮಾಡಿಯೂ ಹೋಗಬಾರದು," ಎಂದರು ಲಿಂಗಪ್ಪ. ಅವರ ಮನಸ್ಸಿನಲ್ಲಿ ಯಾವುದೊ ಸಂದೇಹ ಮೂಡಿದ್ದಿತು.

ವೀರಣ್ಣ ತುಟಿಗಳಲ್ಲೇ ನಗುತ್ತಾ ಹೊರಟುಬಿಟ್ಟ.

ಅವರಿಬ್ಬರೂ ಕಚೇರಿಯ ಮೆಟ್ಟಲುಗಳನ್ನಿಳಿದು ಹೋಗುತ್ತಲೂ ಗುರುಬಸಪ್ಪ ಹೇಳಿದ :

" ಈ ವೀರಣ್ಣಂದು ಬಹಳ ಅಧಿಕಪ್ರಸಂಗ ನೋಡಿರಿ ಸಾಹೇಬರೆ. ನಿಮ್ಮ ಮಾತೂ ಅಲಕ್ಷ್ಯ ಅವನಿಗೆ."

" ಹೌದು, ಹೌದು. ಬಹಳ ಸೊಕ್ಕು," ಎಂದರು ಲಿಂಗಪ್ಪ.

" ಆ ಜನಿವಾರದವನನ್ನು ಇವನೇ ಏರಿಸಿ ಕೂಡಿಸಿದ್ದಾನೆ ನೋಡಿರಿ."

" ಹೌದು, ಹೌದು. ಹಾಗೇ ಅಂತ ಕಾಣುತ್ತದೆ. ಇವರಿಬ್ಬರೂ ಸೇರಿ ಏನೋ ಮಸಲತ್ತು ಹೂಡಿರಬೇಕು. ಅದಕ್ಕೇ ಇವತ್ತು ತನ್ನ ಕೆಲಸವಿರದಿದ್ದರೂ ಕೂತಿದ್ದ ಏಳು ಗಂಟೆಯವರೆಗೆ," ಎಂದರು ಲಿಂಗಪ್ಪ.

" ನಮ್ಮವರೇ ನಮಗೆ ವಿರುದ್ಧ ಆದರೆ ಹ್ಯಾಗೆ ನೋಡಿರಿ," ಎಂದ ಗುರುಬಸಪ್ಪ.

" ಇಂಥವರು ಒಬ್ಬಿಬ್ಬರು ಪಿತೂರಿಗಳು ಇರೂದರಿಂದಲೇ ಆ ಜನಿವಾರ

ದವರು ಮೂಗು ಮೇಲೆ ಮಾಡಿಕೊಂಡು ಮೆರೆಯೋದು. ಎಲ್ಲಾ ಸಂಸ್ಥೆಗಳು ಅವರ ಕೈಯೊಳಗೆ. ಎಲ್ಲಾ ಬ್ಯಾಂಕುಗಳು, ಎಲ್ಲಾ ಕಂಪನಿಗಳು ಅವರ ಕೈಯೊಳಗೆ. ಏನೋ ಇದೊಂದು ಇನ್ಶ್ಯೂರನ್ಸ್ ಸಂಸ್ಥಾ ಇದೆ ನಮ್ಮದು. ಇದರೊಳಗೂ ತಮ್ಮ ಬೇಳೆ ಬೇಯಿಸಿಕೊಳ್ಳೊದಕ್ಕೆ ಪ್ರಯತ್ನಮಾಡುವದನ್ನು ಬಿಟ್ಟಿಲ್ಲ ಅವರು...."

"ನೀವು ಅಧಿಕಾರ ವಹಿಸಿಕೊಂಡಂದಿನಿಂದ ಅವರ ಆಟ ಏನೂ ನಡೀದ ಹಾಗೆ ಆಗಿದೆ, ಬಿಡಿರಿ," ಎಂದ ಗುರುಬಸಪ್ಪ.

ಹೆಮ್ಮೆಯಿಂದ ಲಿಂಗಪ್ಪನವರ ಮುಖವುಬ್ಬಿತು. ಕುರ್ಚಿಯಿಂದೇಳುತ್ತಾ ಅವರೆಂದರು :

"ನನ್ನ ಮುಂದೆ ಈ ರಾಯರ ಆಟ ನಡೀಬೇಕಾದರೂ ಹ್ಯಾಗೆ ಗುರುಬಸಪ್ಪ? ನನ್ನ ಹೆಸರು ಕೇಳಿದರೆ ಈಗಲೂ ನಡುಗುತ್ತಾರೆ ನಮ್ಮ ಖಾತೆ ಯೊಳಗಿನ ಬ್ರಾಹ್ಮಣ ನೌಕರರು."

ಲಿಂಗಪ್ಪನವರ ಆ ಮಾತಿನಲ್ಲಿ ತಥ್ಯವಿರದಿರಲಿಲ್ಲ. ಅವರು ಸರಕಾರದಲ್ಲಿ ದೊಡ್ಡ ಅಧಿಕಾರಿಗಳಾಗಿದ್ದಾಗ ಅವರ ಕೈಕೆಳಗಿನ ಬ್ರಾಹ್ಮಣ ನೌಕರರಿಗೆಲ್ಲ ಕಾಲರುದ್ರನಂತೆ ಕಾಣಿಸಿಕೊಂಡಿದ್ದರು. ಚಿಕ್ಕ ಪುಟ್ಟ ತಪ್ಪುಗಳಿಗಾಗಿ ಎಷ್ಟೋ ಜನರನ್ನು ಮನೆಗೆ ಕಳಿಸಿದ ಕೀರ್ತಿ ಅವರದಾಗಿತ್ತು. ಎಷ್ಟೋ ಜನರಿಗೆ ಹಿಂಬಡತಿ, ಸಂಬಳ ಕಡಿತಗಳ ಪ್ರಸಾದವೂ ಲಭಿಸಿತ್ತು. ಇಪ್ಪತ್ತು ವರ್ಷಗಳ ಕಾಲ ರಾವಣನಂತೆ ದರಬಾರು ನಡಿಸಿ ಲಿಂಗಪ್ಪನವರು ಅಧಿಕಾರದಿಂದ ನಿವೃತ್ತ ರಾದಾಗ ಅವರ ಖಾತೆಯ ಬ್ರಾಹ್ಮಣ ನೌಕರರೆಲ್ಲ ಸಮಾಧಾನದಿಂದ ಉಸಿರು ಹಾಕಿದ್ದರು. ನಿವೃತ್ತರಾದ ತರುವಾಯವೂ ತಮ್ಮ ದರ್ಪವನ್ನು ಸಡಿಲಿಸಿರಲಿಲ್ಲ ಲಿಂಗಪ್ಪನವರು. ನಿಧಾನವಾಗಿ ಸಾರ್ವಜನಿಕ ಕ್ಷೇತ್ರದಲ್ಲಿ ಅಡಿಯಿರಿಸಿ, "ವಿಜಯ ವಿಮಾ ಕಂಪನಿ"ಯ ಡೈರೆಕ್ಟರ್ ಸ್ಥಾನ ಹಿಡಿದುಕೊಂಡು, ಒಂದೆರಡು ವರ್ಷ ಗಳಲ್ಲಿಯೆ ಅದರ ಸಂಚಾಲಕ ಹುದ್ದೆಗೇರಿದ್ದರು. ಏಳುನೂರು ರೂಪಾಯಿಗಳ ವಿಶ್ರಾಂತಿವೇತನದಿಂದ ಅವರಿಗೆ ಕೊಂಚವೂ ತೃಪ್ತಿಯಿರಲಿಲ್ಲ. ಅಂತೆಯೆ, ಕಂಪನಿಯ ಜನ್ಮಕಾಲದಿಂದಲೂ ಅದರ ಸಂಚಾಲಕರಾಗಿದ್ದುಕೊಂಡು ಅದನ್ನು ಕಟ್ಟಿ ಬೆಳಸಲು ಹಗಲಿರುಳೂ ದುಡಿದಿದ್ದ ಕೋಲಶಾಂತಪ್ಪನವರನ್ನು ಸಂಚಾಲಕ ಸ್ಥಾನದಿಂದ ಓಡಿಸಲು ಅನೇಕ ಕಾರಸ್ಥಾನಗಳನ್ನು ನಡಸಿ, ಡೈರೆಕ್ಟರ್

ಬೋರ್ಡಿನ ಮೇಲೆ ಒತ್ತಡ ತಂದು ಆ ಕಾರ್ಯದಲ್ಲಿ ಯಶಸ್ವಿಯಾಗಿ, ನಾಲ್ಕುನೂರು ರೂಪಾಯಿ ಸಂಬಳದ ಆ ಸ್ಥಾನವನ್ನು ಕೈವಶಪಡಿಸಿಕೊಂಡಿದ್ದವರು ಲಿಂಗಪ್ಪ. ಅಷ್ಟು ಸಂಬಳವಲ್ಲದೆ, ಕಂಪನಿಯ ಕೆಲಸದ ನೆಪದಿಂದ ಅಲ್ಲಿ ಇಲ್ಲಿ ಸುತ್ತಿ ಪ್ರತಿ ತಿಂಗಳೂ ನೂರಿನ್ನೂರು ರೂಪಾಯಿಗಳಷ್ಟು ಭತ್ತೆಯನ್ನೂ ಗಿಟ್ಟಿಸುತ್ತಿದ್ದರು. ಕಂಪನಿಯ ಏಜಂಟರಿಗೆಂದು ಕೊಳ್ಳಲಾಗಿದ್ದ ಮೋಟಾರು ಕಾರನ್ನಂತೂ ತಮ್ಮ ಮನೆಯಲ್ಲಿಯೆ ಇಟ್ಟುಕೊಂಡು ಕಚೇರಿಗೆ ಹೋಗಿ ಬರಲು ಉಪಯೋಗಿಸುತ್ತಿದ್ದರು. ಕಾರಿನ ಡ್ರೈವರನ ಸಂಬಳ, ಪೆಟ್ರೋಲು ಹಾಗು ಇನ್ನಿತರ ಖರ್ಚು ಎಲ್ಲವೂ ಕಂಪನಿಯ ಲೆಕ್ಕಕ್ಕೇ ಬೀಳುತ್ತಿತ್ತು.

ನಾಲ್ಕುನೂರು ರೂಪಾಯಿಗಳ ಸಂಬಳಕ್ಕೆ ತಕ್ಕ ಹಾಗೆ ಅವರಿಗೆ ಕಚೇರಿಯಲ್ಲಿ ತುಂಬ ಕೆಲಸವಾದರೂ ಇದ್ದಿತೇ? ಸಂಚಾಲಕ ಮಾಡಬೇಕಾದ ಕೆಲಸಗಳೇನೋ ಸಾಕಷ್ಟು ಇದ್ದುವಾದರೂ ಲಿಂಗಪ್ಪನವರು ಅವುಗಳನ್ನೆಲ್ಲ ಗಣನೆಗೇ ತೆಗೆದುಕೊಳ್ಳುತ್ತಿರಲಿಲ್ಲ. ಮುಖ್ಯ ಮುಖ್ಯ ಊರುಗಳಿಗೆ ಹೋಗಿ ಪ್ರಭಾವವುಳ್ಳ ಜನರನ್ನು ಕಂಡು ತಮ್ಮ ಕಂಪನಿಯ ವ್ಯವಹಾರವನ್ನು ಹೆಚ್ಚಿಸಲು ಯತ್ನಿಸಬೇಕಾದುದು ಅವರ ಮಹತ್ವದ ಹೊಣೆಯಾಗಿತ್ತು. ಲಿಂಗಪ್ಪನವರಿಗೆ ಮಾತ್ರ ಆ ಹೊಣೆಯ ಅರಿವೇ ಇರಲಿಲ್ಲ. "ಏಜಂಟರಿರುವದಾದರೂ ಯಾತಕ್ಕಾಗಿ? ಕಮಿಶನ್ ಬೇಕಿದ್ದರೆ ಬಿಸ್‌ನೆಸ್ ಮಾಡಿಕೊಡುತ್ತಾರೆ. ಬೇಡವಾದರೆ ಬಿಡುತ್ತಾರೆ. ಸರಕಾರದಲ್ಲಿ ದೊಡ್ಡ ಅಧಿಕಾರಿಯಾಗಿದ್ದು ಸಾವಿರಾರು ಜನರ ಮೇಲೆ ದರಬಾರು ನಡಸಿದ ನನ್ನಂಥವನು ಅಲ್ಲಿ ಇಲ್ಲಿ ಸುತ್ತುವದೂ ಅವರಿವರಿಗೆ ಬಾಯಿ ತೆಗೆಯುವದೂ ಅವಮಾನದ ಸಂಗತಿ," ಎಂದೆಲ್ಲ ಹೇಳಿಕೊಂಡು ಆ ಹೊಣೆಯನ್ನು ಕಡೆಗಣಿಸಿಬಿಟ್ಟಿದ್ದರು. ಮ್ಯಾನೇಜರ್ ಗುರುಬಸಪ್ಪನೂ ಅವರಿಗೆ ತಕ್ಕ ಆಸಾಮಿಯೆ. ಹೆಚ್ಚು ತೊಂದರೆಪಟ್ಟುಕೊಳ್ಳದೆ ಹೆಚ್ಚು ಹಣ ಸಂಪಾದಿಸುವುದೊಂದೇ ಅವನ ಜೀವನದ ಧ್ಯೇಯವಾಗಿತ್ತು. ವಿಮಾ ಕಂಪನಿಯಲ್ಲಿ ಸುಲಭವಾಗಿ ಹಣ ಸಂಪಾದಿಸುವ ಅವಕಾಶಗಳಿಗೇನೂ ಅಭಾವವಿರಲಿಲ್ಲ. ಕಂಪನಿಯಿಂದ ಸಾಲ ಪಡೆಯುವವರಿಂದ ಧಾರಾಳವಾಗಿ ಲಂಚ ತಿನ್ನಲು ಸಾಧ್ಯವಿದ್ದಿತು. ಕೋಲಶಾಂತಪ್ಪನವರು ಸಭ್ಯಗೃಹಸ್ಥರು. ಲಂಚ ರುಶವತ್ತುಗಳೆಂದರೆ ಅವರಿಗಾಗುತ್ತಿರಲಿಲ್ಲ. ಅಂತೆಯೆ, ಅವರು ಕಂಪನಿಯ ಸಂಚಾಲಕರಾಗಿದ್ದಷ್ಟು ಕಾಲವೂ ಗುರುಬಸಪ್ಪ ಲಂಚ ಹೊಡೆಯಲು ಸಾಧ್ಯವಾಗಿರಲಿಲ್ಲ.

ಕೋಲಶಾಂತಪ್ಪನವರು ಹೋಗಿ ಲಿಂಗಪ್ಪನವರು ಬಂದಂದಿನಿಂದ ಗುರು ಬಸಪ್ಪನಿಗೆ ಶುಕ್ರದೆಸೆಗಾರಂಭವಾಗಿತ್ತು. ಲಿಂಗಪ್ಪನವರು ಸ್ತುತಿಪ್ರಿಯ ರೆಂಬುದನ್ನು ಬಲುಬೇಗ ಅರಿತುಕೊಂಡು ಆತ ಅವರನ್ನು ಸದಾಕಾಲವೂ ಹೊಗಳುತ್ತಾ ಅವರ ಪ್ರೀತಿಯನ್ನು ದೊರಕಿಸಿಕೊಂಡಿದ್ದ. ಕಂಪನಿಯಲ್ಲಿನ ತಮ್ಮ ಸ್ಥಾನವನ್ನು ಶಾಶ್ವತವಾಗಿಟ್ಟುಕೊಳ್ಳಲು ಅವನಂಥ ಸಹಾಯಕನೊಬ್ಬನ ಆವಶ್ಯಕತೆಯೂ ಲಿಂಗಪ್ಪನವರಿಗಿದ್ದಿತು. ಅವನನ್ನು ಜೇಬಿಗೆ ಬಿಟ್ಟುಕೊಂಡು ತಮ್ಮ ಇಚ್ಛೆಯ ಮೇರೆಗೆ ಇಡಿಯ ಕಂಪನಿಯನ್ನೆಲ್ಲ ಅವರು ಆಳುತ್ತ ಬಂದಿದ್ದರು. ಅವನೂ ಅವರನ್ನು ತನ್ನ ಜೇಬಿಗೆ ಹಾಕಿಕೊಂಡು ಸಂಬಳದ ಎರಡು ಮೂರು ಪಟ್ಟು ಹಣ ಗಳಿಸುತ್ತ ಬಂದಿದ್ದ.

೩

ರಾಮಚಂದ್ರ ವೀರಣ್ಣ ಕಚೇರಿಯಿಂದ ಹೊರಟ ಕೆಲನಿಮಿಷಗಳಲ್ಲಿ ಮತ್ತೆ ಮಳೆಗಾರಂಭವಾಯಿತು. ವೀರಣ್ಣನ ಬಳಿಯಿದ್ದ ಒಂದು ಕೊಡೆ ಇಬ್ಬರಿಗೂ ಸಾಲುವಂತಿರಲಿಲ್ಲ.

"ತೊಯಿಸಿಕೊಳ್ಳುವದಾದರೂ ಯಾಕೆ? ಸ್ವಲ್ಪ ಚಹ ಕುಡಿದು ಹೋದ ರಾಯಿತು," ಎಂದ ವೀರಣ್ಣ.

ಆ ವೇಳೆಯಲ್ಲಿ ರಾಮಚಂದ್ರನಿಗೆ ಯಾವುದೂ ಬೇಕಾಗಿರಲಿಲ್ಲ. ಸಾಧ್ಯ ವಾದಷ್ಟು ಬೇಗ ಮನೆಗೆ ಹೋಗಿ ವಿರಮಿಸಿಕೊಳ್ಳಬೇಕೆಂದು ಆತ ಯೋಚಿಸುತ್ತಿದ್ದ. ನಗರದ ಹೊರಭಾಗದಲ್ಲಿ ವಿಸ್ತರಣವೊಂದರಲ್ಲಿತ್ತು ಅವನ ಮನೆ.

"ಏನೂ ಬೇಡ ಬಿಡಿರಿ. ಈಗ್ಯಾತಕ್ಕೆ ಚಹ?"

"ಇರಲಿ ಬರ್ರೀ. ಮಧ್ಯಾಹ್ನ ಕೂಡಾ ನೀವು ಚಹಕ್ಕೆ ಬರಲೇ ಇಲ್ಲ," ಎಂದ ವೀರಣ್ಣ.

"ಏನೋ. ಎಲ್ಲಾ ಬಹಳ ಬೇಸರವಾಗಿಬಿಟ್ಟದೆ ನೋಡಿರಿ," ಎಂದ ರಾಮಚಂದ್ರ.

ವೀರಣ್ಣ ಸ್ನೇಹದಿಂದ ರಾಮಚಂದ್ರನ ಭುಜದ ಮೇಲೆ ಕೈಹಾಕಿ ಶಂತೈಸುವ ಸ್ವರದಲ್ಲಿ ಹೇಳಿದ:

"ಬೇಸರವಾಗುವುದೂ ಸಹಜ. ಏನು ಮಾಡೂದು. ಬಂದದ್ದನ್ನೆಲ್ಲಾ ಸಹಿಸಲೇಬೇಕಲ್ಲಾ ರಾಮಚಂದ್ರರಾವ್?"

"ಎಷ್ಟೆಂತ ಸಹಿಸೂದು ಹೇಳಿರಿ. ಸಹಿಸಿ ಸಹಿಸಿ ಸಾಕಾಗಿ ಹೋಯಿತು."

ಸನಿಯದಲ್ಲಿದ್ದ ಬಾಂಬೆ ರೆಸ್ಟುರಾಗೆ ಬಂದು ಕುಳಿತುಕೊಂಡುದಾಯಿತು. ಮಾಣಿ ಬಂದು ನಿಲ್ಲುತ್ತಲೂ ಚಕ್ಕುಲಿ ಚಹಕ್ಕೆ ಹೇಳಿ ವೀರಣ್ಣ ರಾಮಚಂದ್ರನ ಕಡೆ ತಿರುಗಿ,

"ಈ ಸ್ಥಳ ಆದರೂ ಕೂಡಿ ಬಂದರೆ ನಿಮ್ಮ ತ್ರಾಸ ಎಷ್ಟೋ ಕಡಿಮೆ ಯಾಗುತ್ತದೆ," ಎಂದ.

"ಹೌದು. ಹೀಗೆ ಎಷ್ಟು ಸಾರಿ ಅಂದುಕೊಂಡು ಸ್ಥಳ ಹುಡುಕಿಕೊಂಡು ಹೋಗಿ ನಿರಾಶೆಯಿಂದ ಕೈಬೀಸುತಾ ಬಂದಾಯಿತಲ್ಲ ವೀರಣ್ಣ! ಮುಖ್ಯ ಅಂದರೆ ವರಪಕ್ಷಿಣೆ ಕೊಡುವ ಶಕ್ತಿ ನಮಗಿಲ್ಲದಿರುವದೇ ಮುಖ್ಯ ಕಾರಣ."

"ಅವಕ್ಕೇನಾದರೂ ವ್ಯವಸ್ಥೆ ಮಾಡಲಿಕ್ಕಾಗಲಿಕ್ಕಿಲ್ಲೇನು ?"

"ಏನು ಮಾಡೋಣ ಹೇಳಿರಿ ವೀರಣ್ಣಾ. ಇವತ್ತು ನಾಲ್ಕೈದು ಸಾವಿರ ರೂಪಾಯಿ ಯಾರಾದರೂ ಸಾಲ ಕೊಡುವವರು ಸಿಕ್ಕರೆ ಪ್ರಾಣವನ್ನು ಒತ್ತೆ ಇಡಲಿಕ್ಕೂ ತಯಾರಿದೀನಿ ನಾ."

"ಸಾಲ ಕೊಡುವವರು ಪ್ರಾಣವನ್ನು ಎಲ್ಲಿ ನೋಡುತಾರೆ? ಅವರಿಗೆ ಭದ್ರವಾದ ಆಸ್ತಿಯ ಆಧಾರ ಬೇಕು."

"ಹಳ್ಳಿಯಲ್ಲಿದ್ದ ಒಂದು ಹೊಲ ಆಗಲೇ ಹೊರಟು ಹೋಯ್ತು. ಇನ್ನೆಲ್ಲಿಯ ಆಧಾರ ತರೂದು, ಹೇಳಿರಿ."

"ಹೊಲ ಹೋಯಿತೇ? ಯಾತಕ್ಕಾಗಿ?"

"ವೆಂಕಟೇಶ ಶಾಂತಾರ ಶಿಕ್ಷಣದ ಖರ್ಚಿಗೆ– ನನ್ನ ಸಂಬಳದಿಂದ ಅವರ ಫೀ ಕೊಡಲು ಸಾಧ್ಯವೇ ವೀರಣ್ಣ ?"

ಒಂದು ಕ್ಷಣ ಮೌನವಾಗಿದ್ದು ಅನಂತರ ವೀರಣ್ಣನೆಂದ:

"ಇವರಿಬ್ಬರನ್ನೂ ಕಾಲೇಜಿಗೆ ಕಳಿಸುವದರ ಬದಲು ಒಮ್ಮೆಲೆ ಆ ಹೊಲ ಮಾರಿ ತಂಗಿಯ ಮದುವೆ ಮಾಡಿಬಿಟ್ಟಿದ್ದರೆ ಒಳ್ಳೆಯದಾಗುತಿತ್ತೇನೊ."

"ನನಗೂ ಒಂದೊಂದು ಸಾರಿ ಹಾಗನ್ನಿಸುತ್ತದೆ. ಆದರೆ ವೆಂಕಟೇಶಗೆ ಡಿಗ್ರಿ ಪಡೆಯುವ ಆಸೆ ಬಹಳ ಇತ್ತು. ಅವನೊಂದು ಬಿ.ಎ. ಮುಗಿಸಿ ಎಲ್ಲಾದರೂ ಒಂದು ಕೆಲಸ ಹಿಡಿದು ತಂಗಿಯ ಮದುವೆ ಮಾಡಿಯಾನು ಅಂತ ತಂದೆಯವರು ಅವನನ್ನು ಕಾಲೇಜಿಗೆ ಕಳಿಸಿದ್ದಾಯ್ತು."

"ಸರಿ. ಆದದ್ದು ಆಯಿತಲ್ಲ," ಎಂದು ನುಡಿದು, ಮಾಣಿ ತಂದಿಟ್ಟ ಚಕ್ಕುಲಿಯನ್ನು ಬಾಯಿಗಿಟ್ಟುಕೊಂಡು ನುರಿಸುತ್ತ ವೀರಣ್ಣ ಒಂದೆರಡು ನಿಮಿಷ ಮೌನವಾಗಿದ್ದ. ರಾಮಚಂದ್ರನೂ ಮಾತನಾಡದೆ ಚಹ ಸೇವಿಸತೊಡಗಿದ.

ಚಹ ಕುಡಿದು ಮುಗಿಸಿ ವೀರಣ್ಣ ಬೀಡಿ ಹೊತ್ತಿಸಿ ಹೊಗೆಯೆಳೆಯುತ್ತ,

"ಎಂದು ಹೋಗುವವರು ಅಲ್ಲಿಗೆ?" ಎಂದು ಕೇಳಿದ.

"ಮೊದಲು ರಜ ಸಿಗಬೇಕಲ್ಲರೀ?"

"ಈಗ ನೀವು ಕೇಳುತಾ ಕೂತರೆ ಅವರು ರಜ ಕೊಡುತ್ತಾರೇನು? ಮೊದಲೇ ನಿಮ್ಮ ಮೇಲೆ ಸಿಟ್ಟು ಬೆಂಕಿ."

"ಹೌದು. ಮತ್ತೆ ಹ್ಯಾಗೆ ಮಾಡೂದು ಅಂತೀರಿ?"

"ಏನೂ ಇಲ್ಲ. ಜಡ್ಡಾಗಿದೆ ಅಂತ ಚೀಟಿ ಕಳಿಸಿ ಯಾರಿಗೂ ಗೊತ್ತಾಗದ ಹಾಗೆ ಹೋಗಿ ಬಂದುಬಿಟ್ಟರಾಯಿತು. ಬೇರೆ ಹಾದಿಯೇ ಇಲ್ಲವಲ್ಲ?"

"ಇಲ್ಲ. ನಿಜ. ಆದರೂ....ನನಗೆ ಜಡ್ಡಾದದ್ದು ನಿಜವೋ ಸುಳ್ಳೋ ಅಂತ ಪರೀಕ್ಷೆ ಮಾಡುವದಕ್ಕೆ ಸಿಪಾಯಿಯನ್ನು ಮನೆಗೆ ಕಳಿಸಬಹುದಲ್ಲ ಸಾಹೇಬರು?"

"ಕಳಿಸಬಹುದು. ಬಹುದು ಯಾಕೆ, ನಿಶ್ಚಯವಾಗಿಯೂ ಕಳಿಸೇ ಕಳಿಸುತ್ತಾರೆ. ಆದರೂ ಅವನ ಚಿಂತೆಯನ್ನು ಬಿಟ್ಟುಬಿಡಬಹುದು. ಬಸಪ್ಪ ನಮ್ಮ ಕಡೆಗೇ ಇದಾನೆ. ನಮ್ಮ ನಿಮ್ಮ ವಿರುದ್ಧ ಏನೂ ಹೇಳುವದಿಲ್ಲ ಅವ."

"ಪಾಪ. ಅವನೂ ಬಡವ. ನನ್ನಿಂದಾಗಿ ಅವನ ನೌಕರಿಗೆ ಕಲ್ಲು ಬೀಳ ಬಾರದಲ್ಲ?"

"ಏನೂ ಬೀಳುವದಿಲ್ಲ ಬಿಡಿರಿ. ನಾನೆಲ್ಲ ಅದನ್ನು ನೋಡಿಕೊಳ್ತೀನಿ. ನೀವು ಧೈರ್ಯವಾಗಿ ಹೋಗಿಬರ್ರಿ."

"ಡಾಕ್ಟರ ಸರ್ಟಿಫಿಕೀಟು?"

"ಅದಕ್ಕೂ ವ್ಯವಸ್ಥೆ ಮಾಡೋಣ. ನಮ್ಮ ಗೆಳೆಯರು ಕುಲಕರ್ಣಿ ಡಾಕ್ಟರಿದ್ದಾರಲ್ಲ. ಅವರಿಂದ ಕೊಡಿಸಿದರಾಯ್ತು."

"ಜನಿವಾರದವರು ಕೊಟ್ಟ ಸರ್ಟಿಫಿಕೀಟನ್ನೂ ನಂಬುವದಿಲ್ಲಲ್ಲ ಸಾಹೇಬರು?"

ವೀರಣ್ಣ ನಗುತ್ತಾ ಕುರ್ಚಿಯಿಂದೆದ್ದ. ಆ ವೇಳೆಗಾಗಲೆ ಮಳೆ ನಿಂತು ಹೋಗಿದ್ದಿತು.

ರಾಮಚಂದ್ರ ಮನೆಗೆ ಬಂದು ಮುಟ್ಟಿದಾಗ ಒಂಭತ್ತು ಗಂಟೆಯಾಗುತ್ತ ಬಂದಿತ್ತು. ಮಗನ ಬರವನ್ನೆದುರು ನೋಡುತ್ತಾ ಪಡಸಾಲೆಯಲ್ಲಿ ಕುಳಿತಿದ್ದ ಮಧ್ವರಾಯರು ಕೈಯಲ್ಲಿದ್ದ ಭಗವದ್ಗೀತೆಯನ್ನು ಪೆಟ್ಟಿಗೆಯ ಮೇಲಿರಿಸಿ ರಾಮಚಂದ್ರನ ಬಳಲಿದ ಮುಖವನ್ನು ದಿಟ್ಟಿಸುತ್ತಾ,

"ಯಾಕಪ್ಪಾ, ಇಷ್ಟು ತಡವಾಯ್ತು ರಾಮಣ್ಣಾ?" ಎಂದು ಕೇಳಿದರು.

"ಮಳೆಗೆ ಸಿಕ್ಕಿಕೊಂಡಿದ್ದೆನಣ್ಣಾ."

"ವೆಂಕಟೇಶು ಕೂಡ ಇನ್ನೂ ಬಂದಿಲ್ಲ. ಅವನೂ ಮಳೆಗೆ ಸಿಕ್ಕು ಎಲ್ಲೋ ಕೂತಿರಬೇಕು."

ರಾಮಚಂದ್ರ ಮತ್ತೊಂದು ಮಾತನಾಡದೆ ಕೋಟು ಟೊಪ್ಪಿಗೆ ತೆಗೆದು ಗೂಟಕ್ಕೆ ತಗುಲಿಸಿ ಅಡುಗೆಮನೆಗೆ ನಡೆದ.

ಕೈ ಕಾಲು ಮುಖ ತೊಳೆದುಕೊಂಡು ಆತ ಬಚ್ಚಲಿಸಿಂದ ಬರುತ್ತಲೂ ಅವನ ಪತ್ನಿ ಜಾನಕಿ ಕೇಳಿದಳು:

"ಎಲೆ ಹಾಕಲೇನು?"

"ಈಗಲೇ ಬೇಡ. ವೆಂಕಣ್ಣನೂ ಬರಲಿ," ಎಂದಿಷ್ಟೆ ನುಡಿದು ಆತ ಪಡಸಾಲೆಗೆ ಬಂದು, ತಂದೆಯ ಕುರ್ಚಿಯ ಬಳಿಯಲ್ಲಿ ಹಾಸಿದ್ದ ಚಾಪೆಯ ಮೇಲೊರಗಿಕೊಂಡ.

ಐದಾರು ನಿಮಿಷ ಮೌನ. ಅನಂತರ ಮಧ್ವರಾಯರೇ ದನಿಯೆತ್ತಿ ಕೇಳಿದರು:

"ಹಾಗಾದರೇನು ಅಲ್ಲಿಗೆ ಹೋಗಬೇಕೆಂತ ನಿಶ್ಚಯ ಮಾಡಿದಿಯಾ?"

"ಹೂಂ. ಹೋಗಲಿಕ್ಕೇ ಬೇಕಲ್ಲ ಅಣ್ಣಾ. ಆದರೆ ಆಫೀಸಿನಲ್ಲಿ ರಜ ಸಿಕ್ಕುವದಿಲ್ಲ."

"ಅದಂತೂ ಗೊತ್ತೇ ಇದೆಯಲ್ಲ! ಹೆಸರೇ ಲಿಂಗಪ್ಪ. ಇನ್ನು ಜನಿವಾರ ದವರಿಗೆ ರಜಾ ಕೊಡುವ ದೊಡ್ಡ ಮನಸ್ಸು ಅವರಿಗೆ ಹ್ಯಾಗೆ ಬರಬೇಕು? ಹೂಂ. ನಾನಾದರೂ ಹೋಗಿ ಬಂದೇನು ಅಂದರೆ ನನಗೆ ಈ ಸಂಧಿವಾತ ಗಂಟುಬಿತ್ತು. ಎಲ್ಲಾ ಶ್ರೀಹರಿಯ ಇಚ್ಛೆ!" ಎನ್ನುತ್ತಾ ಮಧ್ವರಾಯರು ನಿಟ್ಟುಸಿರುಬಿಟ್ಟರು.

"ನೀನು ಹೀಗೆ ಅಲಕ್ಷ್ಯಮಾಡಬಾರದಣ್ಣ. ಔಷಧ ತೆಗೆದುಕೊಳ್ಳಬೇಕು."

"ಔಷಧ!" ಮಧ್ವರಾಯರು ಶುಷ್ಕನಗೆ ನಕ್ಕು ನುಡಿದರು: "ಈ ಮಯಸ್ಸಿನಲ್ಲಿ ಯಾವ ಔಷಧದಿಂದೇನಾಗುವಹಾಗಿದೆ ರಾಮಣ್ಣಾ? ಸುಮ್ಮನೆ ದುಡ್ಡು ದಂಡ. ಶಾಂತಿಯ ಮದುವೆಯೊಂದು ಆಗಿಬಿಟ್ಟರೆ ಆಯಿತು. ಮುಂದೆ ಶ್ರೀಹರಿಯ ಪಾದವೇ ನನಗೆ ಔಷಧ...."

"ಸೇತುರಾಮನೇನೊ ಬಹಳ ಆಸೆಯಿಂದ ಬರೆದಿದಾನೆ ಅಣ್ಣಾ – ಸ್ಥಳ ಕೂಡ ಬಹಳ ಚಲೋದಂತೆ."

"ಹುಡುಗ ಈ ವರ್ಷ ಬಿ.ಎ.ದಲ್ಲಿದಾನೆ ಅಲ್ಲಾ?"

"ಹೌದು. ಇದೇ ಕೊನೆಯ ವರ್ಷ ಅಂತೆ. ಮನೆಯ ಜಮೀನೂ ಇದೆಯಂತೆ."

"ಇಷ್ಟೆಲ್ಲಾ ಇದೆ ಅಂದ ಮೇಲೆ...." ಎಂದು ಮಧ್ವರಾಯರು ನಿರಾಸೆಯ ದನಿಯಲ್ಲಿ ನುಡಿದು ಅಷ್ಟಕ್ಕೇ ಸುಮ್ಮನಾದರು.

"ಇಷ್ಟೆಲ್ಲಾ ಇದೇ ಅಂದ ಮೇಲೆ ಅದಕ್ಕೆ ತಕ್ಕಂತೆ ವರದಕ್ಷಿಣಾ ಕೊಡ ಬೇಕಾಗುತದೆ ಅವರಿಗೆ," ಎಂದು ತನಗೆ ತಾನೆ ಹೇಳಿಕೊಂಡು ರಾಮಚಂದ್ರ ಆ ವಿಷಯ ಬದಲಿಸಿ,

"ಇನ್ನೂ ಯಾಕೆ ಬರಲಿಲ್ಲ ವೆಂಕಣ್ಣ?" ಎಂದ.

"ಇನ್ನೇನು ಬರುವ ವೇಳೆಯಾಯ್ತು."

ಮತ್ತೆ ಅರ್ಧಗಂಟೆ ಕಳೆದರೂ ವೆಂಕಟೇಶ ಬರಲಿಲ್ಲ. ಗಡಿಯಾರದಲ್ಲಿ ಹತ್ತು ಬಾರಿಸುತ್ತಿದ್ದ ಹಾಗೆ ಆತ ನಿಧಾನವಾಗಿ ಮನೆಯಲ್ಲಿ ಅಡಿಯಿರಿಸಿದ.

"ಏನೋ ವೆಂಕಣ್ಣಾ, ಇಷ್ಟೊತ್ತು?"

"ಇಂದು ಮುನಿಸಿಪಲ್ ಹಾಲಿನಲ್ಲೊಂದು ಸಭೆಯಿತ್ತು ಅಣ್ಣಾ. ಮುಗಿಯಬೇಕಾದರೆ ಇಷ್ಟು ಹೊತ್ತಾಯಿತು."

ಊಟ ನಡೆದಿದ್ದ ಹಾಗೆ ರಾಮಚಂದ್ರನೆಂದ:

"ಇದೊಂದು ಸಾರಿ ಶಾಂತಿಯನ್ನು ನೀನೇ ತೋರಿಸಿಕೊಂಡು ಬರ್ತೀ ಯೇನಪ್ಪಾ ವೆಂಕಣ್ಣಾ?"

ಸೌಟನ್ನು ಕೈಲಿ ಹಿಡಿದುಕೊಂಡು ತಂದೆಗೆ ಸಾರು ಬಡಿಸುತ್ತಿದ್ದ ಶಾಂತಳ ಹುಬ್ಬುಗಳೆರಡೂ ಗಂಟಿಕ್ಕಿಕೊಂಡುವು. ಬಡಿಸುವುದನ್ನು ಬಿಟ್ಟು ಮುಖ ಮುಚ್ಚಿ

ಕೊಂಡು ಎಲ್ಲಿಗಾದರೂ ಓಡಿಹೋಗಬೇಕೆಂದು ಅವಳಿಗೆನ್ನಿಸಿತು. ವರನನ್ನು ನೋಡಲು ಹೋಗುವುದು, ತನ್ನನ್ನು ತೋರಿಸಿಕೊಂಡು ಬರುವುದು – ದನವನ್ನು ಸಂತೆಗೊಯ್ದ ಹಾಗೆ. ಸಂತೆಯಲ್ಲಾದರೋ ದನ ಕೊಳ್ಳುವವರು ಹಣ ಕೊಡ ಬೇಕಾಗುತ್ತದೆ. ಈ ಮದುವೆಯ ಸಂತೆಯಲ್ಲಿ ಎಲ್ಲಾ ತದ್ವಿರುದ್ಧ. ಹೆಣ್ಣೆಂಬ ದನವನ್ನು ಕೊಂಡುಹೋದವರೇ ಹಣ ತೆರಬೇಕು. ಅವಳಿಗೊಂದು ವರನನ್ನು ಕೊಳ್ಳಬೇಕು. ಎಂಥ ತುಚ್ಛ ಪದ್ಧತಿಗಳು....ಎಂಥ ಸಮಾಜ....

"ನಾಳೆ ಕಾಲೇಜು ಸುರುವಾಗುತ್ತದಲ್ಲ ಅಣ್ಣಾ. ನನಗೆಲ್ಲಿ ಸವುಡಾಗು ತ್ತದೆ?" ಎಂದ ವೆಂಕಟೇಶ.

"ಹೂಂ. ನಿನಗೂ ಸವುಡಿಲ್ಲ. ಶಾಂತಿಗೂ ಸವುಡಿಲ್ಲ. ಅವಳದೂ ಸುರು ವಾಗುತ್ತದಲ್ಲ ಕಾಲೇಜು?" ಎಂದು ನುಡಿದು ರಾಮಚಂದ್ರ ಅಷ್ಟಕ್ಕೇ ಸುಮ್ಮ ನಾದ. ವೆಂಕಟೇಶನಿಗೆ ಪ್ರವಾಸವೆಂದರಾಗದು. ಅವನಿಗೆ ಒತ್ತಾಯಮಾಡು ವುದರಿಂದೇನೂ ಪ್ರಯೋಜನವಿಲ್ಲ. ಸಂಸಾರದ ಜವಾಬ್ದಾರಿಯನ್ನೂ ಆತ ಅರಿಯ. ಕಾಲೇಜು, ಪುಸ್ತಕಗಳು, ಚರ್ಚಾಕೂಟ ಮೊದಲಾದುವನ್ನು ಬಿಟ್ಟರೆ ಬೇರಾವುದರಲ್ಲೂ ಆಸಕ್ತಿಯಿಲ್ಲ ಅವನಿಗೆ. ಮದುವೆಯ ವಯಸ್ಸನ್ನು ದಾಟಿದ ತಂಗಿಯೊಬ್ಬಳು ತನಗಿರುವಳೆಂಬ ಅರಿವೂ ಅವನಿಗಿದ್ದ ಹಾಗಿಲ್ಲ. ನೆರೆಹೊರೆಯ ಜನರು ಅವಳ ವಿಚಾರವಾಗಿ ಯಾವರೀತಿ ಮಾತನಾಡುವರೆಂಬುದರ ಕಲ್ಪನೆಯಿಲ್ಲ. ಅವನೂ ಅಷ್ಟೆ, ಶಾಂತಿಯೂ ಅಷ್ಟೆ. ತಾವಿಬ್ಬರೂ ಇನ್ನೂ ಚಿಕ್ಕ ಮಕ್ಕಳೆಂದೇ ಅವರ ಭಾವನೆ. ಎಲ್ಲವನ್ನೂ ತಾನೇ ನಿರ್ವಹಿಸಬೇಕು. ಸಾಕು ನಾಕಾಗಿ ಹೋಯಿತು....

ಹಾಗೆ ಹೇಳಿಕೊಳ್ಳುತ್ತಾ ರಾಮಚಂದ್ರ ಎದ್ದು ಕೈ ತೊಳೆದುಕೊಳ್ಳಲು ಬಚ್ಚಲಿಗೆ ನಡೆದ.

ಅವರೆಲ್ಲರೂ ಊಟ ಮುಗಿಸಿ ಪಡಸಾಲೆಗೆ ಹೊರಟುಹೋದ ಬಳಿಕ ಶಾಂತಾ ಅತ್ತಿಗೆಯ ಜತೆಗೆ ಊಟಕ್ಕೆ ಕುಳಿತಳು. ಊಟದ ಜತೆಗೆ ಮೆಲ್ಲಗಿನ ಪನಿಯಲ್ಲಿ ಮಾತೂ ಆರಂಭವಾಯಿತು.

"ಅಣ್ಣನ ತ್ರಾಸ ನೋಡಿ ನೋಡಿ ನನ್ನ ತಲೇನೇ ಕೆಟ್ಟುಹೋಗಿದೆ ಅತ್ತಿಗೇ."

"ಹೂಂ. ಚಲೋ ಆತುಬಿಡು. ಅವರಿಗೂ ತಲೆ ಕೆಟ್ಟ ಹಾಗಾಗಿದೆ.

ನಿನಗೂ ಆಗಿದೆ. ಇನ್ನು ನನ್ನ ತಲೆ ಕೆಡೂದೊಂದು ಉಳಿದಿದೆ," ಎಂದಳು ಜಾನಕಿ.

"ನಿನಗೇನಾಗಿದೆ? ನಿನ್ನ ತಲೆ ಯಾಕೆ ಕೆಡಬೇಕು?"

"ಕೆಡದೆ ಉಳೀಬೇಕು ಹ್ಯಾಗೆ ಶಾಂತೂ? ನೀನು ಸಾಲೆಗೆ ಹೋಗುತ್ತೀ. ಮನೆಯಲ್ಲಿರುವಾಕೆ ನಾನು. ಸುತ್ತಮುತ್ತಲ ಹೆಂಗಸರು ಹರಿದು ಕೊಂಡು ತಿನ್ನೂದು ನನ್ನ. ನಿನಗೇನು ಗೊತ್ತಾಗಬೇಕು ನನ್ನ ಸಂಕಟ?"

"ಗೊತ್ತಾಗುತದೆ ಅತ್ತಿಗೇ. ಗೊತ್ತಾಗುತದೆ. ಆದರೆ ನಾನಾದರೂ ಏನು ಮಾಡಲಿ, ಹೇಳು." ಇಳಿದ ದನಿಯಲ್ಲಿ ಹೇಳಿದಳು ಶಾಂತಾ.

ಜಾನಕಿಯ ಗಂಟಲಲ್ಲಿ ಅನ್ನವಿಳಿಯದಂತಾಯಿತು. ಒಂದು ಗುಟುಕು ನೀರು ಕುಡಿದು ಅವಳು ಕಳವಳಪೂರಿತ ದನಿಯಲ್ಲಿ,

"ನೀನಾದರೂ ಏನು ಮಾಡೀಯಮ್ಮಾ? ನಿನ್ನದೇನು ತಪ್ಪಿದೆ ಇದರೊಳಗೆ? ಮುಖ್ಯ ಅಂದರೆ ನಾವು ಹೆಣ್ಣಾಗಿ ಹುಟ್ಟಿದ್ದೇ ನಮ್ಮ ಮೊದಲನೇ ತಪ್ಪು...." ಎಂದು ನುಡಿದಳು.

ಅದೊಂದು ತಮ್ಮ ತಪ್ಪೆಂದು ಎಂದೂ ಒಪ್ಪಿಕೊಂಡವಳಲ್ಲ ಶಾಂತಾ. ತಾವು ಹೆಣ್ಣಾಗಿ ಹುಟ್ಟಿದುದರಲ್ಲಿ ತಮ್ಮದೇನು ತಪ್ಪು? ಹೆಣ್ಣಾಗಿ ಹುಟ್ಟಿಸಬೇಕೆಂದು ತಾವೇನೂ ತಪಸ್ಸು ಮಾಡಿರಲಿಲ್ಲವಲ್ಲ. ಹೆಣ್ಣಾಗಿಯೊ ಗಂಡಾಗಿಯೊ ಅಂತೂ ಈ ಜಗತ್ತಿನಲ್ಲಿ ಹುಟ್ಟಿ ಬರುವುದೇ ಒಂದು ಆಕಸ್ಮಿಕ ಘಟನೆ. ಅದೇನು ತಮ್ಮ ಕೈಯೊಳಗಿನದಲ್ಲ. ಅಂದಮೇಲೆ ಅದರಲ್ಲಿ ತಮ್ಮದೇನು ತಪ್ಪು? ಶತಮಾನ ಗಳಿಂದ ಹೆಣ್ಣು ಜಾತಿಯನ್ನು ದಾಸ್ಯದಲ್ಲಿರಿಸಿದ ಸಮಾಜ ತನ್ನ ಸ್ವಾರ್ಥಕ್ಕಾಗಿ ಹುಟ್ಟಿಹಾಕಿದ ಹಲವು ಟೊಳ್ಳು ಘೋಷಣೆಗಳಲ್ಲಿ ಇದೂ ಒಂದು: ಹೆಣ್ಣಾಗಿ ಹುಟ್ಟುವುದು ಪಾಪ, ಅಪರಾಧ – ಎಂಬುದು. ನಿಜವಾಗಿ ಇದರಲ್ಲಿ ಪಾಪವೂ ಇಲ್ಲ, ಅಪರಾಧವೂ ಇಲ್ಲ. ಗಂಡಾಗಿ ಹುಟ್ಟುವುದು ಎಷ್ಟು ಸಹಜವೋ ಅಷ್ಟೇ ಹೆಣ್ಣಾಗಿ ಹುಟ್ಟುವುದೂ ಸಹಜ. ಗಂಡಸಿಗಿರುವ ಹಕ್ಕುಬಾಧ್ಯತೆಗಳೆಲ್ಲ ಹೆಂಗಸಿಗೂ ಅಗತ್ಯವಾಗಿ ಇರಲೇಬೇಕು....

ಹಾಗೆ, ಎಷ್ಟೋ ವರ್ಷಗಳ ಹಿಂದೆಯೆ ಅವಳು ಯೋಚಿಸಿದ್ದುದಿತ್ತು. ಅವಳಿನ್ನೂ ಹುಡುಗಿಯಾಗಿದ್ದಾಗಲೆ ಆ ಬಗೆಯ ವಿಚಾರಗಳು ಅವಳಲ್ಲಿ ತಲೆ ದೋರಿದುದಾಗಿತ್ತು, ಸ್ತ್ರೀಯರ ಬಗೆಗೆ ಸಮಾಜವಲ್ಲಿ ಪ್ರಚಲಿತವಿದ್ದ ಕಲ್ಪನೆ

ಗಳೆಲ್ಲ ಎಷ್ಟು ಟೊಳ್ಳು ಎಂಬುದನ್ನು ಅವಳು ಆಗಲೆ ಮನಗಂಡುದಾಗಿತ್ತು, ಈ ಜಗತ್ತಿನಲ್ಲಿ, ಅದರಲ್ಲೂ ಭಾರತದಲ್ಲಿ, ಅದರಲ್ಲೂ ಕರ್ನಾಟಕದಲ್ಲಿ ಸ್ತ್ರೀಯರ ಮೇಲೆ ನಡೆಯುತ್ತಿದ್ದ ಅನ್ಯಾಯಗಳನ್ನು ನಿರೀಕ್ಷಿಸಿ ನೊಂದು ಕನಲಿ ಕೆರಳಿದು ದಾಗಿತ್ತು, ಪುರುಷ ವರ್ಗದ ಗುಲಾಮಗಿರಿಯಿಂದ ಸ್ತ್ರೀ ವರ್ಗವನ್ನು ಮುಕ್ತ ಗೊಳಿಸಲು ಹೋರಾಡಬೇಕೆಂದು ಸಂಕಲ್ಪ ಕೈಕೊಂಡುದಾಗಿತ್ತು. ದಿನ ಕಳೆದ ಹಾಗೆ, ವರ್ಷಗಳುರುಳಿದ ಹಾಗೆ, ವಯಸ್ಸು ಅನುಭವ ತಿಳಿವಳಿಕೆ ಜ್ಞಾನ ಹೆಚ್ಚಿದ ಹಾಗೆ ಆ ಸಂಕಲ್ಪ ಹೆಚ್ಚು ಹೆಚ್ಚು ದೃಢವಾಗುತ್ತ ಬಂದಿದ್ದಿತು. "ಹೆಣ್ಣಾಗಿ ಹುಟ್ಟಿದ್ದು ತಪ್ಪು? ಛಿ. ಅತ್ತಿಗೆಗೆ ಏನೂ ತಿಳಿಯುವದಿಲ್ಲ. ಅವಳಿನ್ನೂ ಸ್ವಲ್ಪ ಕಲಿತಿದ್ದರೆ ಚೆನ್ನಾಗಿರುತಿತ್ತು," ಎಂದು ತನಗೆ ತಾನೆ ಹೇಳಿ ಕೊಂಡಳು ಶಾಂತಾ.

ಜಾನಕಿ ಹೆಚ್ಚು ಓದಿದವಳಲ್ಲ. ಅವಳನ್ನು ಓದಿಸುವ ಇಷ್ಟವೂ ಅವಳ ಹಿರಿಯರಿಗಿರಲಿಲ್ಲ. ಕನ್ನಡ ಸಾಲೆಯಲ್ಲಿ ನಾಲ್ಕು ಪುಸ್ತಕ ಮುಗಿಸಿದ್ದುದೆಷ್ಟೊ ಅಷ್ಟೆ – ಅಲ್ಲಿಗೆ ಅವಳ ವಿದ್ಯಾಭ್ಯಾಸ ಮುಕ್ತಾಯಗೊಂಡಿತ್ತು. ಒಂದೆರಡು ವರ್ಷಗಳಲ್ಲೇ ರಾಮಚಂದ್ರನ ಕೈಹಿಡಿದು ಈ ಮನೆಗೆ ಬಂದು ಸಂಸಾರದ ನೊಗಕ್ಕೆ ಹೆಗಲುಕೊಟ್ಟು ದುಡಿಯುತ್ತ ಬಂದಿದ್ದ ಜಾನಕಿಗೆ ಪುಸ್ತಕಗಳನ್ನೋದಲು ಅವಕಾಶವೂ ಲಭಿಸಿರಲಿಲ್ಲ. ಅವಳು ಈ ಮನೆಗೆ ಬರುವುದಕ್ಕೆ ಮೊದಲೇ ಈ ಮನೆಯ ಯಜಮಾನಿ ತೀರಿಕೊಂಡಿದ್ದರಾದುದರಿಂದ ತಾಯಿಯಿಲ್ಲದ ಹುಡುಗರಿಗೆ ತಾನೇ ತಾಯಿಯಾಗಿ ಅತ್ತಿಗೆಯೂ ಆಗಿ ಅವರನ್ನು ನೋಡಿಕೊಳ್ಳುವ ಗುರು ತರವಾದ ಭಾರ ಅವಳ ಮೇಲೆ ಬಿದ್ದಿತ್ತು. ತನಗೆ ತಿಳಿದ ವಿಷಯಗಳನ್ನೆಲ್ಲ ಅತ್ತಿಗೆಗೂ ತಿಳಿಸಿ ಅವಳನ್ನು ತನ್ನ ವಿಚಾರಗಳ ಮಟ್ಟಕ್ಕೆ ತರಬೇಕೆಂದು ಶಾಂತಾ ಅನೇಕ ಬಾರಿ ಯತ್ನಿಸಿ ವಿಫಲಳಾಗಿದ್ದಳು. ಸಂಪ್ರದಾಯಸ್ಥರ ಮನೆಯಲ್ಲಿ ಹುಟ್ಟಿ ಬೆಳೆದ ಜಾನಕಿ ಈಗಲೂ ಸಂಪ್ರದಾಯಪ್ರಿಯಳಾಗಿಯೆ ಉಳಿದಿದ್ದಳು. "ನೀನು ಹಳೇಕಾಲದವಳು ಅತ್ತಿಗೇ!" ಎಂಬುದಾಗಿ ಶಾಂತಾ ಆಗಾಗ ಜಾನಕಿಯನ್ನು ಹಾಸ್ಯಮಾಡುತ್ತಿದ್ದುದಿತ್ತು. "ನೀನಾದರೂ ಹೊಸ ಕಾಲದವ ಳಾಗಿದ್ದೀಯಲ್ಲ. ಅಷ್ಟೇ ಸಾಕು," ಎಂದು ನುಡಿದು ಜಾನಕಿಯೂ ನಕ್ಕುಬಿಡು ತ್ತಿದ್ದಳು. ಆದರೆ, ಶಾಂತಳ ಮದುವೆಯ ವಿಚಾರ ಬಂದಾಗ ಮಾತ್ರ ಅವಳಿಗೆ ನಗೆ

ಬರುತ್ತಿರಲಿಲ್ಲ. ಆ ವಿಷಯ ರಾಮಚಂದ್ರನ ತಲೆ ತಿನ್ನುತ್ತಿದ್ದ ಹಾಗೆ ಜಾನಕಿಯನ್ನು ವಿವಂಚನೆಗೊಳಗುಮಾಡಿತ್ತು. "ಇವಳ ತಲೆಯ ಮೇಲೊಮ್ಮೆ ಅಕ್ಷತೆ ಬಿದ್ದರೆ ನಾವು ಪಾರಾಗುತ್ತೇವೆ ಪರಮಾತ್ಮ!" ಎಂದು ಹೇಳಿಕೊಂಡುದು ಎಷ್ಟು ಸಲವೋ.

ಪಡಸಾಲೆಯಲ್ಲಿ ತಂದೆ ಮಕ್ಕಳಲ್ಲಿ ಇನ್ನೂ ಮಾತು ನಡೆಯುತ್ತಿತ್ತು.

"ಆದಿತ್ಯವಾರ ಹೋದರಾಗಬಹುದಲ್ಲ ರಾಮಣ್ಣಾ?"

"ಹೋಗಬಹುದು. ಆದರೆ ಅಲ್ಲಿಗೆ ಮುಟ್ಟಲಿಕ್ಕೇ ಒಂದು ದಿನವಾಗುತ್ತದೆ. ಆಮೇಲೆ ತೋರಿಸಿಕೊಂಡು ಹೊರಳಿ ಬರುವದಕ್ಕೆ ಎರಡು ದಿನ ಬೇಕಲ್ಲ?"

"ಹೌದು. ಹೌದು. ಸಮೀಪದಲ್ಲಿ ನಿಮ್ಮ ಆಫೀಸಿಗೆ ಯಾವದೂ ರಜೆ ಇಲ್ಲೇನು?"

"ಸಮೀಪ ಅಂದರೆ ಪಂಚಮಿಗೆ. ಆಗಲೂ ಒಂದೇ ದಿವಸ ರಜೆ."

"ವೆಂಕಟೇಶನಿಗೂ ರಜ ಬರುತ್ತದಲ್ಲ. ಅವನೇ ಹೋಗಿ ಬಂದಾನು ಬಿಡು. ಪಂಚಮಿಯ ಸುಮಾರಿಗೆ ಬರುವದಾಗಿ ಸೇತುರಾಮನಿಗೆ ಪತ್ರ ಹಾಕಿಬಿಡು."

"ಆಗ ಆ ವರಮಹಾರಾಯ ಊರಲ್ಲಿ ಇರುತಾನೊ ಇಲ್ಲೋ ಯಾರಿಗೆ ಗೊತ್ತು. ಸೇತುರಾಮನಂತೂ ಬೇಗ ಬರಬೇಕೆಂತ ಬರೆದಿದಾನೆ."

ಒಳಗಡೆ ಅತ್ತಿಗೆ–ನಾದಿನಿಯರ ಊಟ ಕೊನೆಗಂಡಿತ್ತು. ಅಣ್ಣ ಮತ್ತು ತಂದೆಯ ಸಂಭಾಷಣೆಯನ್ನಾಲಿಸುತ್ತಿದ್ದ ಶಾಂತಾ, "ಸರಿ. ಇದೊಂದು ಬಗೆಹರಿಯದ ಸಮಸ್ಯೆ," ಎಂದುಕೊಳ್ಳುತ್ತ ತನ್ನ ಕೊಟಡಿಗೆ ನಡೆದಳು.

ತನ್ನ ಮದುವೆಯನ್ನು ಬೇಗ ಮುಗಿಸದಿದ್ದರೆ ನಡೆಯುವಂತಿಲ್ಲ....

ವರ ಸಿಕ್ಕದೆ ಮದುವೆಯಾಗುವಂತಿಲ್ಲ....

ವರ ನೋಡುವುದಕ್ಕೆ ಹೋಗಲು ತಡ ಮಾಡುವಂತಿಲ್ಲ....

ತನ್ನನ್ನು ಕರೆದೊಯ್ಯಬೇಕಾದ ಅಣ್ಣನಿಗೀಗ ರಜ ಸಿಕ್ಕುವಂತಿಲ್ಲ....

ಬಗೆಹರಿಯಲಾರದ ಸಮಸ್ಯೆ....

೬

“ಬಗೆಹರಿಯಲಾರದ ಸಮಸ್ಯೆ....” ಎಂದು ಮತ್ತೆ ಮತ್ತೆ ಹೇಳಿಕೊಳ್ಳುತ್ತ ಅವಳು ತನ್ನ ಕೊಟಡಿಗೆ ಬಂದು ವಿದ್ಯುದ್ದೀಪದ ಗುಂಡಿಯನ್ನೊತ್ತಿ ಕೊಟಡಿಯಲ್ಲಿ ಬೆಳಕು ಹರಿಸಿದಳು, ಬಾಗಿಲಿಗೆ ಚಿಲಕ ಹಾಕಿ ಮೇಜಿನ ಬಳಿ ಬಂದು ಕಿಟಕಿ ಗೆದುರಾಗಿ ಕುರ್ಚಿಯನ್ನೆಳೆದು ಕುಳಿತುಕೊಂಡಳು.

ಅಂಗಳದಲ್ಲಿದ್ದ ತೆಂಗಿನ ಮರದ ಆಚೆಗಿದ್ದ ಕೊಟಬಾಗಿಯ ಕೊಟಡಿ ಯಲ್ಲಿಯೂ ಇನ್ನೂ ದೀಪ ಉರಿಯುತ್ತಿತ್ತು. “ಓಹ್ಹೊ. ನಮ್ಮ ಸವಾಯ್ ಕೀಟ್ಸನೂ ಇನ್ನೂ ಮಲಗಿದ ಹಾಗಿಲ್ಲ.” ಎಂದುಕೊಳ್ಳುತ್ತಾ ಶಾಂತಾ ತನ್ನಷ್ಟಕ್ಕೆ ತಾನೆ ನಗತೊಡಗಿದಳು.

“ಇವನದೂ ಒಂದು ಸಮಸ್ಯೆಯೆ,” ಎಂದು ಅವಳು ತನಗೆ ತಾನೆ ಹೇಳಿ ಕೊಂಡಳು.

ಇಷ್ಟು ಹೊತ್ತು ಕುಳಿತು ಏನನ್ನು ಬರೆಯುತ್ತಿರುವನೊ ಈ ಸವಾಯ್ ಕೀಟ್ಸ್? ಮತ್ತೊಂದು ಪ್ರಣಯಪತ್ರ ಬರೆಯುತ್ತಿರಬಹುದೇ, ಅಥವಾ ಪ್ರಣಯ ಗೀತೆ ಬರೆಯುತ್ತಿರಬಹುದೇ?

“ಅಬ್ಬಾ, ಇವನ ಪ್ರಣಯ ಪತ್ರಗಳೇ!” ಎಂದುಕೊಳ್ಳುತ್ತಾ, ನಾಲ್ಕು ತಿಂಗಳುಗಳ ಹಿಂದೆ ಅವನು ತನಗೆ ಬರೆದಿದ್ದ ಪತ್ರವನ್ನು ನೆನೆದು ಮತ್ತೆ ನಕ್ಕಳು ಶಾಂತಾ. ಪ್ರಣಯಪತ್ರಗಳನ್ನು ಬರೆಯಲು ಎಲ್ಲಿ, ಯಾರಿಂದ ಕಲಿತು ಕೊಂಡಿದ್ದನೋ ಆತ! ಹುಚ್ಚು ಹುಚ್ಚು ಶಬ್ದಗಳಿಂದ ತುಂಬಿದ್ದ ಆ ಪತ್ರ....

ಅದನ್ನು ನೋಡಿದಾಗ ತನಗೆ ಕೋಪವೇನೂ ಬಂದಿರಲಿಲ್ಲ. ಪ್ರತಿಯಾಗಿ, ಬಹಳ ತಮಾಷೆಯೆನ್ನಿಸಿತ್ತು. ಲೀಲಳಿಗೂ ಕುಮುದಳಿಗೂ ಅದನ್ನು ತೋರಿಸಿ ಹೊಟ್ಟೆ ಹಿಡಿದುಕೊಂಡು ನಕ್ಕದ್ದೂ ನಕ್ಕದ್ದೇ.

ಅಂಗಳದಾಚೆಯ ಆ ಕೊಟಡಿಗೆ ನೆಲೆಸಲು ಬಂದಂದಿನಿಂದ ತನ್ನನ್ನು ಕಂಡು ಹುಚ್ಚನಂತಾಗಿದ್ದಾನೆ ಕೊಟಬಾಗಿ. ತನಗೆ ಮಾತ್ರ ಅವನನ್ನು ಕಂಡರೆ ಕನಿಕರ ಬರುತ್ತದೆ. ಅವನಲ್ಲಿ ಯಾವ ವೈಶಿಷ್ಟ್ಯವನ್ನು ಕಂಡು ಅವನನ್ನು ಪ್ರೀತಿಸಬೇಕು ತಾನು? ಕುಳ್ಳನೆಯ ತೆಳ್ಳನೆಯ ಆ ದೇಹ....ಸಹಜವಾಗಿ ಯಾರಾದರೂ ನೂಕಿದರೂ ಬಿದ್ದುಬಿಡುವಂಥ ದೌರ್ಬಲ್ಯ....ಕಪ್ಪು ಬಣ್ಣ ಬೇರೆ. ಯಾವಾಗಲೂ ಪಿಳಿ ಪಿಳಿ ಎಂದು ಸುತ್ತುವ ಚಿಕ್ಕ ಚಿಕ್ಕ ಕಣ್ಣು – ಅವುಗಳ ಮೇಲೆ ದಪ್ಪನೆಯ ಕನ್ನಡಕ. ಇನ್ನೂ ಮೂವತ್ತು ವರ್ಷವಾಗಿರಲಿಕ್ಕಿಲ್ಲ ಅವನಿಗೆ. ಈಗಾಗಲೆ ದೃಷ್ಟಿ ಅರ್ಧಕ್ಕರ್ಧ ಮಂದವಾಗಿದೆ. ತಲೆಗೂದಲು ಬೆಳ್ಳಗಾಗಿವೆ. ತನ್ನ ಮಾತಿರಲಿ. ಇಂಥ ರೂಪದವನನ್ನು ಯಾವ ಹುಡುಗಿ ಒಲಿಯಲು ಸಾಧ್ಯ? ಈ ಕುಂದುಕೊರತೆಗಳೆಲ್ಲವನ್ನೂ ಮರೆಯಿಸುವ ಪ್ರಚಂಡ ಬುದ್ಧಿ ಶಕ್ತಿಯೋ ಪ್ರತಿಭೆಯೋ ಅವನಲ್ಲಿದ್ದುದಾಗಿದ್ದರೆ ಆ ಮಾತು ಬೇರೆಯಾಗ ಬಹುದಾಗಿದ್ದಿತೇನೊ. ಅವನಲ್ಲಿ ಅದರದೂ ಸೊನ್ನೆ. ನಾಲ್ಕು ಸಾಲು ಸರಿಯಾಗಿ ಜೋಡಿಸಲು ಕೂಡ ಬರುವುದಿಲ್ಲ. ಆದರೂ ತಾನೊಬ್ಬ ಕವಿಯೆಂಬ ಭ್ರಾಂತಿ. ಇವನ ಕವಿತೆಗಳೋ ಎಲ್ಲಾ ಹುಚ್ಚು ಹುಚ್ಚು. ಅವುಗಳನ್ನು ಓದುತ್ತಲೂ ನಗು ತಡೆಯಲಾಗುವುದಿಲ್ಲ. ತಮ್ಮ ನಗೆಯನ್ನು ಕಂಡು ಆತ ಅಳು ಮೋರೆ ಮಾಡುತ್ತಾನೆ. ತನ್ನನ್ನು ಪ್ರೀತಿಸುವವರೂ ಮೆಚ್ಚುವವರೂ ಯಾರೂ ಇಲ್ಲ ಈ ಜಗತ್ತಿನಲ್ಲಿ, ಎಲ್ಲರಿಗೂ ತಾನೆಂದರೆ ತಾತ್ಸಾರ – ಎಂದುಕೊಳ್ಳುತ್ತಾ ಶೋಕ ಗೀತೆಯೊಂದನ್ನು ಬರೆಯುತ್ತಾನೆ. ವೆಂಕಟೇಶನನ್ನು ಬಲವಂತದಿಂದ ಕೂಡಿಸಿಕೊಂಡು ಅವನೆದುರಿಗೆ ಅದನ್ನೋದಿ ಕಂಬನಿಗರೆಯುತ್ತಾನೆ. ಎಲ್ಲವೂ ಶುದ್ಧ ಹುಡುಗತನ.

"ಇಂಥವನನ್ನು ನಾನು ಲವ್ ಮಾಡಬೇಕಂತೆ! ಎಂಥ ಹುಚ್ಚು!" ಎಂದು ಹೇಳಿಕೊಳ್ಳುತ್ತ ಅವಳು ಕುರ್ಚಿಯಿಂದೆದ್ದು ಹಾಸಿಗೆ ಬಿಡಿಸಿ, ದೀಪ ವನ್ನಾರಿಸಿ ಮಲಗಿಕೊಂಡಳು.

"ಅಬ್ಬಾ, ಇವನ ಲವ್ವೇ! ನಾನು ಅವನನ್ನು ಮದುವೆಯಾಗದಿದ್ದರೆ

ಆತ್ಮಹತ್ಯೆ ಮಾಡಿಕೊಳ್ಳುವನಂತೆ ಆತ. ದೇವದಾಸನ ಹಾಗೆ ಕುಡಿಯಲು ಕಲಿತು ಕುಡಿದು ಕುಡಿದು ಸಾಯುವನಂತೆ. ಹಾಗೆ ತನ್ನನ್ನು ಹೆದರಿಸಿ ಒಂದು ಕವಿತೆ ಬರೆದಿದ್ದಾನೆ ಮೊನ್ನೆ ಮೊನ್ನೆ. ಇದೂ ಒಂದು ಹುಚ್ಚೇ. ಆತ್ಮಹತ್ಯೆ ಮಾಡಿಕೊಳ್ಳಲೂ ಧೈರ್ಯ ಬೇಕು. ಕುಡಿಯುವದಕ್ಕೂ ಎದೆಗಾರಿಕೆ ಬೇಕು. ಈ ಸವಾಯ್ ಕೀಟ್ಸ್‌ನಲ್ಲಿ ಅದೇ ಇಲ್ಲ....ಆದರೂ....

"ಸರಿ. ಇವನದೂ ಒಂದು ಸಮಸ್ಯೆಯೇ...."

## ೫

ನಿದ್ರೆಯ ಮೋಡಗಳ ಮೇಲೆ ತೇಲುತ್ತ ನಡೆದಿದ್ದ ಶಾಂತಾಗೆ ಹಠಾತ್ತಾಗಿ ಎಚ್ಚರವಾಯಿತು. ಅವಳು ಕಣ್ದೆರೆದು ಸುತ್ತಲೂ ದೃಷ್ಟಿ ತಿರುಗಿಸಿದಾಗ ಮೇಜಿನ ಮೇಲಿದ್ದ ಗಡಿಯಾರ, "ಏಳು ಬಡಿಯಿತು. ಏಳು. ಟಿಕ್ ಟಿಕ್," ಎಂದು ತನ್ನ ಭಾಷೆಯಲ್ಲಿ ಸೂಚಿಸಿತು. "ಅಯ್ಯೋ, ಏಳು ಬಡೀತೇ ಆಗಲೇ! ಇಷ್ಟೊತ್ತು ಹ್ಯಾಗೆ ಮಲಗಿದ್ದೆನೊ. ಅಪ್ಪ ನೋಡಿದರೇನೆಂದಾರು...." ಎಂದು ತನಗೆ ತಾನೆ ಹೇಳಿಕೊಳ್ಳುತ್ತ ಅವಳು ಅವಸರದಿಂದ ಎದ್ದು ಕುಳಿತಳು.

"ಇವೊತ್ತೇ ಯಾಕೆ ಹೀಗಾಯಿತೊ ಏನೊ," ಎಂದುಕೊಳ್ಳುತ್ತ ಅವಳು ಕಿಟಕಿಯಾಚೆಗೆ ದೃಷ್ಟಿಯೋಡಿಸಿದಳು. ಹೊರಗಡೆಯ ಚಿಕ್ಕ ಹೂದೋಟದಲ್ಲಿ ಬೆಳಗು ತನ್ನ ಅನುಪಮ ಲಾವಣ್ಯವನ್ನು ಸೂರೆಮಾಡಿದ್ದಿತು. ಬಾಲರವಿಯ ಬಂಗಾರಗಿರಣಗಳು ಗಿಡಬಳ್ಳಿಗಳ ಮೇಲೆಲ್ಲ ಹಾರಿ ನೆಗೆದು ನರ್ತಿಸ ತೊಡಗಿದ್ದುವು. ಮಲ್ಲಿಗೆ ಹೂವುಗಳ ಪರಿಮಳವನ್ನು ಸುತ್ತಲೂ ಚಿಮುಕಿಸುತ್ತ ಮೆಲ್ಲಗೆ ತೀಡುತ್ತಿದ್ದ ಗಾಳಿಯ ಸ್ಪರ್ಶದೊಂದಿಗೆ ತೆಂಗಿನ ಮರದ ಕೋಮಲ ಗರಿಗಳು ಹಾಗೆ ಹೀಗೆ ತೂಗಾಡುತಿದ್ದುವು. ಬಲಗಡೆಗಿದ್ದ ಮಾವಿನ ಗಿಡದ ಕೊಂಬೆಯ ಮೇಲೆ ಕುಳಿತು ಗುಬ್ಬಚ್ಚಿಗಳೆರಡು ಉದಯರಾಗ ಹೇಳುತ್ತಿದ್ದುವು.

"ಎಂಥಾ ಚಂದ ಬೆಳಗು!" ಎಂದು ತನಗೆ ತಾನೆ ಹೇಳಿಕೊಳ್ಳುತ್ತ ಹಾಸಿಗೆಯಿಂದೆದ್ದು ಕನ್ನಡಿಯ ಬಳಿ ಬಂದಳು ಶಾಂತಾ. ಹಣಿಗೆಯನ್ನು ಕೂದಲಿನ ಮೇಲಾಡಿಸುತ್ತ ಒಂದು ಕ್ಷಣ ತನ್ನ ಪ್ರತಿಬಿಂಬವನ್ನೆ ದಿಟ್ಟಿಸಿ ನೋಡ್ತು

ತ್ತಿದ್ದಳು. ಎರಡು ಅಡಿ ಉದ್ದವೂ ಒಂದು ಅಡಿ ಅಗಲವೂ ಆಗಿದ್ದ ಆ ದೊಡ್ಡ ಕನ್ನಡಿ ಅವಳ ಅರ್ಧ ದೇಹವನ್ನು ಪಡಿಮೂಡಿಸಿದ್ದಿತು. ಅವಳು ಮ್ಯಾಟ್ರಿಕ್ ಪರೀಕ್ಷೆಯಲ್ಲಿ ಉತ್ತೀರ್ಣಳಾದಾಗ ಅವಳ ಗೆಳತಿ ಕಮಲೆ ಸಲ್ಲಿಸಿದ್ದ ಉಡುಗೊರೆಯದು.

"ಕಮಲಾ.... ನೀನು ಈಗಲೆ ಮದುವೆಯಾಗಬಾರದಿತ್ತು. ನೀನೂ ಮ್ಯಾಟ್ರಿಕ್ ಮುಗಿಸಿ ಕಾಲೇಜಿಗೆ ಸೇರಬೇಕಾಗಿತ್ತು. ನಾನು ನೀನು ಲೀಲಾ ಮೂವರು ಕೂಡಿಯೆ ಬಿ. ಎ. ಮುಗಿಸುತ್ತಿದ್ದೆವು. ಮೂವರೂ ಕೂಡಿಯೆ ಮುಂದಿನ ಪ್ಲ್ಯಾನ್ ಹಾಕುತ್ತಿದ್ದೆವು...." ಎಂದು ಹೇಳಿಕೊಳ್ಳುತ್ತ ವಿಷಣ್ಣವದನದಿಂದ ಕುರ್ಚಿಯಲ್ಲಿ ಕುಳಿತುಕೊಂಡಳು, ಶಾಂತಾ.

ಮರುಕ್ಷಣವೆ ಅವಳಿಗೆನ್ನಿಸಿತು : ಕಮಲೆಯೇ ಭಾಗ್ಯವಂತೆ. ಅನುರೂಪನಾದ ವರನ ಕೈಹಿಡಿದು ಸುಖಿಯಾದಳು. ಅಂಥ ಭಾಗ್ಯ ಎಲ್ಲ ಹುಡುಗಿಯರಿಗೂ ಇಷ್ಟು ಬೇಗ ಲಭಿಸುವುದಿಲ್ಲ....

ಶಾಂತಾ ತನಗೆ ತಾನೆ ಹೇಳಿಕೊಂಡಳು : ನಿಜ. ಕಮಲೆಯೇ ಭಾಗ್ಯವಂತೆ. ಮದುವೆಯ ಮಾರುಕಟ್ಟೆಯಿಂದ ಬಲುಬೇಗ ಪಾರಾಗಿ ಹೋದಳು. ತಾನು ಅನುಭವಿಸುತ್ತಿರುವಂಥ ಅವಮಾನವನ್ನಾಗಲಿ ಸಂಕಟವನ್ನಾಗಲಿ ಅವಳು ಅನುಭವಿಸಲಿಲ್ಲ – ಸುದೈವಿ. ತನ್ನ ತಂದೆಯೂ ಅಣ್ಣಂದಿರೂ ತನಗೊಂದು ವರ ಹುಡುಕಲು ಪಡುತ್ತಿರುವ ಕಷ್ಟವನ್ನು ಕಮಲೆಯ ತಂದೆ ಅನುಭವಿಸಲಿಲ್ಲ. ಅವರೂ ಸುದೈವಿಗಳು....

ಕಾಲೇಜು.... ಉಚ್ಚಶಿಕ್ಷಣ.... ಪದವಿ....

ತುಂಬ ಕಷ್ಟದಿಂದ ತನ್ನ ಫೀಜಿಗೆ ಹಣವೊದಗಿಸಿ ತನ್ನನ್ನು ಕಾಲೇಜಿಗೆ ಕಳುಹಿಸುತ್ತಿದಾರೆ ಹಿರಿಯರು. ಮೊದಲಿನಿಂದಲೂ ಕಾಲೇಜು ಎಂದರೆ ಅಪರಿಮಿತ ಆಸಕ್ತಿ ತನಗೆ. ತಾನೂ ಕಾಲೇಜಿಗೆ ಹೋಗಬೇಕು, ಬಿ.ಎ. ಮುಗಿಸಬೇಕು, ಎಂ.ಎ. ಪದವಿ ಪಡೆಯಬೇಕು, ಪಿ.ಎಚ್.ಡಿ. ಮುಗಿಸಬೇಕು, ಯಾವುದೊಂದು ವಿದ್ಯಾರ್ಥಿವೇತನ ದೊರಕಿಸಿ ಇಂಗ್ಲೆಂಡಿಗೋ ಅಮೇರಿಕೆಗೋ ಹೋಗಿ ಬರಬೇಕು ಎಂಬ ಮಹತ್ವಾಕಾಂಕ್ಷೆ ತನ್ನದು. ತನ್ನೀ ಆಕಾಂಕ್ಷೆಗಳನ್ನೆಲ್ಲ ವೆಂಕಣ್ಣನೆದುರಿಗೆ ಒಂದು ಸಲ ಆಡಿ ತೋರಿಸಿದಾಗ ಆತ ನಕ್ಕುಬಿಟ್ಟದ್ದನಷ್ಟೆ. ಲೀಲಾ ಮಾತ್ರ ನಗದೆ, "ಯಾಕಾಗಬಾರದು ಶಾಂತಾ? ಪರದೇಶಕ್ಕೆ ಹೋಗಿ

ಡಿಗ್ರಿ ಪಡೆದು ಬರುವ ಗುತ್ತಿಗೆಯನ್ನ ಗಂಡಸರೇನೂ ಹಿಡಿದಿಲ್ಲವಲ್ಲಾ!" ಎಂದು ಹೇಳಿ ತನ್ನನ್ನು ಹುರಿದುಂಬಿಸಿದ್ದಳು. ಅಂದಿನಿಂದಲೂ ತನಗೆ ಕಾಲೇಜಿನದೇ ಕನಸು.

ಇಂದು ರಾತ್ರಿಯೂ ಅದೇ ಕನಸೇ....ತಾನು ತಡಮಾಡಿ ಎದ್ದುದಕ್ಕೆ ಅದೇ ಕಾರಣವೊ ಏನೊ.

ಕನಸು....

ನಗರದ ಹೊರಭಾಗದಲ್ಲಿ ಗಿಡಗಳ ಹಸುರಿನ ನಡುವೆ ಭವ್ಯವಾಗಿ ತಲೆ ಯೆತ್ತಿ ನಿಂತ ಕಾಲೇಜ್ ಕಟ್ಟಡ, ಅದರೆದುರಿನ ಸುಂದರ ಉದ್ಯಾನ, ಅಲ್ಲಿನ ಬಣ್ಣ ಬಣ್ಣಗಳ ಹೂವುಗಳು, ವಿಶಾಲವಾದ ಆಟದ ಬಯಲು, ಟೆನ್ನಿಸ್ ಕೋರ್ಟು, ಸೂಟು ಧರಿಸಿ ಬಿಂಕದಿಂದ ಓಡಾಡುವ ವಿದ್ಯಾರ್ಥಿಗಳು, ತೆಳ್ಳನೆಯ ಸೀರೆ ಉಟ್ಟು ಒಯ್ಯಾರದಿಂದ ಸುಳಿಯುವ ವಿದ್ಯಾರ್ಥಿನಿಯರು, ಕಾಲೇಜಿನ ದೊಡ್ಡ ಗ್ರಂಥಾಲಯ, ಅಲ್ಲಿನ ಪ್ರಚಂಡ ಜ್ಞಾನ ಭಂಡಾರ, ಕವಿಗಳೂ ಲೇಖಕರೂ ಆಗಿರುವ ಉಪಾಧ್ಯಾಯರು, ಅವರ ಪ್ರಿಯ ಸಾನ್ನಿಧ್ಯ....ಕಾಲೇಜು ಸೇರಿದ ಕೆಲವೇ ದಿನಗಳಲ್ಲಿ ತಾನು ಕಾಲೇಜ್ ರಾಣಿಯಾದ ಹಾಗೆ ಕನಸು. ಚರ್ಚಾ ಕೂಟದ ಸ್ಪರ್ಧೆಯಲ್ಲಿ ಎಲ್ಲ ಮಾತುಗಾರರನ್ನೂ ಸೋಲಿಸಿ ತಾನು ಚಿನ್ನದ ಪದಕ ದೊರಕಿಸಿದ ಹಾಗೆ....ಕಾಲೇಜಿನಲ್ಲಿನ ಕಣ್ಣುಗಳೆಲ್ಲ ತನ್ನನ್ನೆ ಈರ್ಷೆಯಿಂದ ದಿಟ್ಟಿಸಿದ ಹಾಗೆ....ಪ್ರಿನ್ಸಿಪಾಲರು ತನ್ನನ್ನು ಮುಕ್ತಕಂಠದಿಂದ ಪ್ರಶಂಸಿಸಿದ ಹಾಗೆ....“ಮಿಸ್ ಶಾಂತಾ ಅವರು ನಮ್ಮ ಕಾಲೇಜಿನ ಹೆಮ್ಮೆಯ ವಿದ್ಯಾರ್ಥಿನಿ. ಒಂದಿಲ್ಲೊಂದು ದಿನ ಇವರಿಂದ ನಮ್ಮ ಕಾಲೇಜಿಗೆ ಶಾಶ್ವತಕೀರ್ತಿ ಲಭಿಸುವದು. ಸರೋಜಿನಿ ನಾಯ್ಡು, ವಿಜಯಲಕ್ಷ್ಮಿ, ಆ್ಯನಿಬೆಸೆಂಟರ ಹಾಗೆ ನಮ್ಮ ಮಿಸ್ ಶಾಂತಾ ಅವರೂ ಭಾರತದ ಕಣ್ಮಣಿಯಾಗುವರೆಂಬ ಭರವಸೆ ನನಗಿದೆ," ಎಂದು ಹೊಗಳಿದ ಹಾಗೆ....ಬಿ. ಎ. ಪರೀಕ್ಷೆಯಲ್ಲಿ ವಿಶ್ವವಿದ್ಯಾಲಯಕ್ಕೇ ಮೊದಲನೆಯವಳಾಗಿ ತಾನು ಉತ್ತೀರ್ಣಳಾದ ಹಾಗೆ....ಹಲವು ಪದಕಗಳನ್ನು ಗೆದ್ದು ಕಾಲೇಜಿನ ಫೆಲೋಷಿಪ್ ದೊರಕಿಸಿದ ಹಾಗೆ....ತನ್ನ ಅಪೂರ್ವ ಯಶಸ್ಸನ್ನು ಕಂಡು ತಂದೆ, ಅಣ್ಣ ಎಲ್ಲರೂ ಅಭಿಮಾನದಿಂದ ಎದೆಯುಬ್ಬಿಸಿ ನಲಿದ ಹಾಗೆ....

ಕನಸು....

“ಬರಿಯ ಕನಸೇ?” ಎಂದು ತನ್ನನ್ನು ತಾನೆ ಕೇಳಿಕೊಳ್ಳುತ್ತ ಮತ್ತೆ ಕನ್ನಡಿಯತ್ತ ದೃಷ್ಟಿ ತಿರುಗಿಸಿದಳು. ಪ್ರತಿಬಿಂಬದಲ್ಲಿನ ತುಟಿಗಳ ಮೇಲೆ ಅಣಕದ ನಗೆ ಸುಳಿದಾಡುತಿತ್ತು - ಆ ಕನಸುಗಳನ್ನು ನೆನೆದುಕೊಂಡು ನಗುತ್ತಿತ್ತು ಅವಳ ಮನಸ್ಸು. ಪರಿಸ್ಥಿತಿಯ ಅನುಕೂಲತೆ ದೊರೆತಲ್ಲಿ ಈ ಕನಸುಗಳು ನನಸಾಗಲೂ ಸಾಧ್ಯವಾದೀತು. ಆದರೆ....

ಹಿರಿಯಣ್ಣ ರಾಮಚಂದ್ರನ ಬಡಕಲು ದೇಹ ಅವಳ ಬಗೆಗಣ್ಣಿನೆದುರಿಗೆ ಮೂಡಿದಂತಾಯಿತು. ಸಂಸಾರದ ಬಂಡಿಯನ್ನೆಳೆದು ಎಳೆದು ಅಸ್ಥಿಪಂಜರ ದಂತಾಗಿರುವ ತನ್ನ ಅಣ್ಣ....ಮ್ಯಾಟ್ರಿಕ್ ಮುಗಿಸುತ್ತಲೂ ಆತ ಕೆಲಸಕ್ಕೆ ಸೇರ ಬೇಕಾಯಿತು. ಆ ಕೆಲಸವೋ ವಿಪರೀತ ಪರಿಶ್ರಮದ್ದು.

ಸಿಜ. ವೆಂಕಣ್ಣ ಇನ್ನೆರಡು ವರ್ಷಗಳಿಗೆ ಬಿ.ಎ. ಪಾಸಾಗಬಹುದು. ಅಲ್ಲಿಗೆ ಅವನ ಶಿಕ್ಷಣ ಕೊನೆಗೊಳ್ಳುವುದೆಂದೇ ತೋರುತ್ತದೆ. ಎಲ್ಲಿಯಾದರೂ ಒಂದು ನೌಕರಿ ದೊರಕಿಸಿ ರಾಮಣ್ಣನ ಭಾರವನ್ನು ಕಡಿಮೆಮಾಡಬೇಕೆಂದು ಆತ ಯೋಚಿಸಿಕೊಂಡಿದ್ದಾನೆ. ಅದೂ ಒಂದು ಯೋಜನೆ, ಅಷ್ಟೆ. ಬಿ.ಎ. ಮಾಡಿ ದವರು ಎಷ್ಟು ಜನರಿಲ್ಲ? ಅವರಿಗೆಲ್ಲ ಒಡನೆಯೆ ನೌಕರಿ ಸಿಕ್ಕುವವೇ? ಅದರಲ್ಲೂ ಬ್ರಾಹ್ಮಣರಿಗೆ?

ಬ್ರಾಹ್ಮಣರು....

ತಾನೂ ಒಬ್ಬಳು ಬ್ರಾಹ್ಮಣರ ಹುಡುಗಿ. ಸಮಾಜದ ದೃಷ್ಟಿಯಲ್ಲಿ ತನಗೆ ಮದುವೆಯ ವಯಸ್ಸು ಮೀರಿಹೋಗಿದೆ. ಹದಿನೇಳು. ಹದಿನೇಳು ಅಷ್ಟೆ. “ಈಗಾಗಲೇ ಮೂರು ಮಕ್ಕಳ ತಾಯಾಗಬೇಕಿತ್ತು,” ಎಂದು ನೆರೆಮನೆಯ ಮುದುಕಿ ಹೇಳುತ್ತಾಳೆ. ಮೂರು ವರ್ಷಗಳಿಂದಲೂ ತಾನು ಮದುವೆಯ ಮಾರುಕಟ್ಟೆಯಲ್ಲಿ ಮಂಡಿಸಿದ್ದಾಗಿದೆ. ಗಿರಾಕಿ ಸಿಕ್ಕಲಿಲ್ಲ ಇನ್ನೂ.

ಗಿರಾಕಿ....

ತನಗೆ ರೂಪವುಂಟು, ಬಣ್ಣವುಂಟು, ನೂರು ಜನರಲ್ಲಿ ಎದ್ದು ಕಾಣುವ ಚೆಲುವಿಕೆಯುಂಟು. ಇಂಗ್ಲಿಷ್ ಜ್ಞಾನವುಂಟು, ಸಂಗೀತದ ಪರಿಚಯವುಂಟು; ತಾನು ಮನೆಗೆಲಸ ನೋಡಿಕೊಳ್ಳಬಲ್ಲಳು, ಕಸೀದೆ ಹಾಕಬಲ್ಲಳು. ಆದರ್ಶ ಗೃಹಿಣಿಯಲ್ಲಿರಬೇಕಾದ ಅರ್ಹತೆಗಳೆಲ್ಲ ತನ್ನಲ್ಲಿವೆ. ಮಾರುಕಟ್ಟೆಯಲ್ಲಿ ಅದ

ರೂಪವಾಗಿ ದೊರೆಯುವಂಥ ಉತ್ತಮ 'ಮಾಲು' ತಾನು. ಆದರೂ, ಗಿರಾಕಿಗಳಿಗೆ ತನ್ನತ್ತ ದೃಷ್ಟಿ ಹೊರಳುತ್ತಿಲ್ಲ.

ಅವರಿಗೆ ಒಳ್ಳೆಯ 'ಮಾಲು' ಬೇಡ; ತುಂಬ ವರದಕ್ಷಿಣೆ ಬೇಕು....

ಸಾವಿರ....ಎರಡು ಸಾವಿರ....ಮೂರು ಸಾವಿರ....ಐದು ಸಾವಿರದವರೆಗೆ ಕೇಳುವ ಗಿರಾಕಿಗಳೂ ಬಂದು ಹೋದರು. ಉಚ್ಚ ಶಿಕ್ಷಣ ಪಡೆದು ಸುಶಿಕ್ಷಿತರೆಂದೂ ಆಧುನಿಕರೆಂದೂ ಮೆರೆಯುವ ಯುವಕರಿಗೂ ವರದಕ್ಷಿಣೆಯ ಆಸೆ. ಅವರ ಆಸೆಯನ್ನು ಪೂರೈಸುವ ಸಾಮರ್ಥ್ಯ ತನ್ನ ತಂದೆಗಿಲ್ಲ. ಅಂತೆಯೆ, ತನಗಿನ್ನೂ 'ಗಿರಾಕಿ' ದೊರೆಯಲಿಲ್ಲ.

"ಇನ್ನೂ ಏಳಲಿಲ್ಲೇನೇ ಶಾಂತೀ?" ಅಡುಗೆಮನೆಯಿಂದ ಜಾನಕಿ ಕೂಗುವುದೂ ಕೇಳಬಂದಿತು.

"ಬಂದೆ ಬಂದೆ," ಎನ್ನುತ್ತಾ ಶಾಂತಾ ಹಣಿಗೆಯನ್ನು ಮೇಜಿನ ಮೇಲಿಟ್ಟು ಅಡುಗೆಮನೆಯತ್ತ ಹೊರಳುತ್ತಿದ್ದ ಹಾಗೆ ಎದುರಿನ ಕೊಟಡಿಯ ಮುಂದೆ ಏನೋ ಸದ್ದಾಗುತ್ತಿದ್ದುದು ಕೇಳಿಸಿತು. ಅವಳು ಸಹಜವಾಗಿ ಅತ್ತ ದೃಷ್ಟಿ ತಿರುಗಿಸಿದಾಗ ಯುವಕರಿಬ್ಬರು ಆ ಕೊಟಡಿಯ ಮುಂದೆ ನಿಂತುಕೊಂಡಿದುದ್ದನ್ನು ಕಂಡಳು. ಅವರಲ್ಲೊಬ್ಬ ಎತ್ತರದ ನಿಲುವಿನ ಗೌರಾಂಗ. ಖಾದಿಯ ಜುಬ್ಬ ತೊಟ್ಟು ಸಾಧಾರಣವಾದ ಪಂಚೆಯುಟ್ಟುಕೊಂಡಿದ್ದ. ತಲೆಯ ಮೇಲೆ ದಟ್ಟವಾಗಿ ಹರಡಿದ ಕಡುಗಪ್ಪು ಬಣ್ಣದ ಕ್ರಾಪು. ಇನ್ನೊಬ್ಬ ತೆಳ್ಳನೆಯ ಆಸಾಮಿ. ಷರ್ಟು, ಕೋಟು, ಪಾಯಿಜಾಮಾ ಧರಿಸಿ ತಲೆಗೊಂದು ಗಾಂಧಿ ಟೋಪಿ ಇಟ್ಟುಕೊಂಡಿದ್ದ. ಆತನೇ ಮುಂದಾಗಿ ಬಾಗಿಲು ತಟ್ಟುತ್ತಿದ್ದುದು.

"ಕೊಟಬಾಗಿಯ ರೂಮಿಗೆ ಯಾರೋ ಬಂದ ಹಾಗೆ ಕಾಣುತ್ತದೆ," ಎಂದು ಯೋಚಿಸುತ್ತಿದ್ದ ಹಾಗೆ ಶಾಂತಳ ಮನಸ್ಸಿನಲ್ಲಿ ದೂರದಾಸೆಯೊಂದು ತಲೆಯೆತ್ತಿ ನಿಂತಿತು.

ಆ ಎತ್ತರದ ನಿಲುವಿನ ಸುಂದರ ಯುವಕ ಬ್ರಾಹ್ಮಣರವನಾಗಿದ್ದರೆ... ತಮ್ಮ ಜಾತಿಯವನೆ ಆಗಿದ್ದರೆ....

ತನ್ನ ಆಸೆಯನ್ನು ಗುರುತಿಸಿ ತಾನೇ ಅಸಹ್ಯಪಟ್ಟುಕೊಳ್ಳುತ್ತ, ಅಲ್ಲಿ ನಿಲ್ಲದೆ ಅಡುಗೆಮನೆಗೆ ಧಾವಿಸಿದಳು ಶಾಂತಾ. ತನ್ನ ಕೆನ್ನೆಗೆ ತಾನೇ ಬಿಗಿದುಕೊಳ್ಳುವಷ್ಟು ಕೋಪ ಬಂದಿತ್ತು ಅವಳಿಗೆ, ತನ್ನ ಮೇಲೆಯೆ. ತನ್ನ ಮನಸ್ಸು

ಇಷ್ಟು ಕೀಳು ಮಟ್ಟಕ್ಕಿಳಿದುದೆಂದು? ಕಂಡ ಕಂಡ ಅಪರಿಚಿತರ ಬಗೆಗೆಲ್ಲ ಕನಸು ಕಾಣಲೆಳಸುವ ಈ ಹೀನ ಮನೋವೃತ್ತಿಗಾರಂಭವಾದುದು ಎಂದಿನಿಂದ?

ತನಗೇ ತಿಳಿಯದಂತೆ ತನ್ನಲ್ಲಿ ಬದಲಾವಣೆಯೇನಾದರೂ ಆಗಿದೆಯೇ ಹೇಗೆ?

ಬಚ್ಚಲು ಮನೆಯಲ್ಲಿ ಸ್ನಾನ ಮಾಡುತ್ತಲಿದ್ದ ವೆಂಕಟೇಶ ತಂಗಿಯನ್ನು ಕಂಡು, "ಈಗ ಬೆಳಗಾಯ್ತೇನು ನಿನಗೆ?" ಎಂದು ಅಣಕವಾಡಿದ.

ಶಾಂತಾ ನಸುನಕ್ಕಳಷ್ಟೆ. ಮಾತನಾಡಲಿಲ್ಲ.

ಅವಳು ಚಹ ಕುಡಿಯುತ್ತ ಕುಳಿತಿದ್ದ ಹಾಗೆ ಲೀಲಾ ಗಾಳಿಯಂತೆ ಅಡುಗೆಯ ಮನೆಗೇ ಬಂದು, "ಇನ್ನೂ ಚಹ ಮುಗಿಸಿಲ್ಲವೇನೇ? ಎಲಾ ಸೋಮಾರೀ," ಎಂದಳು.

ಶಾಂತಾ ತಲೆಯೆತ್ತಿ ಗೆಳತಿಯನ್ನು ದಿಟ್ಟಿಸಿದಳು. ಆಗತಾನೆ ಸ್ನಾನ ತೀರಿಸಿಕೊಂಡು ಬಂದಿದ್ದ ಅವಳ ಶರೀರದಲ್ಲೆಲ್ಲ ಹೊಸ ಚೇತನ ಹರಿದಾಡು ತ್ತಿದ್ದುದು ಕಾಣಿಸುತ್ತಿತ್ತು. ಶಾಂತಳ ರೂಪವಾಗಲಿ, ಗೌರವರ್ಣವಾಗಲಿ ಲೀಲಳಿ ಗಿರಲಿಲ್ಲ. ಅವಳದು ನಸುಗಪ್ಪು ಬಣ್ಣದ ಮೈ. ಕೊಂಚ ಚಪ್ಪಟೆಯಾದ ಮೂಗು. ವಯಸ್ಸಿಗೆ ತಕ್ಕ ಎತ್ತರವೂ ಅವಳದಾಗಿರಲಿಲ್ಲ. ಈ ನ್ಯೂನತೆಗಳಿಂದಾಗಿ ಅವಳು ಕುರೂಪಿಗಳ ಪಂಕ್ತಿಯಲ್ಲೇ ಸೇರಿಕೊಂಡಿದ್ದಳಾದರೂ ಇಂದು ಮಾತ್ರ ಹೊಸ ಚೆಲುವಿಕೆಯೊಂದು ಅವಳನ್ನಾವರಿಸಿಕೊಂಡ ಹಾಗೆ ಭಾಸವಾಗುತಿತ್ತು.

"ಉದ್ರಿಕ್ತಳಾದಾಗ ಬಹಳ ಚೆಲುವೆಯಾಗಿ ಕಾಣುತ್ತಾಳೆ ಲೀಲಾ," ಎಂದು ಮನಸ್ಸಿನಲ್ಲೇ ಹೇಳಿಕೊಂಡು, "ಕೂತಾದರೂ ಕೂಡಲ್ಲೇ. ಚಹಾದ ವೇಳೆಗೇ ಬಂದೆ," ಎಂದಳು ಶಾಂತಾ.

ಕುಳಿತುಕೊಳ್ಳಲಿಲ್ಲ ಲೀಲಾ. ಎಡಗಡೆಯ ಭುಜದ ಮುಂಭಾಗದಿಂದ ನೇತಾಡುತ್ತಿದ್ದ ಜಡೆಯೊಡನೆ ಆಟವಾಡುತ್ತ ಹೇಳಿದಳು:

"ಈಗ ಟೈಂ ಎಷ್ಟು ಗೊತ್ತೇ ಶಾಂತಾ? ಆಗಲೇ ಎಂಟಾಗುತ್ತ ಬಂತು. ಇನ್ನೂ ಎಷ್ಟೆಷ್ಟು ತಯಾರಿ ಮಾಡಬೇಕು. ನೀನಿನ್ನೂ ಸ್ನಾನ ಸಹಾ ಮುಗಿ ಸಿಲ್ಲವೇನು? ಹನ್ನೊಂದು ಗಂಟೆಗೆಲ್ಲಾ ನಾವು ಹೊರಡಬೇಕಲ್ಲ ಇಲ್ಲಿಂದ. ಯಾವ ಸೀರೆ ಉಡುತ್ತೀ ಇವೊತ್ತು?"

ಸೀರೆ....ಶಾಂತಳ ಹತ್ತಿರ ಇದ್ದ ಸೀರೆಗಳು ನಾಲ್ಕು ಮಾತ್ರ. ಅವು

ಗಳಲ್ಲೆರಡು ವಾಯುಲಿನವು. ಇನ್ನೊಂದು ರೇಶಿಮೆಯದು, ಅವಳ ಅಣ್ಣನ ಮದುವೆಯಲ್ಲಿ ತೆಗೆದುಕೊಂಡುದು; ಬನಾರಸ್ ಮಾದರಿಯ ನೀಲವರ್ಣದ ಸೀರೆಯೊಂದು ಗೆಳತಿ ಕಮಲೆಯಿಂದ ಉಡುಗೊರೆಯಾಗಿ ಬಂದುದು. ಇದ್ದ ಈ ನಾಲ್ಕು ಸೀರೆಗಳಲ್ಲಿ ಯಾವುದನ್ನುಟ್ಟುಕೊಳ್ಳಬೇಕೆಂಬ ಸಮಸ್ಯೆ ಎಂದೂ ಅವಳನ್ನು ಕಾಡಿರಲಿಲ್ಲ. ಲೀಲಳದು ಹಾಗಲ್ಲ. ಅವಳು ವಕೀಲರ ಮಗಳು. ಅಂಥ ಶ್ರೀಮಂತಿಕೆಯಿಲ್ಲವಾದರೂ ತಮ್ಮಂಥ ಬಡತನವೂ ಅವರಿಗಿಲ್ಲ. ಸಾಕಷ್ಟು ಸಂಪಾದನೆಯೂ ಇದೆ ವಕೀಲರಿಗೆ. ಮಗಳ ಬಗೆಗೆ ಪ್ರೇಮವೂ ಬಹಳ. ಅಂತೆಯೆ, ಅವಳು ಕೇಳಿದಾಗ ಕೇಳಿದಷ್ಟು ಹಣ ಸಿಗುತ್ತದೆ, ಅವಳು ಬೇಡಿದ ಸೀರೆಗಳೂ ದೊರೆಯುತ್ತವೆ. ದೊಡ್ಡದೊಂದು ಟ್ರಂಕಿನ ತುಂಬ ಸೀರೆಗಳನ್ನೆ ತುಂಬಿದ್ದಾಳೆ. ಯಾವುದೊಂದು ವಿಶೇಷ ಸಂದರ್ಭದಲ್ಲಿ ಯಾವ ಸೀರೆಯುಟ್ಟು ಕೊಳ್ಳಬೇಕೆಂದು ನಿರ್ಧರಿಸಲಾರದೆ ಅವಳು ತೊಳಲಾಡುವುದೂ ಉಂಟು. ಇಂದು ಕಾಲೇಜು ಆರಂಭವಾಗುವ ದಿನ. ಹೈಸ್ಕೂಲಿನ ಸಂಕುಚಿತ ಕ್ಷೇತ್ರದಿಂದ ವಿಶ್ವವಿದ್ಯಾಲಯದ ವಿಶಾಲ ಆಕಾಶಕ್ಕೆ ತಾವು ಉಡ್ಡಾಣ ಮಾಡಬೇಕಾದ ದಿನ. ಇದೂ ಒಂದು ವಿಶೇಷ ಸಂದರ್ಭವೇ ಸರಿ. ಅಂತೆಯೆ, ಈ ಉತ್ಸಾಹ, ಈ ಉದ್ರೇಕ ಲೀಲಾಗೆ.

"ಯಾವದನ್ನಾದರೂ ಉಟ್ಟರಾಯಿತು ಬಿಡೇ! ನಾವೇನು ಮದುವೇ ಮನೆಗೆ ಹೊರಟಿಲ್ಲವಲ್ಲ!" ಎಂದು ನುಡಿದು, ಕೊಂಚ ನಕ್ಕು, ತನ್ನ ಮನಸ್ಸಿನಲ್ಲಿ ತುಂಬಿ ಬಂದಿದ್ದ ವಿಷಾದವನ್ನು ಮರೆಯಿಸಲೆತ್ನಿಸಿದಳು ಶಾಂತಾ.

"ಸ್ವಲ್ಪ ಚಹಾ ತಗೊಳ್ಳೇ," ಎಂದಳು ಜಾನಕಿ.

"ಇದೇ ಈಗ ಆಯಿತಕ್ಕಾ. ನಾ ಹೋಗುತೀನಿ ಶಾಂತಾ. ಬೇಗ ಬೇಗ ತಯಾರಾಗು. ಹನ್ನೊಂದು ಗಂಟೆಗೆ ಸರಿಯಾಗಿ ಬಂದುಬಿಡುತೀನಿ. ತಡ ಮಾಡಬೇಡ ಮತ್ತೆ!" ಎಂದು ನುಡಿದವಳೆ ಲೀಲಾ ಅವಸರದಿಂದ ಹೊರಟು ಹೋದಳು.

"ಮದುವೇಮನೆಗೆ ಹೊರಟ ಹಾಗೇ ಮಾಡುತ್ತಿದ್ದಾಳಲ್ಲ ಈಕೆ!" ಎಂದು ನುಡಿದು ಜಾನಕಿ ಮುಗುಳ್ನಗು ಬೀರಿದಳು.

ಅವರ ಮಾತುಕತೆಯನ್ನಾಲಿಸುತ್ತಿದ್ದ ವೆಂಕಟೇಶ ತನಗೆ ತಾನೇ ಹೇಳಿ

ಕೊಂಡ: "ಮದುವೆಯ ಮನೆಗೇನೊ ಹೊರಟಿದ್ದಾರೆ. ಇವರಿಗೆ ಮಾತ್ರ ಮದುವೆಯ ಚಾನ್ಸ್ ಇದ್ದಂತಿಲ್ಲ."

ತಂಗಿಯ ಮದುವೆಯ ಸಮಸ್ಯೆ ವೆಂಕಟೇಶನನ್ನೂ ಆಗಾಗ ಬಾಧಿಸುತ್ತಿತ್ತು. ಅವಳಿಗೊಬ್ಬ ವರನನ್ನು ಹುಡುಕಲು ಅವನೂ ಸಾಕಷ್ಟು ಯತ್ನಿಸಿ ನಿರಾಶನಾಗಿದ್ದ. ತನ್ನ ಆಪ್ತ ಮಿತ್ರರೂ ಕೂಡ ಮದುವೆಯ ಮಾತು ಬಂದಾಗ ವರದಕ್ಷಿಣೆಯ ಆಸೆಗೊಳಗಾಗುತ್ತಿದ್ದುದನ್ನು ಕಂಡು ಬೇಸರುಗೊಂಡಿದ್ದ. ಬಿ.ಎ. ಮುಗಿಯುತ್ತಲೂ ಒಂದು ನೌಕರಿ ದೊರಕಿಸಿಕೊಂಡು ಸಂಬಳದ ಹಣವನ್ನೆಲ್ಲ ಉಳಿಸಿ ಮೊದಲು ತಂಗಿಯ ಮದುವೆ ಮಾಡುವುದೆಂದು ಆತ ಸಂಕಲ್ಪಿಸಿಕೊಂಡಿದ್ದ.

ಕೈಸಾಲೆಯಲ್ಲಿದ್ದ ವಿರಾಮ ಕುರ್ಚಿಯ ಮೇಲೊರಗಿಕೊಂಡಿದ್ದ ಮಧ್ವ ರಾಯರು ಕೇಳಿದರು.

"ಎಲ್ಲಾ ತಯಾರಿ ಆಯಿತೇನೇ ಶಾಂತಾ?"

"ಎಂಥಾ ತಯಾರಿ ಅಣ್ಣಾ? ನಾನೇನು ಪ್ರವಾಸಕ್ಕೆ ಹೊರಟಿಲ್ಲವಲ್ಲಾ?"

ಮಗಳನ್ನು ಹತ್ತಿರ ಕರೆದು ವಾತ್ಸಲ್ಯದಿಂದ ಅವಳ ಬೆನ್ನ ಮೇಲೆ ಕೈಯಾಡಿಸುತ್ತ ಮಧ್ವರಾಯರೆಂದರು:

"ಇದೂ ಒಂದು ಪ್ರವಾಸವೇ ಶಾಂತೂ. ಬಹಳ ಗಂಡಾಂತರದ ಪ್ರವಾಸ. ನೀನು ಯಾವಾಗಲೂ ಎಚ್ಚರಿಕೆಯಿಂದಿರಬೇಕವ್ವಾ."

ಶಾಂತಾಗೆ ಕೊಂಚ ಬೇಸರವೆನ್ನಿಸದಿರಲಿಲ್ಲ. ಇಂಥ ಎಚ್ಚರಿಕೆಯ ಮಾತನ್ನು ತಂದೆ ಏತಕ್ಕಾದರೂ ಹೇಳುತ್ತಿರುವರೋ? ತನ್ನ ಸ್ವಭಾವ ಅವರಿಗೇನೂ ಅಪರಿಚಿತವಾದುದಲ್ಲವಲ್ಲ. ತನ್ನದು ಸ್ವೈರ ಮನೋವೃತ್ತಿಯಲ್ಲವೆನ್ನುವುದನ್ನು ಅವರು ಬಲ್ಲರಲ್ಲವೆ? ವರ್ಷ ವರ್ಷವೂ ಪರೀಕ್ಷೆಯಲ್ಲಿ ಮೊದಲನೆಯವಳಾಗಿ ಉತ್ತೀರ್ಣಳಾಗುತ್ತ ಬಂದವಳು ತಾನು. ತಾನಾಯಿತು, ತನ್ನ ಅಭ್ಯಾಸ ವಾಯಿತು, ತನ್ನ ಶಾಲೆಯಾಯಿತು. ಬೇರಾವ ಹವ್ಯಾಸವೂ ತನಗಿರಲಿಲ್ಲ. ತನ್ನ ಗೆಳತಿಯರ ಸಂಖ್ಯೆಯೂ ಚಿಕ್ಕದೇ. ಇತರ ವಿದ್ಯಾರ್ಥಿನಿಯರನ್ನೆಲ್ಲ ಅಳೆದು ನೋಡಿದರೆ ತಾನು ಆದರ್ಶ ವಿದ್ಯಾರ್ಥಿನಿಯೆಂದೇ ಯಾರಿಗಾದರೂ ಹೊಳೆಯಬಹುದು. ತನ್ನಂಥವಳ ಬಗೆಗೂ ವಿವಂಚನೆಯೇ....

"ನಾ ಹೀಗೆ ಹೇಳುತೇನೆ ಅಂತ ಏನೂ ತಿಳಿದುಕೋಬೇಡ ಶಾಂತಾ. ನೀನು ಬೇರೆಯವರ ಹಾಗಲ್ಲ ಅಂತ ಬಲ್ಲೆ. ಆದರೂ ತಂದೆಯ ಕರುಳು.

ತಾಯಿಯಿಲ್ಲದ ತಬ್ಬಲಿ ನೀನು. ಅದಕ್ಕೇ ಹೇಳುತ್ತಿದೇನೆ. ಈ ಪ್ರಪಂಚ ಬಹಳ ಕೆಟ್ಟದು ಶಾಂತೂ. ಅದರಲ್ಲೂ ಕಾಲೇಜೆಂದರೆ...."

"ಅದೂ ಬಹಳ ಕೆಟ್ಟದು ಅಂತಲ್ಲವೇನಪ್ಪ ನೀನನ್ನುವದು ?"

"ಛೆ. ಛೆ. ಹಾಗಲ್ಲ ಶಾಂತೂ. ಕಾಲೇಜೇನು ಮಾಡೀತು. ನಾವಿದ್ದ ಹಾಗೆ ಅದೂ ಇರೂದು. ನೋಡವ್ವಾ, ನಾವು ಬಡವರು. ಬಹಳ ಹುಷಾರಾಗಿರ ಬೇಕು."

"ಅಪ್ಪ ಅನ್ನುವದೂ ನಿಜ," ಎಂದು ಮನಸ್ಸಿನಲ್ಲಿಯೆ ಹೇಳಿಕೊಳ್ಳುತ್ತ ಶಾಂತಾ ತನ್ನ ಕೊಟಡಿಗೆ ನಡೆದಳು. ಅವಳಿಗೆ ಗೊತ್ತಾಗದಂತೆಯೆ ಅವಳ ದೃಷ್ಟಿ ಮತ್ತೆ ಎದುರಿನ ಕೊಟಡಿಯತ್ತ ಹೊರಳಿತು. ಕೊಟಬಾಗಿಯ ಕೊಟಡಿಗೆ ಬಂದಿದ್ದ ಆ ಎತ್ತರದ ನಿಲುವಿನ ಸುಸ್ವರೂಪಿ ಯುವಕನ ದರ್ಶನಕ್ಕಾಗಿ ಪರಿತಪಿಸತೊಡಗಿತು ಅವಳ ಮನಸ್ಸು.

ಮತ್ತೆ ಅವಳು ತನ್ನನ್ನು ತಾನೆ ಹಳಿದುಕೊಂಡಳು. "ಥೂ....ನಾಚಿಕೆ ಗೇಡು. ಏನೂ ತಿಳುವಳಿಕೆಯಿಲ್ಲದ ಹೈಸ್ಕೂಲ್ ಹುಡುಗಿಯರ ಹಾಗೆ ಮಾಡ ತೊಡಗಿದೆನಲ್ಲ ನಾನೂ? ಆತ ಯಾರೋ, ಎಲ್ಲಿಯವನೋ, ಯಾವ ಜಾತಿ ಯವನೋ ಯಾರು ಬಲ್ಲರು. ನೋಡುವುದಕ್ಕೆ ಸ್ವಲ್ಪ ಚಂದಾಗಿದಾನೆ ಅಂತ ಒಮ್ಮೆಲೆ ಮರುಳಾಗಿಬಿಡುವದೇ ಅವನಿಗೆ? ಅಪ್ಪ ನನಗೆ ಎಚ್ಚರಿಕೆಯ ಮಾತು ಹೇಳಿದ್ದು ಇದಕ್ಕೇ ಇದ್ದೀತು...."

ತನ್ನನ್ನು ತಾನೆ ಖಂಡಿಸಿಕೊಳ್ಳುತ್ತಾ ಅವಳು ಶೆಲ್ಫಿನ ಮೇಲಿನ ಪುಸ್ತಕ ಗಳನ್ನು ತಿರುವಿಹಾಕುತ್ತಿದ್ದ ಹಾಗೆ ಎದುರಿನ ಕೊಟಡಿಯ ಮುಂದೆ ದೊಪ್ಪನೆಂದು ಸದ್ದಾಗಲು ಮತ್ತೆ ಅವಳ ದೃಷ್ಟಿ ಅತ್ತ ತಿರುಗಿತು. ಕೂಲಿ ಹುಡುಗನೊಬ್ಬ ಒಂದು ಪೆಟ್ಟಿಗೆಯನ್ನು ಕೆಳಕ್ಕಿರಿಸಿ ಮುಖದ ಮೇಲಿನ ಬೆವರನ್ನೊರೆಸುತ್ತ ನಿಂತುಕೊಂಡಿದ್ದ.

ಆ ಯುವಕ ಇಲ್ಲಿಯೆ ನೆಲೆಸಲು ಬಂದಿರಬೇಕು ಹಾಗಾದರೆ....

ಮತ್ತೆ ಅವಳ ಎದೆಯಲ್ಲಿ ಆನಂದ ತುಂಬಿ ಬಂದಿತು. ಮನಸ್ಸನ್ನು ತಡೆಯಲಾರದೆ ಮತ್ತೆ ಮತ್ತೆ ಆ ಕೊಟಡಿಯ ಕಡೆಗೇ ದಿಟ್ಟಿಸುತ್ತ ನಿಂತಳು. ಯಾರು ಆ ಯುವಕ? ಎಲ್ಲಿಂದ ಬಂದ? ಇಲ್ಲಿಗೇಕೆ ಬಂದ? ಆತ ಮಾಡು

ತ್ತಿರುವುದೇನು ? ಇನ್ನೂ ಕಾಲೇಜಿನಲ್ಲಿ ಓದುತ್ತಿರಬಹುದೇ, ಅಥವಾ ಕೊಟ ಬಾಗಿಯ ಹಾಗೆ ನೌಕರಿ ಮಾಡುತ್ತಿರಬಹುದೇ ?

ಸ್ನಾನ ಮಾಡುವಾಗಲೂ ಆ ಯುವಕನ ಮುಖವೇ ಅವಳ ಕಣ್ಣಿನೆದುರಿಗೆ ಮೂಡಿದಂತಿದ್ದಿತು. ತನ್ನ ನಡವಳಿಕೆಯ ಬಗ್ಗೆ ತನಗೇ ಅಚ್ಚರಿ ಶಾಂತಾಗೆ. ಅಪರಿಚಿತ ಯುವಕರನ್ನು ಕುರಿತು ಈ ಮೊದಲೆಂದೂ ಹೀಗೆ ಸತತವಾಗಿ ಯೋಚಿಸಿದವಳಲ್ಲ ತಾನು. ಇಂದೇ ಹೀಗಾಗಲು ಏನು ಕಾರಣ ?

ತಲೆ ಬಾಚಿಕೊಳ್ಳಲೆಂದು ಕನ್ನಡಿಯಲ್ಲಿ ಮುಖ ನೋಡಿಕೊಳ್ಳುತ್ತಿದ್ದ ಹಾಗೆ ಅದುವರೆಗೆ ಹೊಳೆಯದಿದ್ದ ಅಂಶವೊಂದು ಅವಳ ಚಿತ್ತದೆದುರಿಗೆ ಮಿಂಚಿ ದಂತಾಯಿತು. ಈತನನ್ನು ನೋಡುತ್ತಲೂ ತನಗೆ ಹೀಗಾಗಲು ಕಾರಣವಿಲ್ಲದಿಲ್ಲ. ಎಂದೋ ಒಂದು ಬಾರಿ ಈ ಮುಖವನ್ನು ತಾನು ಎಲ್ಲಿಯೋ ನೋಡಿದಂತಿದೆ. ಸಂದೇಹವೇ ಇಲ್ಲ ಈ ವಿಷಯದಲ್ಲಿ. ಇದೇ ಮುಖಮುದ್ರೆ – ಇದೇ ನೀಳವಾದ ನಾಸಿಕ, ಇದೇ ದಪ್ಪ ಹುಬ್ಬು, ಇವೇ ದೊಡ್ಡ ದೊಡ್ಡ ಕಣ್ಣು ಬೊಂಬೆ, ಇದೇ ಅಗಲವಾದ ಹಣೆ, ಇದೇ ಕಪ್ಪು ಕೂದಲು, ಇದೇ ಮುಗುಳ್ನಗೆ. ಹಾ, ಯಾವಾಗ, ಎಲ್ಲಿ ನೋಡಿದ್ದು ಅವನನ್ನು ?

ನೆನಹಿನ ಆಳದಿಂದ ಸನ್ನಿವೇಶವೊಂದು ಎದ್ದು ಬಂದಿತು. ಅವನನ್ನು ತಾನು ಪ್ರತ್ಯಕ್ಷವಾಗಿ ನೋಡಿರಲಿಲ್ಲ; ಪತ್ರಿಕೆಯೊಂದರಲ್ಲಿ ಅವನ ಭಾವಚಿತ್ರವನ್ನು ನೋಡಿದ್ದಳು. ಎರಡು ವರ್ಷಗಳ ಹಿಂದಿನ ಮಾತು. ಕವಿತೆಯೊಂದರ ಜತೆಗೆ ಪ್ರಕಟವಾಗಿತ್ತು ಆ ಭಾವಚಿತ್ರ. ಕವಿತೆಯೂ ಚೆನ್ನಾಗಿತ್ತು, ಅದನ್ನು ಬರೆದ ಕವಿಯ ಮುಖಮುದ್ರೆಯೂ ಚೆನ್ನಾಗಿತ್ತು. ಹೈಸ್ಕೂಲಿನ ವಾಚನಾಲಯದಲ್ಲಿ ಆ ಪತ್ರಿಕೆಯನ್ನೋದುತ್ತ ಕುಳಿತಿದ್ದ ವಿದ್ಯಾರ್ಥಿನಿಯರಲ್ಲಿ ಅನೇಕರು ಆ ಕವಿತೆ ಯನ್ನು ಮೆಚ್ಚಿಕೊಂಡಿದ್ದರು. ಹಾಗೆಯೆ, ಕವಿಯ ಬಗೆಗೂ ಮಾತು ನಡೆದಿತ್ತು.

"ಇನ್ನೂ ಯಂಗ್ ಇದ್ದ ಹಾಗಿದೆ. ಸ್ಟೂಡೆಂಟೋ ಏನೊ," ಎಂದು ಒಬ್ಬಳು,

"ಅಷ್ಟು ತಿಳಿಯುವದಿಲ್ಲೇನೇ! ಮುಖ ನೋಡಿದರೆ ಗೊತ್ತಾಗುವದಲ್ಲ. ಮೀಸೆ ಕೂಡ ಬಂದ ಹಾಗಿಲ್ಲ ಇನ್ನೂ," ಎಂದು ಇನ್ನೊಬ್ಬಳು,

"ಮೊಗಮೀಸೆ ಬಾರದಿರ್ದುಂ ಸೊಗಯಿಪ ತನ್ಮಾನಿಕುಮಾರ," ಎಂದು ಮತ್ತೊಬ್ಬಳು,

"ಕವಿಗಳೆಂದರೆ ಕೂದಲು ಕೆದರಿಕೊಂಡು ಗಡ್ಡ ಬಿಟ್ಟುಕೊಂಡು ಸೋಮಾರಿಗಳ ಹಾಗೆ ಕಾಣಿಸುವ ವಿಚಿತ್ರ ಪ್ರಾಣಿಗಳಂತ ನಾ ತಿಳಿದಿದ್ದೆ. ಇವ ನೇನೋ ಅಡ್ಡಿಯಿಲ್ಲ ಬಿಡಿರಿ. ಚಂದಾಗಿ ಕ್ರಾಪು ಬಾಚಿಕೊಂಡು ಚೆನ್ನಾಗಿ ಪೋಜ್ ಕೊಟ್ಟಿದ್ದಾನೆ," ಎಂದು ಮಗುದೊಬ್ಬಳು ಹೀಗೆ ಅವರವರ ಸ್ವಭಾವ ಕ್ಕನುಸಾರವಾಗಿ ಮಾತನಾಡಿದ್ದರು. ಕೊನೆಗೆ, "ಬ್ಯೂಟಿಫುಲ್ ಪೋಯೆಂ, ಹ್ಯಾಂಡ್‌ಸಂ ಪೋಯೆಟ್," ಎಂದು ಸರ್ವಾನುಮತದಿಂದ ತೀರ್ಮಾನವಾಗಿತ್ತು. ಆ ಚರ್ಚೆಯಲ್ಲಿ ತಾನು ಭಾಗವಹಿಸಿರಲಿಲ್ಲವಾದರೂ ಮೌನವಾಗಿಯೆ ಆ ತೀರ್ಮಾನಕ್ಕೆ ಸಮ್ಮತಿಯಿತ್ತಿದ್ದಳು.

ಅನಂತರದ ಎಂಟು ಹತ್ತು ದಿನಗಳವರೆಗೂ ಅದೇ ಗುಂಗು ಕವಿದು ಕೊಂಡಿತ್ತು. ರಾಜ ಕಪೂರನ ಮೋಹಕ ತುಂಟತನವನ್ನು ಬಣ್ಣಿಸುತ್ತ ಲೀಲಾ ಸದಾನಂದನನ್ನು ಮರೆತುಬಿಟ್ಟಿದ್ದಳು. ತಾನು ಮಾತ್ರ ಅಷ್ಟೇ ಸುಲಭವಾಗಿ ಆ ಮುಖವನ್ನು ಮರೆಯುವಂತಿರಲಿಲ್ಲ. ಒಂದೆರಡು ತಿಂಗಳುಗಳವರೆಗೆ ತನ್ನ ಹೃದಯದ ಮೇಲೆ ಸ್ಪಷ್ಟವಾಗಿ ಮೂಡಿದ ಹಾಗಿದ್ದಿತು ಆ ಮುಖಮುದ್ರೆ.

ಎರಡು ವರ್ಷಗಳ ತರುವಾಯ ಅದೇ ಮುಖ ಇಂದು ಮತ್ತೆ ಕಾಣಿಸಿ ಕೊಂಡಿದೆ. ಅಂದು ತಾನು ಕಂಡದ್ದು ಕೇವಲ ಪ್ರತಿಬಿಂಬವಾಗಿದ್ದರೆ ಇಂದು ಅದರ ಜೀವಂತ ರೂಪವೇ ಕಾಣುತ್ತಿದೆ....

ತನ್ನ ವರ್ತನೆಯಲ್ಲಿ ಅಸಹಜವಾದುದೇನೂ ಇಲ್ಲವೆಂದು ಮನವರಿಕೆ ಯಾದರೂ ಸಹ ಶಾಂತಾಗೆ ಸಮಾಧಾನವಾಗಲಿಲ್ಲ. ಭಾವಚಿತ್ರವೊಂದನ್ನು ನೋಡಿದ ಮಾತ್ರಕ್ಕೆ ಮುಗ್ಧಳಾದುದು ಮೊದಲನೆಯ ತಪ್ಪು, ಈಗ ಆ ಚಿತ್ರದ ವ್ಯಕ್ತಿಯನ್ನು ನೋಡಿದ ಬಳಿಕ ಮತ್ತೆ ಮುಗ್ಧಳಾಗುವುದು ಎರಡನೆಯ ತಪ್ಪು – ಎಂದು, ಔಚಿತ್ಯ ಅನೌಚಿತ್ಯಗಳ ಪರಿಜ್ಞಾನವಿದ್ದ ಅವಳ ವಿವೇಕ ಸಾರಿಹೇಳಿತು. "ನೀನೀಗ ಚಿಕ್ಕ ಹುಡುಗಿಯಲ್ಲ. ಹೀರೋ ವರ್ಷಿಪ್ ಮಾಡುವ ಅಪಕ್ವ ವಯಸ್ಸಿನ ಬಾಲೆಯಲ್ಲ. ಮ್ಯಾಟ್ರಿಕ್ ಪಾಸಾಗಿ ಕಾಲೇಜು ಸೇರುತ್ತಿರುವ ವಯಸ್ಕಳೂ ಹೊಣೆಗಾರಳೂ ಆದ ಯುವತಿ ನೀನು. ನಿನ್ನ ಮನೆಯ ಸ್ಥಿತಿ ಯೇನೆಂಬುದನ್ನು ನೆನಪಿನಲ್ಲಿಟ್ಟುಕೋ – ನಿನಗಾಗಿ ನಿನ್ನ ತಂದೆ, ನಿನ್ನ ಅಣ್ಣಂದಿರು ಎಂಥ ಹಿಂಸೆಗೊಳಗಾಗಿರುವರೆಂಬುದನ್ನು ನೆನಪುಮಾಡಿಕೊ. ನೀನು ಸರಿಯಾಗಿ ನಡೆದುಕೊಳ್ಳುವುದರ ಮೇಲೇ ನಿನ್ನ ಮತ್ತು ಅವರ ಭವಿಷ್ಯ ಅವ

ಲಂಬಿಸಿಕೊಂಡಿದೆ. ನೀನೇನಾದರೂ ಹೊಣೆಗೇಡಿತನದಿಂದ ತಪ್ಪು ಹಾದಿ ತುಳಿದಿಯೆಂದರೆ ಅದರ ಪರಿಣಾಮ ಬಹಳ ಕೆಟ್ಟದಾಗುವದು. ನಿನಗೂ ಕೇಡು, ನಿನ್ನ ಹಿರಿಯರಿಗೂ ಕೇಡು...."

"ವೆಂಕಣ್ಣಾ, ರೀ ವೆಂಕಣ್ಣಾ," ಕೊಟಡಿಯೆದುರಿಗೆ ನಿಂತು ಕೊಟಬಾಗಿ ವೆಂಕಟೇಶನನ್ನು ಕೂಗುತ್ತಿದ್ದ. ವೆಂಕಟೇಶ ಅಲ್ಲಿಗೆ ಹೋಗುತ್ತಲೂ ಸದಾನಂದನ ಪರಿಚಯ ಮಾಡಿಕೊಡುತ್ತ ಕೊಟಬಾಗಿ ಹೇಳಿದ:

"ಇವರೂ ಕವಿಗಳು. ಇವರ ಕವಿತೆಗಳನ್ನು ನೀವೂ ಓದಿರಬೇಕು."

"ಹಾ, ಹಾ. ಹೌದೌದು. ಓದಿದ್ದೇನೆ."

"ಇದುವರೆಗೆ ವಿಜಾಪುರ ಕಾಲೇಜಿನಲ್ಲಿ ಕಲಿಯುತ್ತಿದ್ದರು. ಈ ವರ್ಷ ಇಲ್ಲಿಗೆ ಬಂದಿದಾರೆ. ಇನ್ನು ಮೇಲೆ ನೀವೂ ಇವರೂ ಕ್ಲಾಸ್‌ಮೇಟು ಆಗುವವರು. ನಿಮ್ಮಣ್ಣನವರ ಕಂಪನಿಯ ಸಂಚಾಲಕ ರಾವ್‌ಸಾಹೇಬರಿದ್ದಾರಲ್ಲಾ – ಅವರು ದೂರದಿಂದ ಚಿಕ್ಕಪ್ಪ ಆಗಬೇಕು ಇವರಿಗೆ."

"ಹೀಗೇನು? ಹಾಗಾದರೆ....ಹಾಗಾದರೆ...."

"ದೂರದಿಂದ ಚಿಕ್ಕಪ್ಪ ಅಷ್ಟೆ. ಇವರೇನು ಅವರಲ್ಲೇ ತಳ ಊರುವಂಥವರಲ್ಲ."

# ೬

ಇಂಟರ್ ಪರೀಕ್ಷೆ ಮುಗಿಯುವವರೆಗೆ ವಿಜಾಪುರದಲ್ಲಿ ಎರಡು ವರ್ಷಗಳನ್ನು ಬಹಳ ಕಷ್ಟದಲ್ಲಿ ಕಳೆದುದಾಗಿತ್ತು ಸದಾನಂದ. ಬಿ.ಎ. ಗೆ ಹಣ ಒದಗಿಸಿಕೊಳ್ಳುವುದು ತುಂಬ ಪ್ರಯಾಸದ ಕಾರ್ಯವಾಗಿತ್ತು. ಕಾಲೇಜಿನ ಫೀಜು, ಪುಸ್ತಕಗಳ ಖರ್ಚು, ಕೊಟಡಿ ಊಟಗಳ ಖರ್ಚು ಎಲ್ಲವೂ ಸೇರಿ ವರ್ಷವೊಂದಕ್ಕೆ ಏಳೆಂಟು ನೂರು ರೂಪಾಯಿಗಳ ಆವಶ್ಯಕತೆಯಿತ್ತು. ಕನ್ನಡ ಶಾಲೆಯ ಶಿಕ್ಷಕರಾಗಿದ್ದು ನಿವೃತ್ತರಾದ ಸದಾನಂದನ ತಂದೆ ಅಷ್ಟು ಹಣವನ್ನೊದಗಿಸಲು ಸಮರ್ಥರಾಗಿರಲಿಲ್ಲ. ಅವನ ಹಿರಿಯಣ್ಣನೂ ಪ್ರಾಥಮಿಕ ಶಾಲೆಯ ಉಪಾಧ್ಯಾಯನೇ. ಅವನ ಸಂಬಳ ಅವನ ಸಂಸಾರಕ್ಕೇ ಸಾಲುತ್ತಿರಲಿಲ್ಲ. ಅವನಿಂದಲೂ ಸದಾನಂದ ಆರ್ಥಿಕ ನೆರವನ್ನು ನಿರೀಕ್ಷಿಸುವ ಹಾಗಿರಲಿಲ್ಲ.

ಪರೀಕ್ಷೆ ಮುಗಿದ ತರುವಾಯ ಆತ, ತಮ್ಮ ಹಳ್ಳಿಗೆ ಹೋಗಿದ್ದಾಗ ಅವನ ತಂದೆ ಬಸವಂತಪ್ಪನವರು ಕೇಳಿದ್ದರು :

" ಮುಂದೆ ಹ್ಯಾಗೆ ಮಾಡಬೇಕಂತ ಮಾಡಿದ್ದೀ ತಮ್ಮಾ ?"

" ಏನಾದರೂ ಮಾಡಬೇಕಲ್ಲಪ್ಪ. ಎರಡು ವರ್ಷ ಹೇಗೋ ದಾಟಿದ್ದಾಯ್ತು. ಇನ್ನು ನಾಲ್ಕು ವರ್ಷ ಹೇಗಾದರೂಮಾಡಿ ಗಟ್ಟಿಯಾಗಿ ನಿಂತರೆ ಎಂ.ಎ. ಆಗುತ್ತೇನೆ."

" ನೀನು ಎಂ.ಎ. ಮಾಡಬೇಕಂತ ನನಗೂ ಬಹಳ ಆಸೆ. ನಮ್ಮ ಮನೆಯಲ್ಲಿ ಯಾರೂ ಇಷ್ಟು ಕಲಿತಿಲ್ಲ. ನೀನೊಬ್ಬನಾದರೂ ಕಲಿತು ಮುಂದೆ ಬರಬೇಕು. ಆದರೆ...."

"ಶಿರಸಂಗಿ ಟ್ರಸ್ಟಿನಿಂದ ಸಾಲ ಸಿಗುತ್ತದೆ ಅಪ್ಪಾ. ಮುಂದೆ ನಾನು ಕೆಲಸ ಹಿಡಿದ ಮೇಲೆ ತಿಂಗಳು ತಿಂಗಳೂ ಹಣ ಕೊಟ್ಟು ಆ ಸಾಲ ತೀರಿಸಬಹುದು. ಆದರೆ ಆ ಹಣ ಖರ್ಚಿಗೆ ಸಾಕಾಗುವದಿಲ್ಲ. ಅದಕ್ಕೆ ನಾನೊಂದು ವಿಚಾರ ಮಾಡಿದ್ದೇನೆ."

"ಏನು ತಮ್ಮ?"

"ರಾವ್‌ಸಾಹೇಬ ಲಿಂಗಪ್ಪನವರು ದೂರದ ಸಂಬಂಧ ಅಂತ ಹೇಳುತಿದ್ದಿರಲ್ಲಾ ಒಮ್ಮೆ. ಅವರು ಚಲೋ ಸ್ಥಿತಿಯಲ್ಲಿದಾರೆ. ನೂರಾರು ರೂಪಾಯಿ ಪೆನ್ಶನ್ ಬರುತದಂತೆ, ಅಲ್ಲದೆ ವಿಮಾ ಕಂಪನಿಯಲ್ಲೂ ನಾಲ್ಕೈದು ನೂರು ಸಿಗುತದಂತೆ. ಇಂಥ ಅನುಕೂಲಸ್ಥರು ನಮ್ಮ ಸಂಬಂಧಿಕರಾಗಿರುವಾಗ ನಾನು ವಿದ್ಯಾಭ್ಯಾಸಕ್ಕಾಗಿ ಇಷ್ಟ್ಯಾಕೆ ಗೋಳಾಡಬೇಕು? ವಿಜಾಪುರ ಬಿಟ್ಟು ಲಿಂಗಪ್ಪನವರಿರುವ ಊರಿಗೇ ಹೋದರೆ ಅವರಲ್ಲೇ ಇದ್ದುಕೊಂಡು ಕಾಲೇಜಿಗೂ ಹೋಗಲು ಬಂದೀತು ಅಂತ ವಿಚಾರಮಾಡಿ ಅವರಿಗೊಂದು ಪತ್ರ ಬರೆದಿದ್ದೆ. ಬಾ, ನೋಡೋಣ ಅಂತ ಉತ್ತರವೂ ಬಂದಿದೆ ಅವರಿಂದ."

"ಯಾವಾಗ? ನನಗೇನೂ ಗೊತ್ತೇ ಇಲ್ಲಲ್ಲ?"

"ವಿಜಾಪುರದಲ್ಲಿದ್ದಾಗಲೇ ಬರೆದಿದ್ದೆ – ನಾಲ್ಕು ತಿಂಗಳ ಹಿಂದೆ. ನಿಮಗೆ ತಿಳಿಸಬೇಕೆಂದರೆ ಮರೆತುಹೋಯಿತು."

"ಸರಿ. ಸರಿ," ಎಂದಿಷ್ಟೆ ನುಡಿದು ಅವನ ತಂದೆ ಸುಮ್ಮನಾದರು. ಸ್ವಭಾವತಃ ಅವರು ಮಿತಭಾಷಿಗಳು. ನಿವೃತ್ತರಾದ ಮೇಲಂತೂ ಮಾತನ್ನು ಇನ್ನೂ ಕಡಮೆ ಮಾಡಿದ್ದರು. ತಾವಾಯಿತು, ತಮ್ಮ ಮನೆಯಾಯಿತು, ಶಿವಪೂಜೆಯಾಯಿತು, ಶಿವಲೀಲಾಮೃತ ಪಾರಾಯಣವಾಯಿತು; ಬೇರೆ ಯಾವುದರ ಗೊಡವೆಗೂ ಹೋಗುತ್ತಿರಲಿಲ್ಲ. ಬೆಳಿಗ್ಗೆ ಸಂಜೆ ಎರಡೂ ಹೊತ್ತು ಹೊಲಗಳಲ್ಲಿ ಹಾಯ್ದು ಎರಡು ಮೈಲು ದೂರದ ಗುಡ್ಡದವರೆಗೆ ತಿರುಗಾಡಿಕೊಂಡು ಬರುತ್ತಿದ್ದರು. ಹಳ್ಳಿಯಲ್ಲಿ ವಿಶೇಷವಾಗಿ ಯಾರೊಡನೆಯೂ ಮಾತಿಗೆ ನಿಲ್ಲುತ್ತಿರಲಿಲ್ಲ. ಯಾರಾದರೂ ಮಾತನಾಡಿಸಿದರೆ ಮಾತ್ರ ಅವಶ್ಯವಿದ್ದಷ್ಟೆ ಉತ್ತರವಿತ್ತು ಅಲ್ಲಿ ನಿಲ್ಲದೆ ಹೊರಟುಬಿಡುತ್ತಿದ್ದರು. ಹೆಂಡತಿ ಮತ್ತು ಮಕ್ಕಳ ಜತೆಗೂ ವಿಶೇಷ ಚರ್ಚೆಯನ್ನೆಂದೂ ನಡಸುತ್ತಿರಲಿಲ್ಲ.

"ಯಾಕಪ್ಪಾ, ನಿನ್ನ ಅಭಿಪ್ರಾಯ ಏನು? ಲಿಂಗಪ್ಪನವರಲ್ಲಿಗೆ ನಾನು ಹೋಗಲಡ್ಡಿಯಿಲ್ಲ, ಹೌವಲ್ಲೋ?"

ಬಸವಂತಪ್ಪನವರು ಮಾತನಾಡಲಿಲ್ಲ. ನೆಲದ ಕಡೆ ದೃಷ್ಟಿ ತಿರುಗಿಸಿ ಮೌನವಾಗಿ ಕುಳಿತಿದ್ದರು. ಲಿಂಗಪ್ಪನವರೊಡನೆ ಅವರಿಗೆ ವಿಶೇಷವಾಗಿ ಸಂಪರ್ಕ ಬಂದಿರಲಿಲ್ಲ. ಒಂದೆರಡು ಬಾರಿ ಅವರನ್ನು ನೋಡಿದ್ದುದೆಷ್ಟೋ ಅಷ್ಟೆ. ಸರಕಾರದಲ್ಲಿ ದೊಡ್ಡ ಅಧಿಕಾರಿಯಾಗಿದ್ದ ಲಿಂಗಪ್ಪನವರು ಈ ಕನ್ನಡ ಶಾಲಾ ಮಾಸ್ತರರನ್ನು ಕೊಂಚ ತಿರಸ್ಕಾರದಿಂದಲೇ ಕಾಣುತ್ತ ಬಂದಿದ್ದರು. ಲಿಂಗಪ್ಪ ನವರ ಪತ್ನಿ ಶಿವೂಬಾಯಿಯೂ ತಮ್ಮ ಈ ದರಿದ್ರ ನೆಂಟರನ್ನು ಕಂಡು ಮೂಗು ಮುರಿದಿದ್ದಳು. ಅವರ ಅಂತಸ್ತು, ತಮ್ಮ ಅಂತಸ್ತು ಬೇರೆ ಬೇರೆ ಎಂದು ಅರಿತು ಕೊಂಡ ಬಸವಂತಪ್ಪ ಮಾಸ್ತರರು ಮತ್ತೆ ಅವರನ್ನು ಕಾಣಲು ಹೋಗಿರಲಿಲ್ಲ. ನಿಶ್ಚಯ ಕಾರಣ, ವಿವಾಹ ಕಾರ್ಯ ಮೊದಲಾದ ಶುಭ ಪ್ರಸಂಗಗಳಲ್ಲಿ ಮಾತ್ರ ಅನಿವಾರ್ಯವಾಗಿ ಪರಸ್ಪರರ ಭೆಟ್ಟಿಯಾಗುತಿತ್ತು, ಅಷ್ಟೆ. ಲಿಂಗಪ್ಪನವರ ವಿಚಾರ ವಾಗಿ ಬಸವಂತಪ್ಪನವರಲ್ಲಿ ಅಸಮಾಧಾನವೇನೂ ಇರಲಿಲ್ಲ. "ಅವರು ದೊಡ್ಡವರು. ಅವರು ಹಾಗಿರುವದು ಸ್ವಾಭಾವಿಕ," ಎಂದುಕೊಂಡು ಲಿಂಗಪ್ಪ ನವರಿಂದ ದೂರವೆ ಇದ್ದವರು ಬಸವಂತಪ್ಪ. ಅಂಥ ಶ್ರೀಮಂತರ ಮನೆಗೆ ತಮ್ಮ ಮಗ ಆಶ್ರಿತನಾಗಿ ಹೋಗುವುದು ಅವರಿಗಿಷ್ಟವಿರಲಿಲ್ಲವಾದರೂ ಬಾಯಿಬಿಟ್ಟು ಆ ಮಾತನ್ನಾಡುವುದೂ ಅವರಿಗೆ ಕಷ್ಟವಾಯಿತು. ಅವರಲ್ಲಿಗೆ ಹೋಗುವುದು ಬೇಡವೆಂದು ಹೇಳಿದರೆ ಏಕೆಂದು ಕೇಳಿಯೆ ಕೇಳುತ್ತಾನೆ ಸದಾನಂದ. ಆಗ ತಾವು ಏನೆಂದು ಉತ್ತರವೀಯಬೇಕು? ಲಿಂಗಪ್ಪನವರ ವಿಚಾರವಾಗಿ ಅವನಲ್ಲಿ ದುರಭಿಪ್ರಾಯ ಹುಟ್ಟುವ ಹಾಗೆ ತಾನು ಆಚರಿಸಕೂಡದು.

ಅವನು ಹಳ್ಳಿಯಲ್ಲಿದ್ದಷ್ಟು ಕಾಲವೂ ಅವರು ಲಿಂಗಪ್ಪನವರ ವಿಚಾರವಾಗಿ ಒಂದು ಮಾತನ್ನೂ ಆಡಲಿಲ್ಲ. ನಡುವೆಯೊಮ್ಮೆ ಅವನೇ ಮಾತು ತೆಗೆದು, "ಲಿಂಗಪ್ಪನವರಿಗೆ ಮತ್ತೊಂದು ಪತ್ರ ಬರೆದಿದ್ದೆನಪ್ಪ. ಅಲ್ಲಿಗೇ ಬಂದಿರಲು ತಿಳಿಸಿದ್ದಾರೆ," ಎಂದು ಹೇಳಿದಾಗ "ಹೀಗೇನು? ಒಳ್ಳೆಯದಾಯ್ತು," ಎಂದಿಷ್ಟೆ ನುಡಿದು ಬಸವಂತಪ್ಪನವರು ಸುಮ್ಮನಾಗಿದ್ದರು. ತನ್ನ ಮಗನನ್ನು ಅವರು ವಿಶ್ವಾಸದಿಂದ ಕಾಣಲಿಕ್ಕಿಲ್ಲವೆಂದಾದರೂ ಯಾಕೆ ಭಾವಿಸಬೇಕು? ಶಿವನು ಎಲ್ಲ ರಲ್ಲಿಯೂ ಇದ್ದಾನೆ. ಲಿಂಗಪ್ಪನವರಲ್ಲಿಯೂ ಇದ್ದಾನೆ. ಶಿವನ ದಯೆಯಿಂದ

ಸದಾನಂದನದೊಂದು ಎಂ.ಎ. ಆದರೆ ಸರಿ. ಅವನ ಶಿಕ್ಷಣದ ಖರ್ಚಿಗೆ ತಾನಂತೂ ಹಣ ಒದಗಿಸಲು ಸಾಧ್ಯವಿಲ್ಲ. ಲಿಂಗಪ್ಪನವರಿಂದ ಅವನಿಗೆ ಸಹಾಯ ವಾಗುವಂತಿದ್ದಲ್ಲಿ ತಾನೇಕೆ ಬೇಡವೆನ್ನಬೇಕು? ವಿದ್ಯಾಭ್ಯಾಸಕ್ಕೆ ಯಾರು ನೆರ ವಾದರೇನಂತೆ....

ಕಾಲೇಜಿಗಾರಂಭವಾಗಲು ಇನ್ನೂ ಎಂಟು ದಿನಗಳಿದ್ದಾಗಲೇ ಸದಾನಂದ ಹಳ್ಳಿಯಿಂದ ಹೊರಟು ಬಂದಿದ್ದ. ಕಾಲೇಜು ಹೊಸದು. ಹೆಸರು ಹಚ್ಚಿಸಿ, ಮೊದಲನೆಯ ಟರ್ಮಿನ ಫೀಜು ತುಂಬಿ ಪುಸ್ತಕ ಇತ್ಯಾದಿಗಳನ್ನು ಶೇಖರಿಸ ಬೇಕಾಗಿತ್ತು.

ಆತ ಹೊರಡುವ ದಿನ ಬಸವಂತಪ್ಪನವರು ನೂರು ರೂಪಾಯಿಗಳನ್ನು ಅವನ ಕೈಯಲ್ಲಿರಿಸಿ ಹೇಳಿದ್ದರು:

"ನಿನಗೆ ಈ ವರ್ಷ ಬಹಳ ತ್ರಾಸಾಗುತ್ತದೆ ತಮ್ಮಾ. ಎಲ್ಲಾ ಹ್ಯಾಗೆ ಸಾಗಿಸುತ್ತೀಯೋ?"

"ಏನಾದರೂ ಮಾಡುತ್ತೇನಪ್ಪ. ಅಲ್ಲೂ ಕೆಲವರು ಗೆಳೆಯರಿದ್ದಾರೆ. ಯಾರಾದರೂ ಸಹಾಯ ಮಾಡಬಹುದು."

"ದೇವರು ನಿನ್ನ ಕಾಪಾಡಲಿ," ಎಂದು ಮನಃಪೂರ್ವಕವಾಗಿ ಹರಸಿ ಮಾಸ್ತರರು ಮಗನನ್ನು ಕಳುಹಿಸಿಕೊಟ್ಟಿದ್ದರು.

ನಗರಕ್ಕೆ ಬಂದಿಳಿದೊಡನೆ ಸದಾನಂದ ನೇರವಾಗಿ ಲಿಂಗಪ್ಪನವರ ಬಂಗಲೆಗೆ ಬಂದಿದ್ದ. ಕಾಲೇಜಿನ ಸಮೀಪದಲ್ಲಿ ವಿಸ್ತರಣವೊಂದರಲ್ಲಿ ಆ ಬಂಗಲೆಯಿತ್ತು. ಸುತ್ತಲೂ ಚಿಕ್ಕದೊಂದು ಉದ್ಯಾನ. ಅದರಲ್ಲಿ ಹೂಗಿಡಗಳೂ ಹಣ್ಣಿನ ಗಿಡಗಳೂ ಬೆಳೆದು ನಿಂತಿದ್ದುವು. ಒಂದೆರಡು ಮಾವಿನ ಗಿಡಗಳೂ ಇದ್ದುವು. ಆ ಸ್ಥಳವನ್ನು ಕಂಡು ಸದಾನಂದನಿಗೆ ತುಂಬ ಸಂತೋಷವಾಯಿತು. ಮೊದಲಿನಿಂದಲೂ ಅವನಿಗೆ ಗಿಡಗಂಟಿ ಹೂವು ಹಣ್ಣು ಎಂದರೆ ಬಹಳ ಪ್ರೀತಿ. ವಿಜಾಪುರದ ಬಯಲು ಸೀಮೆಯಲ್ಲಿ ಗಿಡಗಳ ಸಹವಾಸ ಅಪರೂಪವೆ ಆಗಿದ್ದಿತು. ಅಂತೆಯೆ ಇಲ್ಲಿನ ನಿಸರ್ಗಸಂಪತ್ತು ಸದಾನಂದನ ಮನಸ್ಸನ್ನು ಒಡನೆಯೆ ಆಕರ್ಷಿಸಿಕೊಂಡಿತು. ಕುದುರೆಗಾಡಿಯಿಂದಿಳಿಯುತ್ತಿದ್ದ ಹಾಗೆಯೆ ಆತ ಮಾವಿನ ಗಿಡದ ತಣ್ಣೆಳಲನ್ನು ಕಂಡು, ಅಲ್ಲಿ ಕುಳಿತು ಪುಸ್ತಕ ಓದಿಕೊಳ್ಳು

ವುದಕ್ಕೂ ಕವಿತೆ ಬರೆಯುವುದಕ್ಕೂ ಅನುಕೂಲವಾಯಿತೆಂದು ತನ್ನಲ್ಲಿ ತಾನೇ ಹೇಳಿಕೊಂಡ.

ಮಧ್ಯಾಹ್ನದ ಸಮಯವಾದುದರಿಂದ ಲಿಂಗಪ್ಪನವರು ಆಫೀಸಿಗೆ ಹೋಗಿದ್ದರು. ಮನೆಯಲ್ಲಿದ್ದವರೆಂದರೆ ಅವರ ಪತ್ನಿ ಶಿವೂಬಾಯಿ ಒಬ್ಬರೇ. ಎಲ್ಲಿಯೂ ಒಬ್ಬ ಸೇವಕನೂ ಕಾಣಿಸಲಿಲ್ಲ. ಆಗತಾನೆ ಉಂಡು ವಿರಮಿಸಿದ್ದ ಶಿವೂಬಾಯಿಯವರನ್ನು ಕೂಗಿ ಎಬ್ಬಿಸಬೇಕಾದರೆ ಹತ್ತು ನಿಮಿಷ ಹಿಡಿಯಿತು. ಮಧ್ಯವಯಸ್ಸಿನ ದುಂಡಗಿನ ದೇಹದ ಆ ಮಹಿಳೆ ನಿದ್ರಾಭಂಗದಿಂದಾಗಿ ಕೆಂಪೇರಿದ ಮುಖದಿಂದ ಬಂದು ಬಾಗಿಲು ತೆರೆದರು. ಬಂದವನಾರೆಂಬುದು ಅವರಿಗೆ ತಕ್ಷಣ ಗೊತ್ತಾಗಲಿಲ್ಲ. ಸದಾನಂದನನ್ನು ಅವರು ನೋಡಿದ್ದುದು ಅವನು ತೀರ ಚಿಕ್ಕವನಾಗಿದ್ದಾಗ. ಅಂತೆಯೆ, ಹುಬ್ಬು ಗಂಟು ಹಾಕಿಕೊಂಡು ಅವರು ಕೇಳಿದರು :

" ಯಾರಯ್ಯಾ ನೀನು ?"

ತನಗೆ ಆ ಬಗೆಯ ಸ್ವಾಗತ ಲಭಿಸಬಹುದೆಂದು ನಿರೀಕ್ಷಿಸಿಕೊಂಡಿರದ ಸದಾನಂದನಿಗೆ ಸಹಜವಾಗಿಯೆ ಆಘಾತವಾದಂತಾಯಿತು. ಸ್ವಭಾವತಃ ಭಾವಜೀವಿಯಾಗಿದ್ದ ಅವನಿಗೆ ಕಟುಮಾತು ಆಡಿಸಿಕೊಳ್ಳುವ ಸಂದರ್ಭ ಬಂದಾಗಲೆಲ್ಲ ತುಂಬ ದುಃಖವಾಗುತ್ತಿತ್ತು.

" ನಾನು....ನಾನು....ಸದಾನಂದ...." ಎಂದು ಆತ ತಡವರಿಸುತ್ತ ನುಡಿದ.

" ಸದಾನಂದ? ಅಂದರೆ ಯಾರ ಪೈಕಿ ?"

ಆ ಮಹಿಳೆಯೊಡನೆ ಹೆಚ್ಚು ಮಾತನಾಡದೆ ಅಲ್ಲಿಂದ ಕೂಡಲೆ ಹೊರಟು ಬಿಡಬೇಕೆಂಬ ಬಲವತ್ತರವಾದ ಬಯಕೆ ಅವನನ್ನಾವರಿಸಿಕೊಂಡಿತು. ತನ್ನ ಹೆಸರು ಹೇಳಿದರೂ ಸಹ ಗುರುತಿಸಲಾರದ ಇಂಥವರ ಬಳಿಗೆ ಆಶ್ರಯಕ್ಕಾಗಿ ಬಂದುದು ಮಹಾ ಮೂರ್ಖತನ. ನಿಜವಾಗಿ ತನ್ನ ಹೆಸರೂ ಸಹ ತಿಳಿಯದೇ ಈಕೆಗೆ? ತಾನು ಯಾರೆಂಬುದೂ ಗೊತ್ತಾಗದೇ? ತನ್ನ ವಿಚಾರವಾಗಿ ಲಿಂಗಪ್ಪ ನವರು ಈಕೆಯ ಹತ್ತಿರ ಒಂದು ಮಾತನ್ನೂ ಆಡಿರಲಿಕ್ಕಿಲ್ಲವೆ? ಇಲ್ಲಿ ಬಂದು ಇರಬೇಕೆಂದು ಪತ್ರ ಬರೆದುದನ್ನು, ಇಂಥ ದಿನ ಬರುವುದಾಗಿ ತಾನು ತಿಳಿಸಿದು ದನ್ನು ಅವರು ಪತ್ನಿಗೆ ತಿಳಿಸಿರಲಿಕ್ಕಿಲ್ಲವೆ? ಹಾಸಿಗೆ ಟ್ರಂಕುಗಳ ಸಮೇತ

ಎಂದಿಳಿದ ತನ್ನನ್ನು ಕಂಡ ಕೂಡಲೆ ತಾನು ಇಂಥವನೆಂಬುದನ್ನು ಇವರು ಅರಿತು ಕೊಳ್ಳಬೇಕಿತ್ತು. ಆದರೆ....

ಉಕ್ಕಿ ಬರುತ್ತಿದ್ದ ಉನ್ಮಾಳವನ್ನು ತುಂಬ ಕಷ್ಟದಿಂದ ತಡೆಹಿಡಿದು ಆತನೆಂದ:

"ನಾನು ಬಸವಂತಪ್ಪ ಮಾಸ್ತರರ ಮಗ. ಕಾಲೇಜಿನಲ್ಲಿದ್ದೇನೆ. ಇಲ್ಲಿಗೆ ಬರಬೇಕಂತ ರಾವ್‌ಸಾಹೇಬರು ಪತ್ರ ಬರೆದಿದ್ದರು."

ಶಿವೂಬಾಯಿಯ ತುಟಿಗಳ ಮೇಲೆ ಅಣಕದ ನಗೆ ಮೂಡಿತು.

"ಓಹ್ಹೊ, ಅವರೇ ಪತ್ರ ಬರೆದಿದ್ದರೇನು?" ಎನ್ನುತ್ತಾ ಆಕೆ ಬಾಗಿಲನ್ನು ತೆಗೆದು ಕೊಂಚ ಸರಿದು ನಿಂತರು. "ಒಳಗಡೆ ಬಾ," ಎಂದು ಸದಾನಂದನನ್ನು ಅವರು ಕರೆಯಲಿಲ್ಲ.

ಹಾಸಿಗೆ ಸುರುಳಿಯನ್ನೂ ಟ್ರಂಕನ್ನೂ ತಂದು ಕೈಸಾಲೆಯಲ್ಲಿಟ್ಟು ಅಲ್ಲಿಯೆ ಇದ್ದ ಬೆಂಚಿನ ಮೇಲೆ ಆತ ಕುಳಿತುಕೊಂಡ.

ಮುಂಗೈಗಳಲ್ಲಿದ್ದ ಚಿನ್ನದ ಬಳೆಗಳನ್ನು ಸರಿದಾಡಿಸುತ್ತ ಶಿವೂಬಾಯಿ ಕೇಳಿದರು:

"ಊಟ ಮಾಡುತ್ತೀಯೇನಪಾ?"

ಸದಾನಂದ ನೆಲಕ್ಕಿಳಿದುಹೋದ. ಆಕೆ ಪ್ರಶ್ನೆ ಕೇಳಿದ ರೀತಿ, ಆಗಿನ ಆಕೆಯ ದನಿಯ ವೈಖರಿ ಎಲ್ಲವೂ ವಿಲಕ್ಷಣವಾದುದಾಗಿದ್ದಿತು. ತನಗೆ ಊಟಕ್ಕಿಡುವ ಅಪೇಕ್ಷೆ ಆಕೆಗಿಲ್ಲವೆಂಬುದಂತೂ ಸ್ಪಷ್ಟವಾಯಿತು. ಅದನ್ನು ಸ್ಪಷ್ಟಗೊಳಿಸಲೆಂದೇ ಆಕೆ ಇಂಥ ಮಾತನ್ನಾಡಿರಲು ಸಾಕು. "ಹಸಿದು ಬಂದಿದ್ದೀ. ಊಟಕ್ಕೇಳು ತಮ್ಮಾ," ಎನ್ನಲಿಲ್ಲ ಆಕೆ. "ಊಟ ಮಾಡುತ್ತೀಯಾ?" ಎಂದು ಕೇಳುತ್ತಾರೆ. "ಹೂಂ. ಹೌದು. ಮಾಡುತ್ತೇನೆ" ಎಂದು ತಾವಾಗಿಯೆ ಯಾರೂ ಏಳುವುದಿಲ್ಲ. ಸ್ವಾಭಿಮಾನವಾಗಲಿ ಆತ್ಮ ಗೌರವವಾಗಲಿ ಇಲ್ಲದ ನಿರ್ಲಜ್ಜರೇನೋ ಹಾಗೆ ತಾವಾಗಿಯೆ ಊಟಕ್ಕೆದ್ದು ಬಿಡಬಹುದು. ಆದರೆ, ತನ್ನಂಥ ವ್ಯಕ್ತಿ....

"ಏನೂ ಬೇಡ. ನಾನು ಊಟ ಮುಗಿಸಿದ್ದೇನೆ," ಎಂದ ಸದಾನಂದ.

ಮತ್ತೆ ಆಕೆ ಬಲವಂತ ಮಾಡಲಿಲ್ಲ.

"ಸ್ವಲ್ಪ ನೀರಾದರೂ ತಗೊಳ್ಳುತೀಯಾ?" ಎಂದು ಆಕೆ ಕೊಂಚ ಮೃದುವಾದ ದನಿಯಲ್ಲಿ ಕೇಳಿದರು.

ನಿಜವಾಗಿ ಆಗ ಸದಾನಂದನಿಗೆ ತುಂಬ ಹಸಿವೆಯಾಗಿತ್ತು, ದಾಹ ವಾಗಿತ್ತು. ರೈಲಿನ ಪಯಣದಿಂದಾದ ಆಯಾಸ ಬೇರೆ. ಕೊಂಚ ನೀರು ಸೇವಿಸಿದರೆ ಸ್ವಲ್ಪ ಹಿತವೆನಿಸಬಹುದಾಗಿತ್ತು. ಆದರೆ, ಆ ಮನೆಯಲ್ಲಿನ ನೀರನ್ನು ಮುಟ್ಟುವುದಕ್ಕೂ ಕೂಡ ಅವನ ಮನಸ್ಸು ಹೇಸಿಕೊಳ್ಳತೊಡಗಿದ್ದಿತು.

"ಏನೂ ಬೇಡ ತಾಯಿ."

"ಹಾಗಾದರೆ ಇಲ್ಲೇ ಕೂತಿರಪ್ಪ. ಸಂಜೆ ಅವರು ಬರ್ತಾರೆ. ನಾ ಸ್ವಲ್ಪ ನಿದ್ದೆ ಮಾಡುತೇನೆ."

ತನ್ನನ್ನು ಮನೆಯೊಳಗಡೆ ಸೇರಿಸುವುದಕ್ಕೂ ಈಕೆಗಿಷ್ಟವಿಲ್ಲ, ಹಾಗಾದರೆ! ತಾನು ಇಲ್ಲಿಯೆ ಕೈಸಾಲೆಯಲ್ಲಿಯೆ ಕುಳಿತಿರಬೇಕು ಭಿಕಾರಿಯ ಹಾಗೆ....

ಹಳ್ಳಿಯಿಂದ ಹೊರಡುವಾಗ ತಾಯಿ ಕಟ್ಟಿಕೊಟ್ಟಿದ್ದ ರೊಟ್ಟಿ ಬುತ್ತಿ ಕೈಚೀಲದಲ್ಲಿತ್ತು. ಆ ಚೀಲವೊಂದನ್ನು ಹಿಡಿದುಕೊಂಡು ಸದಾನಂದ ಎದ್ದು ನಿಂತ.

"ನಾನೂ ಸ್ವಲ್ಪ ಹೊರಗೆ ಹೋಗಿಬರ್ತೇನೆ ಅವ್ವನವರೆ. ನೀವು ಬಾಗಿಲು ಹಾಕಿಕೊಳ್ಳಿರಿ. ಈ ಸಾಮಾನು ಅಷ್ಟೆ ಇಲ್ಲಿರಲಿ, ಸಂಜೆಯವರೆಗೆ."

"ಸಂಜೆಯವರೆಗಷ್ಟೇ ಯಾಕೆ?" ಎಂದಾಕೆ ಪ್ರಶ್ನಿಸಲಿಲ್ಲ. "ಒಳ್ಳೇದು," ಎಂದಿಷ್ಟೆ ನುಡಿದು ಬಾಗಿಲು ಹಾಕಿಕೊಂಡರು.

ಆ ಬಂಗಲೆಯಿಂದ ತುಸುದೂರದಲ್ಲಿ ಮಾಮಲೆದಾರರ ಕಚೇರಿಯ ಬಳಿ ಹಳ್ಳಿಯ ಜನ ನೆರೆದಿದ್ದುದು ಕಾಣಿಸಿತು. ಗಿಡಗಳ ನೆರಳಿನಲ್ಲಿ ಕುಳಿತು ಅನೇಕರು ರೊಟ್ಟಿ ತಿನ್ನುತ್ತಿದ್ದರು. ಸದಾನಂದನೂ ಒಂದು ಗಿಡದ ಬುಡದಲ್ಲಿ ಕುಳಿತು ಬುತ್ತಿಯನ್ನು ಬಿಚ್ಚಿದ. ರೊಟ್ಟಿಗಳನ್ನು ನೋಡುತ್ತಲೂ ಅವನಿಗೆ ತನ್ನ ಪ್ರೀತಿಯ ತಾಯಿಯ ಜ್ಞಾಪಕ ಬಂದಿತು. ಅದರೊಡನೆಯೆ ಲಿಂಗಪ್ಪನವರ ಮನೆಯಲ್ಲಿ ತನಗಾದ ಮುಖಭಂಗ ನೆನಪಾಯಿತು. ರೊಟ್ಟಿ ಪಲ್ಯವನ್ನು ಕೈಯಲ್ಲಿ ಹಿಡಿದುಕೊಂಡಿದ್ದ ಹಾಗೆ ಅವನ ಕತ್ತು ಉಬ್ಬಿಬಂದಿತು. ಅವನ ಕಣ್ಣುಗಳಲ್ಲಿ ಕಂಬನಿ ಚಿಮ್ಮಿಬಂದುವು. ಹೇಗೋ ರೊಟ್ಟಿ ತಿಂದು ಮುಗಿಸಿ ಚಹದಂಗಡಿಗೆ ಹೋಗಿ ನೀರು ಕುಡಿದು ನಗರದತ್ತ ನಡೆದ. ನಗರ ಸಭೆಯಲ್ಲಿ

ಗುಮಾಸ್ತೆಯಾಗಿದ್ದ ಗೆಳೆಯ ಶಿವಣ್ಣನನ್ನು ಕಂಡು ಮುಂದಿನ ಯೋಚನೆ ಮಾಡುವುದೆಂದು ನಗರ ಸಭೆಯ ಕಚೇರಿಗೆ ಬಂದ. ಶಿವಣ್ಣನ ಮೂಲಸ್ಥಳ ಗದಗು. ಅಲ್ಲಿನ ಹೈಸ್ಕೂಲಿನಲ್ಲಿ ಸದಾನಂದನೂ ಅವನೂ ಜತೆಯಾಗಿ ಓದಿದ್ದರು. ಮ್ಯಾಟ್ರಿಕ್ ಮುಗಿಸಿ ಶಿವಣ್ಣ ಈ ನಗರಕ್ಕೆ ಬಂದು ಕೆಲಸಕ್ಕೆ ಸೇರಿಕೊಂಡಿದ್ದ. ಎರಡು ವರ್ಷಗಳ ಹಿಂದೆಯೆ ಅವನ ಮದುವೆಯೂ ಆಗಿಹೋಗಿತ್ತು. ಚಿಕ್ಕದೊಂದು ಮನೆಯನ್ನು ಬಾಡಿಗೆಗೆ ಹಿಡಿದು ಶಿವಣ್ಣ ಅಲ್ಲಿ ಹೊಸ ಸಂಸಾರ ಸಾಗಿಸಿದ್ದ.

ಸದಾನಂದನನ್ನು ನೋಡುತ್ತಲೂ ಆತ ಮಧ್ಯಾಹ್ನದ ಮಟ್ಟಿಗೆ ರಜ ಪಡೆದುಕೊಂಡು ಗೆಳೆಯನನ್ನು ಮನೆಗೆ ಕರೆದೊಯ್ದ. ಅನ್ನ ಸಾರು ತಯಾರಿಸಲು ಹೆಂಡತಿಗೆ ತಿಳಿಸಿ, ನಡುಮನೆಗೆ ಬಂದು,

"ನೀನು ಸ್ನಾನಮಾಡಿ ಸ್ವಲ್ಪ ವಿಶ್ರಾಂತಿ ತೆಗೆದುಕೋ. ಅಷ್ಟರಲ್ಲಿ ಅನ್ನವಾಗುತ್ತದೆ," ಎಂದು ಹೇಳಿದ.

"ಈಗೇನು ಬೇಡಪ್ಪಾ. ನನ್ನ ಊಟ ಆಯಿತು."

"ಛೆ. ಎಲ್ಲಿಯ ಊಟ! ಅದೆಲ್ಲಾ ಕೇಳುವಂತಿಲ್ಲ. ಏಳು, ಸ್ನಾನಕ್ಕೇಳು," ಎಂದು ಶಿವಣ್ಣ ಒಲುಮೆಯ ಬಲವಂತದಿಂದ ಅವನನ್ನು ಸ್ನಾನಕ್ಕೆಬ್ಬಿಸಿದ.

ಲಿಂಗಪ್ಪನವರ ಮನೆಯಲ್ಲಿ ಲಭಿಸಿದ ಸ್ವಾಗತವನ್ನು ಶಿವಣ್ಣನ ಹೃತ್ಪೂರ್ವಕ ಪ್ರೇಮದೊಂದಿಗೆ ತುಲನೆಮಾಡುತ್ತ ಸದಾನಂದ ತನಗೆ ತಾನೇ ಹೇಳಿಕೊಂಡ: "ಕಮ್ಯುನಿಸ್ಟರು ಹೇಳುವದೇ ನಿಜ. ಶ್ರೀಮಂತರು ಶ್ರೀಮಂತರೇ. ಬಡವರು ಬಡವರೇ. ಆ ವರ್ಗವೇ ಬೇರೆ, ಬೇರೆ."

ಅವನ ವಿಚಾರಗಳನ್ನು ಓದಿಕೊಂಡವನಂತೆ ಶಿವಣ್ಣ ಕೇಳಿದ:

"ಏನಪಾ, ಏನೋ ಯೋಚನೆ ಮಾಡುತ್ತಿದ್ದೀ?"

"ಏನಿಲ್ಲ ಶಿವಣ್ಣಾ. ಇವತ್ತು ಒಂದು ಕಟು ಅನುಭವ ಬಂತು. ಅದರ ಬಗ್ಗೆ ವಿಚಾರ ಮಾಡುತ್ತಿದ್ದೆ."

ಶಿವಣ್ಣ ನಗುತ್ತ ಪ್ರಶ್ನಿಸಿದ: "ಕಟು ಅನುಭವ? ಎಲ್ಲಿ?"

ತನ್ನ ಮನಸ್ಸಿನಲ್ಲಿದ್ದುದನ್ನು ಅನ್ಯರೆದುರಿಗೆ ತೋಡಿಕೊಳ್ಳುವುದು ಸದಾನಂದನ ಸ್ವಭಾವವಾಗಿರಲಿಲ್ಲ. ಆದರೂ ಶಿವಣ್ಣನ ಮಟ್ಟಿಗೆ ಮಾತ್ರ ಆತ ಆ ಸಂಕೋಚವನ್ನು ತೊರೆದು ಅವನೆದುರಿಗೆ ಎಲ್ಲವನ್ನೂ ಹೇಳುತ್ತಿದ್ದ.

ಗದುಗಿನಲ್ಲಿ ಕೂಡಿ ಕಲಿಯುತ್ತಿದ್ದಷ್ಟು ಕಾಲವೂ ಅವರಿಬ್ಬರೂ ಕೇವಲ ಸಹೋದರರಂತೆ ನಡೆದುಕೊಂಡು ಬಂದಿದ್ದರು. ಇಬ್ಬರೂ ಒಂದೇ ವರ್ಗದಲ್ಲಿ ಓದುತ್ತಿದ್ದರು, ಒಂದೇ ಕೊಟಡಿಯಲ್ಲಿ ವಾಸವಾಗಿದ್ದರು. ದೇಹಗಳು ಮಾತ್ರ ಭಿನ್ನ, ಜೀವವೊಂದೇ, ಎನ್ನುವಮಟ್ಟಿಗೆ ಅವರಲ್ಲಿ ಆತ್ಮೀಯತೆ ಬೆಳೆದು ಬಂದಿತ್ತು. ಅಂತೆಯೆ, ಶಿವಣ್ಣನೊಬ್ಬನೆದುರಿಗೆ ಅಂತರಂಗವನ್ನು ಬಿಚ್ಚಿ ಮಾತನಾಡುವುದು ಅಭ್ಯಾಸವಾಗಿತ್ತು ಸದಾನಂದನಿಗೆ.

ಲಿಂಗಪ್ಪನವರ ಮನೆಯಲ್ಲಿ ನಡೆದುದೆಲ್ಲವನ್ನೂ ಆತ ಹೇಳಿ ಮುಗಿಸುತ್ತಲೂ ಶಿವಣ್ಣ ನಗುನಗುತ್ತ ನುಡಿದ :

"ಅವರಲ್ಲಿಗೆ ಹೋಗುವ ಮೊದಲು ನೀನು ನನಗಾದರೂ ಬರೆದಿದ್ದರೆ ನೆಟ್ಟಗಾಗುತಿತ್ತು. ಅವರು ಎಂಥಾ ಜಿಪುಣರೆನ್ನುವದು ಈ ನಗರಕ್ಕೆಲ್ಲಾ ಗೊತ್ತು. ಅವರ ಸ್ವಂತ ಮಗನೇ ಬೇಸರಪಟ್ಟುಕೊಂಡು ಮುಂಬಯಿಗೆ ಹೋಗಿ ಅಲ್ಲೇ ಇದಾನೆ."

"ಎಂ.ಬಿ.ಬಿ.ಎಸ್. ಓದುತ್ತಿದಾನಂತೆ?"

"ಎಲ್ಲಿಯ ಎಂ.ಬಿ.ಬಿ.ಎಸ್ಸು? ಬಿ.ಎ. ದಲ್ಲಿದಾನೆ ಪಾಪ. ಅವನೇನು ಮುಂಬಯಿಗೆ ಹೋಗುವ ಅಗತ್ಯವಿರಲಿಲ್ಲ. ತಂದೆ ತಾಯಿಗಳ ಜಿಪುಣತನಕ್ಕೆ ಬೇಸರಪಟ್ಟುಕೊಂಡೇ ಹೋಗಿದಾನೆ."

"ಪಾಪ, ಪಾಪ. ಅಲ್ಲಿ ಖರ್ಚಿಗೇನು ಮಾಡುತ್ತಾನೊ."

"ಅವನ ಮಾವನಾಗುವ ವ್ಯಾಪಾರಿಯೊಬ್ಬರು ಅಲ್ಲಿದ್ದಾರೆ. ಬಹಳ ಶ್ರೀಮಂತರು. ಈತ ಅವರಲ್ಲಿಯೆ ಇದ್ದುಕೊಂಡು ಓದುತ್ತಿದಾನೆ. ಎಲ್ಲಾ ಖರ್ಚನ್ನೂ ಅವರೇ ಕೊಡುತ್ತಾರೆ."

"ಇಲ್ಲಿಗೆ ಬರುವದೇ ಇಲ್ಲವೇನು ಆತ?"

"ಬರುತ್ತಾನೆ, ಯಾವಾಗಲಾದರೊಮ್ಮೆ. ನನಗೂ ಅವನಿಗೂ ಚೆನ್ನಾಗಿ ಪರಿಚಯ."

"ಇವರಿಷ್ಟು ಜಿಪುಣರು ಹ್ಯಾಗಾದರು ಶಿವಣ್ಣ?"

"ಹ್ಯಾಗಾದರೆಂದರೆ? ಕೆಲವರು ಹೀಗೂ ಆಗುತ್ತಾರಪ್ಪ. ಪ್ರಪಂಚದಲ್ಲಿ ಇಂಥವರೂ ಬಹಳ ಮಂದಿ."

"ಅಲ್ಲ....ಸ್ವಂತ ಮಗನನ್ನೇ...."

“ಸ್ವಂತ ಮಗನಾದರೇನು, ಯಾರಾದರೇನು? ಹಣ ಕೂಡಿಡುವ ಹುಚ್ಚಿನೆದುರಿಗೆ ಬೇರೆ ಯಾವದೂ ಹೆಚ್ಚಿನದಲ್ಲ ಇವರಿಗೆ. ಅವರು ಮನೆಯಲ್ಲಿ ಒಂದು ಆಳನ್ನೂ ಇಟ್ಟುಕೊಂಡಿಲ್ಲ, ಗೊತ್ತಾಯಿತೇ?”

“ಹೌದು. ಯಾರೂ ಕಾಣಿಸಲಿಲ್ಲ....”

“ವಿಮಾ ಕಂಪನಿಯ ಸಿಪಾಯಿಯಿಂದಲೇ ಮನೆಯ ಕೆಲಸಗಳನ್ನೂ ಮಾಡಿಸಿಕೊಳ್ಳುತ್ತಾರೆ. ಆತ ಬೆಳಿಗ್ಗೆ ಸಂಜೆ ಎರಡು ಹೊತ್ತು ಇವರ ಮನೆಗೆಲಸ ಮಾಡುತ್ತಾನೆ. ಆ ದೊಡ್ಡ ತೋಟವಿದೆಯಲ್ಲಾ, ಅದಕ್ಕೆಲ್ಲ ನೀರು ಹಾಕುವವನೂ ಇವನೇ. ಕಟ್ಟಿಗೆ ಒಡೆದುಕೊಡುವವನೂ ಇವನೇ. ಮೈಮುರಿಯುವ ತನಕ ಅವನಿಂದ ಕೆಲಸ ಮಾಡಿಸಿಕೊಂಡರೂ ಅವನಿಗೊಂದು ರೊಟ್ಟಿಯನ್ನೂ ಸಹ ಕೊಡುವದಿಲ್ಲ ಇವರು. ಪಾಪ, ಆತ, ಮತ್ತೆ ತನ್ನ ಮನೆಗೆ ಹೋಗಿ ಊಟಮಾಡಿ ಅಫೀಸಿಗೆ ಓಡುತ್ತಾನೆ. ಲಿಂಗಪ್ಪನವರ ಈ ಜಿಪುಣತನ ಈ ಊರಿಗೆಲ್ಲಾ ಗೊತ್ತಪ್ಪ. ಯಾರೂ ಅವರ ಮನೆಗೆ ಹೋಗುವದಿಲ್ಲ. ಅವರನ್ನೂ ಯಾರೂ ಕರೆಯುವದಿಲ್ಲ. ತಾಪತ್ರಯ ತಪ್ಪಿತು ಎಂತ ಲಿಂಗಪ್ಪನವರೂ ಆ ಬಗ್ಗೆ ವ್ಯಸನ ಪಡುವದಿಲ್ಲ. ಗಂಡ ಹೆಂಡರು ಅವರಿಬ್ಬರೇ ಸುಖದಿಂದ ಇದ್ದಾರೆ ಆ ಬಂಗಲೆಯಲ್ಲಿ....”

ಸಾಯಂಕಾಲ ಕಾಲೇಜಿನತ್ತ ತಿರುಗಾಡಲು ಹೋಗಿದ್ದಾಗ ಸದಾನಂದನ ಮುಂದಿನ ವ್ಯವಸ್ಥೆಯ ವಿಚಾರ ಮಾತು ಹೊರಟಿತು.

“ನೀನು ಯಾವ ಚಿಂತೆಯನ್ನೂ ಇಟ್ಟುಕೊಳ್ಳದೆ ನಮ್ಮಲ್ಲೇ ಊಟ ಮಾಡಿಕೊಂಡು ಇದ್ದುಬಿಡು ಸದಾನಂದಾ,” ಎಂದ ಶಿವಣ್ಣ. ಆ ಮಾತನ್ನಾತ ಹೃತ್ಪೂರ್ವಕವಾಗಿಯೆ ಆಡಿದ್ದ. “ನಾನಂತೂ ಪದವೀಧರನಾಗಲು ಸಾಧ್ಯವಾಗಲಿಲ್ಲ. ನೀನಾದರೂ ಆಗುತ್ತೀಯಲ್ಲಾ. ನೀನಾದರೆ ನಾನೂ ಆದ ಹಾಗೆ.”

“ಛೆ. ಛೆ. ನಿನ್ನ ಮೇಲೆ ಭಾರ ಹೊರಿಸಲು ಮನಸ್ಸು ಬಂದೀತೇ ನನಗೆ? ನಿನ್ನದೇನೋ ನಿಜವಾಗಿ ದೊಡ್ಡ ಮನಸ್ಸು. ಆದರೆ, ನಾನು ವಿಚಾರ ಮಾಡಬೇಕಲ್ಲಾ....” ಎಂದ ಸದಾನಂದ.

ಶಿವಣ್ಣ ನೊಂದ ದನಿಯಲ್ಲಿ ಹೇಳಿದ: “ನೋಡಪ್ಪ, ನೀನು ಸುಖವಾಗಿದ್ದು ಯಾವ ಚಿಂತೆಯನ್ನೂ ಹಚ್ಚಿಕೊಳ್ಳದೆ ಚೆನ್ನಾಗಿ ಓದಿ ಫಸ್ಟ್‌ಕ್ಲಾಸ್ ತೆಗೆದುಕೋಬೇಕು ಅಂತ ನನ್ನ ಆಸೆ.”

"ತೆಗೆದುಕೊಳ್ಳೋಣಂತೆ. ಅದಕ್ಕೇನು! ಮೊದಲು ಒಂದು ರೂಮು ನೋಡಬೇಕು. ಅನಂತರ ಮುಂದಿನ ವಿಚಾರ."

"ಅದಕ್ಕೇನಂತೆ ಅವಸರ ಸದಾನಂದಾ, ಒಂದೆರಡು ತಿಂಗಳವುಟ್ಟಿಗಾದರೂ ನಮ್ಮಲ್ಲಿ ನಿಶ್ಚಿಂತೆಯಿಂದಿದ್ದು ಬಿಡು," ಎಂದ ಶಿವಣ್ಣ. ಗೆಳೆಯನ ಮನಸ್ಸನ್ನು ನೋಯಿಸಬಾರದೆಂದುಕೊಂಡು ಆ ವಿಚಾರ ಹೆಚ್ಚು ಮಾತು ಬೆಳಸಲಿಲ್ಲ ಸದಾನಂದ.

ರಾತ್ರಿ ಎಂಟರ ಸಮಯಕ್ಕೆ ಅವರಿಬ್ಬರೂ ಲಿಂಗಪ್ಪನವರ ಬಂಗಲೆಗೆ ಹೋಗಿ ರಾವ್‌ಸಾಹೇಬರನ್ನು ಕಂಡರು.

"ಓಹೊ, ಸದಾನಂದನೇನು. ಮಧ್ಯಾಹ್ನ ನೀನು ಬಂದದ್ದು ತಿಳಿಯಿತು. ಆಫೀಸಿಗೇ ಬಂದು ಕಾಣಬಹುದಾಗಿದ್ದಿತಲ್ಲ?"

"ಇವರನ್ನು ನೋಡಲು ಹೋಗಿದ್ದೆ," ಎಂದು ಸದಾನಂದ ಶಿವಣ್ಣನ ಪರಿಚಯ ಮಾಡಿಕೊಟ್ಟ.

"ಆಯಿತಲ್ಲ. ಚಲೋದೇ ಆಯ್ತು. ಇರುವದಕ್ಕೆ ರೂಮು ಗೀಮು ನೋಡಿದೆಯಾ?"

"ಸದ್ಯಕ್ಕೆ ನಮ್ಮಲ್ಲಿಯೆ ಇರುತ್ತಾರೆ," ಎಂದ ಶಿವಣ್ಣ.

"ಹೀಗೇನು? ಚಲೋದೇ ಆಯ್ತು. ನಮ್ಮಲ್ಲಿ ಬಹಳ ಅನನುಕೂಲವಪ್ಪ. ನಮ್ಮ ಮನೆಯಲ್ಲೂ ನಮ್ಮವರನ್ನು ಬಿಟ್ಟರೆ ಬೇರೆ ಯಾರೂ ಇಲ್ಲ...."

"ತಮಗೇಕೆ ತ್ರಾಸ ಬಿಡಿರಿ ರಾವ್‌ಸಾಹೇಬರೆ!" ಎಂದ ಶಿವಣ್ಣ.

"ಛೆ. ಛೆ. ತ್ರಾಸ ಏನು ಬಂತು? ನನಗೂ ವಿದ್ಯಾರ್ಥಿಗಳೆಂದರೆ ಬಹಳ ಪ್ರೀತಿ. ಅವರಿಗೆ ಕೈಲಾದಮಟ್ಟಿಗೆ ಸಹಾಯಮಾಡಬೇಕು, ನೆರವಾಗಬೇಕು ಅಂತ ಬಹಳ ಆಸೆ. ಎಷ್ಟೋ ಬಡ ವಿದ್ಯಾರ್ಥಿಗಳು ನನ್ನ ಹತ್ತಿರ ಬರುತ್ತಾರೆ. ಫ್ರೀ ಬೋರ್ಡಿಂಗಿನಲ್ಲಿ ಸ್ಥಳಕ್ಕಾಗಿ, ಸ್ಕೂಲು ಕಾಲೇಜಿನಲ್ಲಿ ಫ್ರೀಶಿಪ್ಪು ಸ್ಕಾಲರ್‌ಶಿಪ್ಪಿಗಾಗಿ. ಎಷ್ಟೋ ಜನರಿಗೆ ಶಿಫಾರಸು ಪತ್ರ ಬರೆದುಕೊಡಬೇಕಾಗುತ್ತದೆ. ಮೊದಲೇ ಹಿಂದುಳಿದ ಸಮಾಜ ನಮ್ಮದು. ನಮ್ಮ ಲಿಂಗಾಯತ ಹುಡುಗರೂ ಬಿ.ಎ.ಎಂ.ಎ. ಪಾಸಾಗಿ ದೊಡ್ಡ ದೊಡ್ಡ ನೌಕರಿ ಹಿಡಿಯಬೇಕು. ಎಲ್ಲಾ ಕ್ಷೇತ್ರಗಳಲ್ಲಿ ಮುಂದೆ ಬರಬೇಕು. ಏನ್ರಪಾ, ಏನಂತೀರಿ ನೀವು?"

ಶಿವಣ್ಣ ದೇಶಾವರದ ನಗೆ ಬೀರುತ್ತ ನುಡಿದ:

“ಹೌದ್ರೀ. ಬರಾಬ್ಬರಿ....ಬರಾಬ್ಬರಿ....”

“ನಮ್ಮ ಹುಡುಗರೆಲ್ಲಾ ಉಚ್ಚ ಶಿಕ್ಷಣ ಪಡೆದು ಆ ಬ್ರಾಹ್ಮಣರನ್ನು ಹಿಂದೆ ಹಾಕಬೇಕು. ಅದಕ್ಕೆಂತೇ ನಮ್ಮ ಹುಡುಗನನ್ನು ಮುಂಬಯಿಗೆ ಕಳಿಸಿದ್ದೇವೆ, ಕಲಿಯಲಿಕ್ಕೆ. ಇಲ್ಲಿಯ ಕನ್ನಡ ಪ್ರೊಫೆಸರುಗಳು ಏನು ಕಲಿಸುತಾರೆ ತಲೆ!”

“ಹಿ ಹಿ,” ಎಂದ ಶಿವಣ್ಣ.

“ಹೂಂ. ಊಟದ ವ್ಯವಸ್ಥೆ ಏನು ಮಾಡಬೇಕಂತ ಇದ್ದೀಯಪಾ ಸದಾನಂದಾ?”

“ನಮ್ಮಲ್ಲೇ ಊಟ ಮಾಡುತಾನೆ,” ಎಂದ ಶಿವಣ್ಣ.

“ಛೆ. ಛೆ. ಹಾಗೆಲ್ಲ ಒಬ್ಬರಿಗೆ ಭಾರವಾಗಬಾರದು ಯಾರೂ. ತಮ್ಮ ವ್ಯವಸ್ಥೆ ತಾವು ಮಾಡಿಕೊಳ್ಳಬೇಕು. ಬಡ ವಿದ್ಯಾರ್ಥಿಗಳಿಗೆ ಅಂತ ಈ ಬೋರ್ಡಿಂಗುಗಳೇ ಇದಾವಲ್ಲ. ನಾನೊಂದು ಶಿಫಾರಸು ಪತ್ರ ಬರೆದುಕೊಟ್ಟರೆ ಈಗಿಂದೀಗ ಸೇರಿಸಿಕೊಳ್ತಾರೆ.”

“ಸೇರಿಸಿಕೊಳ್ಳದೆ ಬಿಡ್ತಾರೇನ್ರೀ!” ಎಂದ ಶಿವಣ್ಣ.

“ಹಾಗೇ ಮಾಡಪ್ಪಾ ಸದಾನಂದಾ. ಫ್ರೀ ಬೋರ್ಡಿಂಗಿಗೆ ಸೇರಿಬಿಟ್ಟರೆ ಯಾವ ಚಿಂತೆಯೂ ಇಲ್ಲ. ಮುಂದೆ ಫೀಜು, ಪುಸ್ತಕ ಮೊದಲಾದವುಗಳಿಗೆ ನಾಲ್ಕೈದು ಜನ ಶ್ರೀಮಂತರಿಂದ ಹಣ ಕೊಡಿಸ್ತೀನಿ ನಾನೇ.”

ಸದಾನಂದ ಮಾತನಾಡಲಿಲ್ಲ. “ನಾವಿನ್ನು ಹೊರಡುತೇವೆ ಸಾಹೇಬರೆ,” ಎಂದು ಶಿವಣ್ಣನೂ ಎದ್ದುನಿಂತ.

“ಹೊರಡುತೀರಾ? ಇಲ್ಲೇ ಊಟ ತೀರಿಸಿಕೊಂಡು ಹೋಗಬಹುದಿತ್ತಲ್ಲಾ?”

“ಏನೂ ಬೇಡ ಬಿಡಿರಿ. ನಮ್ಮಲ್ಲೂ ಊಟವಾಗುತ್ತದೆ,” ಎಂದ ಶಿವಣ್ಣ.

ಟ್ರಂಕು ಹಾಸಿಗೆಗಳನ್ನು ತೆಗೆದುಕೊಂಡು ಮನೆಗೆ ಬರುತ್ತಿದ್ದ ಹಾಗೆ ಶಿವಣ್ಣನೆಂದ:

“ಮನುಷ್ಯ ಅಷ್ಟೇನು ಜಿಪುಣನಲ್ಲ ಸದಾನಂದ, ಶಿಫಾರಸು ಪತ್ರಗಳನ್ನಾದರೂ ಕೊಡುವಷ್ಟು ಔದಾರ್ಯವಿದೆಯಲ್ಲ!”

“ ನಿಜ. ಅಷ್ಟಾದರೂ ಇದೆಯಲ್ಲ ?”

“ ಅನೇಕರಿಗೆ ಅದೂ ಇರುವದಿಲ್ಲ. ಬಡವರನ್ನು ನೋಡಿದ ಕೂಡಲೆ ಗುರ್ರೆಂದು ನಾಯಿಯ ಹಾಗೆ ಮೈಮೇಲೆ ಬೀಳುತ್ತಾರೆ. ರಾವ್ ಸಾಹೇಬರು ಹಾಗೇನೂ ಮಾಡಲಿಲ್ಲವಲ್ಲ. ಬೋರ್ಡಿಂಗಿಗೆ ಸೇರಿಸುತೀನಿ ಅಂತಲೂ ಹೇಳಿದರು.”

“ ಫ್ರೀ ಬೋರ್ಡಿಂಗು ಅಂದರೆ ಮೈಮೇಲೆ ಮುಳ್ಳು ಬಂದ ಹಾಗಾಗುತ್ತದೆ ನನಗೆ. ಹೈಸ್ಕೂಲಿನಲ್ಲಿದ್ದಾಗ ಒಂದು ವರ್ಷ ಒಂದು ಬೋರ್ಡಿಂಗಿನಲ್ಲಿದ್ದೆನಲ್ಲ. ಊಟ ಮಾಡುವಾಗಲೇ ಕೆನ್ನೆಗೆ ಬಡಿಯುತಿದ್ದ ಆ ಸ್ವಾಮಿ. ಅಂದಿನಿಂದ ಫ್ರೀ ಬೋರ್ಡಿಂಗು ಅಂದರೆ ಜುಗುಪ್ಸೆಯಾಗುತ್ತದಪ್ಪಾ. ಈ ಬೋರ್ಡಿಂಗುಗಳಲ್ಲಿರುವದಕ್ಕಿಂತ ಕೂಲಿಮಾಡಿ ಹೊಟ್ಟೆ ತುಂಬಿಸಿಕೊಳ್ಳುವದು ಮೇಲು.”

ನಾಲ್ಕೈದು ದಿನಗಳವರೆಗೆ ಶಿವಣ್ಣನ ಮನೆಯಲ್ಲಿ ನೆಮ್ಮದಿಯಿಂದ ಕಾಲ ಕಳೆದುದಾಯಿತು. ಆದರೆ, ಹಾಗೆಯೆ ಹೆಚ್ಚು ದಿನ ಅಲ್ಲಿ ತಳವೂರುವ ಮನಸ್ಸಿರಲಿಲ್ಲ ಸದಾನಂದನಿಗೆ. “ ರೂಮು ನೋಡೋಣ ” ಎಂದು ಆತ ಮತ್ತೆ ಮತ್ತೆ ಒತ್ತಾಯಪಡಿಸಿದ ತರುವಾಯ ಶಿವಣ್ಣ ತನ್ನ ಹಳೆಯ ಸ್ನೇಹಿತ ಕೊಟಬಾಗಿಯೊಡನೆ ಮಾತನಾಡಿ ಸದಾನಂದನನ್ನೂ ಅವನ ಕೊಟಡಿಗೆ ಸೇರಿಸಲು ನಿಷ್ಕರ್ಷಿಸಿದ. ಸದಾನಂದನ ಕೀರ್ತಿಯನ್ನು ಕೇಳಿ ಅವನ ಬಗೆಗೆ ಆದರ ಭಾವವಿಟ್ಟುಕೊಂಡಿದ್ದ ಕೊಟಬಾಗಿಯೂ ಅವನನ್ನು ತುಂಬ ಸಂತೋಷದಿಂದ ಸ್ವಾಗತಿಸಿದ. ಮಹಾಲಿಂಗಪ್ಪನ ಖಾನಾವಳಿಯಲ್ಲಿ ಊಟದ ವ್ಯವಸ್ಥೆಯೂ ಆಯಿತು.

“ ಎಲ್ಲ ಸರಿ. ಆದರೆ ಹಣಕ್ಕೇನು ಮಾಡೋಣ ಶಿವಣ್ಣ ?”

“ ಅದರ ಚಿಂತೆ ಮಾಡಬೇಡ. ಏನಾದರೂ ಮಾಡಿದರಾಯಿತು,” ಎಂದು ಶಿವಣ್ಣ ಸಮಾಧಾನ ಹೇಳಿದ.

## ೭

" ಸುರುವಾಯ್ತಲ್ಲೇ ಶಾಂತೀ ?" ಎಂದಳು ಲೀಲಾ.

" ಏನು ಸುರುವಾಯ್ತೋ ?"

" ಸುರುವಾಯ್ತಲ್ಲ ಕೋತಿಯಾಟ!" ಎಂದು ನುಡಿದು ಕಿಲಕಿಲನೆ ನಕ್ಕಳು ಲೀಲಾ.

" ಅಂದರೆ ?"

" ಪೋರ್ಚಿನಲ್ಲಿ ನೋಡಲಿಲ್ಲವೇನೇ ?"

" ಓ, ಅದೇ !" ಎಂದು ಶಾಂತಳೂ ನಕ್ಕಳು.

" ನಾವಿನ್ನೂ ಹೈಸ್ಕೂಲಲ್ಲಿದ್ದಾಗ ವಿಚಾರ ಮಾಡುತಿದ್ದೆವಲ್ಲ ಶಾಂತೀ, ಕಾಲೇಜಿನ ಮಜಾ ಅಂದರೆ ಹ್ಯಾಗಿರುತದೋ ಅಂತ. ಮೊದಲನೇ ಮಜಾ ಅಂದರಿದೇ ನೋಡು, ಪೋರ್ಚಿನ ಪೋರ್ಟರುಗಳದ್ದು."

" ಪೋರ್ಟರುಗಳು !" ಆ ಮಾತು ಬಲು ಮೋಜಿನದಾಗಿ ಕಾಣಿಸಿತು ಶಾಂತಾಗೆ.

" ಪೋರ್ಟರುಗಳಲ್ಲವಾದರೆ ಬಟ್ಲರುಗಳು ಅನ್ನು. ಯಾವಾಗಲೂ ಪೋರ್ಚಿನಲ್ಲಿ ನಿಂತು ವಿದ್ಯಾರ್ಥಿನಿಯರನ್ನ ಸ್ವಾಗತಿಸುವದೇ ಅವರ ಕೆಲಸ."

" ಅಷ್ಟೇ ಅಂತ ಕಾಣುತ್ತದೆ. ಅಲ್ಲೇ ಲೀಲಾ, ಇವರು ಇದಕ್ಕಾಗೇ ಕಾಲೇಜಿಗೆ ಬರುತ್ತಾರೇನೇ ಅಂತ ಆಶ್ಚರ್ಯ ನನಗೆ."

" ಮತ್ತೇತಕ್ಕೆ ಬಂದಾರು ಇವರು ? ಆ ಸುಮಿತ್ರಾ ಪಾಟೀಲ ಇದಾಳಲ್ಲ –

ಆಕೆ ಹೇಳುತಿದ್ದಳು ನನಗೆ. ಪೋರ್ಚಿನಲ್ಲಿ ನಿಂತು ಹುಡುಗಿಯರನ್ನು ಪೀಡಿಸುವ ಪೋಲಿಗಳದೊಂದು ಗ್ಯಾಂಗೇ ಇದೆಯಂತೆ. ಅವರು ಕ್ಲಾಸಿಗೆಂದೂ ಅಟೆಂಡಾಗುವದಿಲ್ಲವಂತೆ. ಇಂದೇ ಕಾಲೇಜು ಸುರುವಾದದ್ದು. ಆಗಲೇ ನಿನಗವರು ಒಂದು ಹೆಸರಿಟ್ಟು ಬಿಟ್ಟರು....ಗುಲಾಬ್ ಜಾಮೂನ್....ಹ ಹ ಹ್ಹ....ಗುಲಾಬ್ ಜಾಮೂನ್...." ಎನ್ನುತ್ತಾ ಮತ್ತೆ ನಗತೊಡಗಿದಳು ಲೀಲಾ.

" ನಾನು ಗುಲಾಬ್ ಜಾಮೂನ್...ನೀನು ಬಟಾಟೆ ಬೋಂಡಾ....ಅಂತೂ ಇವರೂ ಬೃಹಸ್ಪತಿಗಳೇ ಇರಬೇಕು ಬಿಡೇ!"

" ಇನ್ನೂ ಈಗ ಸುರುವಾಯ್ತು ಅಷ್ಟೆ. ಇನ್ನೊಂದು ತಿಂಗಳೊಪ್ಪತ್ತು ಕಳೆದ ಬಳಿಕ ನೋಡುವಿಯಂತೆ ಮಜಾ," ಎಂದಳು ಲೀಲಾ.

" ಏನು ಮಜಾನೋ ಬಿಡವ್ವಾ. ಚೆನ್ನಾಗಿ ಅಭ್ಯಾಸಮಾಡಿ ಒಂದು ಪದವಿ ದೊರಕಿಸಬೇಕು ಮೊದಲು. ನಿನ್ನ ಹಾಗೆ ಮಜಾ ಮಾಡುವಂಥ ಪರಿಸ್ಥಿತಿಯೂ ನನ್ನದಲ್ಲವಲ್ಲ...." ಇಳಿದ ದನಿಯಲ್ಲಿ ಶಾಂತಾ ಹೇಳಿದಳು. " ಇವತ್ತು ಪ್ರಿನ್ಸಿಪಾಲರೂ ತಮ್ಮ ಭಾಷಣದಲ್ಲಿ ಇದೇ ಮಾತೇ ಹೇಳಿದರಲ್ಲ. ನಾವು ಜವಾಬ್ದಾರಿಯಿಂದ ಓದಿ ಮುಂದೆ ಬರಬೇಕು."

" ಓದುವ ಹಾಗೆ ಓದಬೇಕು. ಮಜಾ ಮಾಡುವ ಹಾಗೆ ಮಾಡಬೇಕು. ಬರೀ ಬುಕ್‌ವರ್ಮ್ ಆಗುವದರಿಂದೇನು ಉಪಯೋಗ? ನಾನಂತೂ ನಿಶ್ಚಯ ಮಾಡಿಬಿಟ್ಟದ್ದೇನೆ. ನಾಲ್ಕು ವರ್ಷ ಕಾಲೇಜಿನಲ್ಲಿ ನಗುನಗುತಾ ಕಳೆಯೋದು ಅಂತ."

" ನೀನು ಭಾಗ್ಯವಂತೆ ಲೀಲಾ. ನಿನ್ನಂಥ ಭಾಗ್ಯ ನನಗೆಲ್ಲಿಯದು?"

" ಏನದು ಅಜ್ಜಿಯರ ಹಾಗೆ ಭಾಗ್ಯ ಗೀಗ್ಯ ಅಂತ ಮಾತಾಡಲು ಸುರು ಮಾಡಿದಿಯಲ್ಲ!"

ಶಾಂತಾ ಒಡನೆಯೆ ಉತ್ತರವೀಯಲಿಲ್ಲ. ಒಂದೆರಡು ನಿಮಿಷ ಮೌನವಾಗಿ ನಡೆಯುತ್ತಿದ್ದು ಅನಂತರ ಮಾತಾಡಿದಳು:

" ಸದಾನಂದ ಅಂತ ಒಬ್ಬರು ಕವಿಯಿದ್ದಾರೆ, ನೆನಪಿರಬಹುದಲ್ಲ ನಿನಗೆ ಲೀಲಾ?"

" ಸದಾನಂದ? ಯಾವ ಸದಾನಂದ?"

" ನಾವು ಹೈಸ್ಕೂಲಿನಲ್ಲಿದ್ದಾಗ ಒಮ್ಮೆ ಅವರ ಪದ್ಯ ಓದಿದ್ದೆವಲ್ಲೇ!" ಎಂದಳು ಶಾಂತಾ.

" ಏನೋ ಬಿಡವ್ವ. ಯಾರ್‍ಯಾರ ಪದ್ಯ ಓದಿದ್ದೆವೋ. ಎಲ್ಲಾ ಎಲ್ಲಿ ನೆನಪಿಡಲಿಕ್ಕಾಗುತದೆ? ಹೂಂ. ಏನಾಯಿತೀಗ? ಒಮ್ಮಿಂದೊಮ್ಮೆಲೆ ಈ ಕವಿಯ ಮಾತು?" ಎಂದು ಹುಬ್ಬುಗಳನ್ನೇರಿಸಿ ಕೇಳಿದಳು ಲೀಲಾ.

" ನೀನು ಬಿಲ್ಲು ಹೆದೆಯೇರಿಸುವದಕ್ಕೇನೂ ಕಾರಣವಿಲ್ಲ. ಈಗ ಅವರ ಮಾತು ಬರಲಿಕ್ಕೆ ಕಾರಣ ಇಷ್ಟೆ. ಸವಾಯಿ ಕೀಟ್ಸ್ ರೂಮಿಗೆ ಇಂದು ಮುಂಜಾನೆ ಅವರು ಬಂದರು."

" ಅಂದರೆ? ಅಲ್ಲಿಯೆ ಇರುವವರಂತೇನು?"

" ಹೌದು."

" ಸರಿಹೋಯಿತೇಳು. ಸವಾಯಿ ಕೀಟ್ಸನಿಗೊಬ್ಬ ಸವಾಯಿ ಷೆಲ್ಲಿಯೋ ಬೈರನ್ನೋ ಭೆಟ್ಟಿಯಾದಂತಾಯಿತು. ಹೌದೇ ಶಾಂತಿ, ಹ್ಯಾಗಿದ್ದಾರೇ ಅವರು ನೋಡುವದಕ್ಕೆ? ಷೆಲ್ಲಿ ಬೈರನ್ ಇದ್ದ ಹಾಗಿಲ್ಲ ಹೌದಲ್ಲೋ?"

ಆ ಮಾತಿಗೆ ಉತ್ತರವೀಯಲಾರದೆ ಸುಮ್ಮನಾದಳು ಶಾಂತಾ. ಉತ್ತರ ವೀಯುವುದಾದರೂ ಏನೆಂದು? ಸದಾನಂದನ ರೂಪು ಯಾರ ಹಾಗಿದೆ? ಷೆಲ್ಲಿಯನ್ನು ಹೋಲುತ್ತದೆಯೆ? ಬೈರನ್ ಅನ್ನು ಹೋಲುತ್ತದೆಯೆ?

" ಮುಂಜಾನೆ ಬಂದರು ಅನ್ನುತ್ತೀ. ಈ ವೇಳೆಗಾಗಲೆ ಪರಿಚಯ ವಾಯಿತೇನೇ ಅವರದು?"

" ಇಲ್ಲವ್ವ. ಇಷ್ಟು ಬೇಗ ಹ್ಯಾಗೆ ಪರಿಚಯವಾದೀತು? ವೆಂಕಣ್ಣನಿಗೆ ಪರಿಚಯಮಾಡಿಕೊಟ್ಟನಂತೆ ಕೊಟಬಾಗಿ."

" ಈ ಸದಾನಂದ ಹ್ಯಾಗಿದ್ದಾರೆ, ಹೇಳಲೇ ಇಲ್ಲವಲ್ಲೇ?"

" ಅದನ್ನೇನು ಹೇಳುವದೇ? ಇದ್ದಾರೆ ನೂರು ಜನ ಇದ್ದ ಹಾಗೆ," ಎಂದೇನೋ ಅವಳು ನುಡಿದಳಾದರೂ ಅವಳ ಮನಸ್ಸು ಮಾತ್ರ ತನ್ನಷ್ಟಕ್ಕೆ ತಾನೆ ಹೇಳಿಕೊಂಡಿತು: " ಛೆ. ನೂರು ಜನರ ಹಾಗೆ ಇವರೂ ಅಲ್ಲ. ನೂರು ಜನರಲ್ಲಿ ಎದ್ದು ಕಾಣುವಂಥ ವ್ಯಕ್ತಿಯಿದು!"

" ಸರಿ. ಇದುವರೆಗೆ ಒಬ್ಬನೇ ಆರಾಧಕನಿದ್ದ. ಇನ್ನು ಇಬ್ಬರಾಗುತ್ತಾರೆ.

ನಮ್ಮ ಗುಲಾಬ್‌ಜಾಮೂನ್‌ಗಾಗಿ ಅವರಿಬ್ಬರಲ್ಲಿ ಬಡಿದಾಟ ಸುರುವಾದರೆ ಬಹಳ ಮಜಾ ಆಗುವದು!" ಎಂದು ತುಂಟತನದಿಂದ ನುಡಿದಳು ಲೀಲಾ.

"ನಿನ್ನದು ಯಾವಾಗಲೂ ಚೇಷ್ಟೆಯೇ. ಎಲ್ಲರೂ ಕೊಟಬಾಗಿಯ ಹಾಗೇ ಇರುವರೇನೇ?"

"ಸ್ವಲ್ಪ ಹೆಚ್ಚು ಕಡಿಮೆ ಹಾಗೇ ಇರುತ್ತಾರೆ. ಗಂಡಸರ ವಿಷಯ ನನಗೆ ಗೊತ್ತಿದ್ದಷ್ಟು ನಿನಗೇನು ಗೊತ್ತು?"

"ಬಲೆ ಗೊತ್ತು!"

"ಅದಿರಲಿ. ವಯಸ್ಸೆಷ್ಟು ನಿನ್ನ ಈ ಕವಿರಾಜಂದು?"

"ಇಪ್ಪತ್ತೆರಡು ಇಪ್ಪತ್ಮೂರು ಇರಬಹುದು."

"ಆಯಿತೇಳು. ಎಲ್ಲಾ ಸರಿಯಾಯಿತು!" ಎಂದು ಅರ್ಥಪೂರ್ಣವಾಗಿ ನಕ್ಕಳು ಲೀಲಾ.

"ಏನೇ, ಬಹಳ ನಗುತ್ತೀ?"

ಲೀಲಾ ಮತ್ತೆ ಮೃದುವಾಗಿ ನಗುತ್ತಾ, "ಒಬ್ಬರದು ಇಪ್ಪತ್ತೆರಡು, ಇನ್ನೊಬ್ಬರದು ಹದಿನೇಳು! ಸರಿ ಹೋಯಿತು ಅಂದೆ!" ಎಂದಳು.

"ನಿನ್ನ ಚಾಳಿ ನೀನೆಲ್ಲಿ ಬಿಟ್ಟೀಯೇ! ಅವರು ಯಾರೋ ಯಾವ ಜಾತಿಯವರೋ, ಅವರ ಸ್ವಭಾವ ಹ್ಯಾಗಿದೆಯೋ. ಈಗಾಗಲೆ ಜತೆ ಕೂಡಿಸ ಹತ್ತಿದೆಯಲ್ಲ!"

"ಅದನ್ನೆಲ್ಲ ತಗೊಂಡೇನು ಮಾಡೂದು ಬಿಡೇ. ಈಗಿನ ಕಾಲದಲ್ಲಿ ಜಾತಿ ಗೀತಿ ಯಾರು ನೋಡ್ತಾರೆ?"

"ನಾವು ನೋಡದಿದ್ದರೂ ಸಮಾಜ ನೋಡ್ತದಲ್ಲ?"

"ಯಾರು ಕೇಳ್ತಾರೇ ಆ ಸಮಾಜವನ್ನ?"

"ಮನೆಯವರನ್ನಾದರೂ ಕೇಳಬೇಕಲ್ಲ ಲೀಲಾ?"

"ಕೇಳುವ ಹಾಗೆ ಕೇಳೂದು. ಹೆಚ್ಚು ಮಹತ್ವ ಮಾತ್ರ ಕೊಡಬಾರದು."

"ನೀನಾಡುವ ಮಾತು ಕೇಳಿದರೆ ನೀನು ಖಚಿತವಾಗಿ ಬೇರೆ ಜಾತಿಯವರನ್ನು ಮದುವೆಯಾಗುತ್ತೀ ಅಂತನಿಸುತದೆ ನನಗೆ."

"ನೋಡೋಣ ಯಾರನ್ನ ಆಗುತೇನೊ. ಅಥವಾ ಆಗುವದೇ ಇಲ್ಲವೊ."

"ಹಾ?"

"ನಿಜ ಹೇಳಲೇ ಶಾಂತೀ? ಮದುವೆಯನ್ನೇ ಆಗದೆ ಹಾಗೇ ಇದ್ದು ಬಿಡಬೇಕು ಅನ್ನಿಸುತದವ್ವಾ ನನಗೆ. ಮದುವೆಯೆಂದರೆ ಮತ್ತೆ ಒಂದು ಬಂಧನಕ್ಕೆ ಸಿಕ್ಕಿಕೊಳ್ಳೂದೇ ಅಲ್ಲವೇನೇ? ಗಂಡ, ಮನೆ, ಸಂಸಾರ, ಮಕ್ಕಳು....ಆ ಮೇಲೆ ನಾವೂ ಎಲ್ಲರ ಹಾಗೇ ಆಗುವವರು. ಅದಕ್ಕಾಗಿ ಮದುವೆಯನ್ನೇ ಆಗದ ಹಾಗೇ ಸ್ವತಂತ್ರಳಾಗಿ ಇದ್ದರೆ ಎಷ್ಟು ಒಳ್ಳೆಯದು! ಯಾವ ಬಂಧನವೂ ಇಲ್ಲ. ಯಾರ ಹಂಗೂ ಇಲ್ಲ."

ಗಂಭೀರವಾದ ದನಿಯಲ್ಲಿ ಶಾಂತಾ ಹೇಳಿದಳು: "ನನಗೂ ಒಂದೊಂದು ಬಾರಿ ಹಾಗೇ ಅನ್ನಿಸುತದೆ ಲೀಲಾ. ಮದುವೆಯಾಗಿ ಮಕ್ಕಳನ್ನ ಹೆರುವದಕ್ಕಾಗೇ ಹೆಂಗಸರಾದ ನಾವು ಹುಟ್ಟಿದ್ದೇವೆಯೆ? ಬೇರೆ ಯಾವ ಜವಾಬ್ದಾರಿಗಳನ್ನು ನಾವು ವಹಿಸಿಕೊಳ್ಳಲಾರೆವೇ? ಗಂಡಸರ ಹಾಗೆ ನಾವೂ ಬೇರೆ ಬೇರೆ ರಂಗ ಗಳಲ್ಲಿ ಮುಂದೆ ಬಂದು ಕೆಲಸ ಮಾಡಬಾರದೇಕೆ?"

"ಯುರೋಪು ಅಮೇರಿಕಾ ರಶಿಯಾಗಳಲ್ಲಿ ಹೆಂಗಸರು ಗಂಡಸರಿಗೆ ಯಾವ ರಂಗದಲ್ಲೂ ಹಿಂದೆ ಬಿದ್ದಿಲ್ಲವಲ್ಲ ಶಾಂತೀ. ಹಿಂದುಳಿದವರು ಅಂದರೆ ನಾವೇ ಭಾರತದ ಹೆಂಗಸರು. ಅದರಲ್ಲೂ ಕರ್ನಾಟಕದ ಹೆಂಗಸರಷ್ಟು ಯಾರೂ ಹಿಂದೆ ಬಿದ್ದಿರಲಿಕ್ಕಿಲ್ಲ ನೋಡು. ಮಹಾರಾಷ್ಟ್ರೀಯ ಸ್ತ್ರೀಯರನ್ನ ನೋಡು ತ್ತಿದ್ದೀಯಲ್ಲಾ – ಎಷ್ಟು ಮುಂದುವರಿದಿದ್ದಾರೆ, ಎಷ್ಟು ಸುಧಾರಿಸಿದ್ದಾರೆ. ಎಂ.ಬಿ.ಬಿ.ಎಸ್. ಎಲ್.ಸಿ.ಪಿ.ಎಸ್. ಆಗಿ ಡಾಕ್ಟರಾದವರು ನೂರಾರು ಮಂದಿ. ಕತೆಗಾರ್ತಿಯರು, ಕಾದಂಬರಿಕಾರ್ತಿಯರು ಕವಯಿತ್ರಿಯರು ನೂರಾರು ಮಂದಿ. ಸಂಗೀತಗಾರ್ತಿಯರಿಗಂತೂ ಲೆಕ್ಕವಿಲ್ಲ – ಕರ್ನಾಟಕದಲ್ಲೋ? ಏನೂ ಕೇಳ ಬೇಡ."

"ಇದಕ್ಕೆ ಕಾರಣ ಏನಿರಬಹುದು ಲೀಲಾ?"

"ಇನ್ನೇನು ಕಾರಣವಿದ್ದೀತು? ನಾವು ಹೀಗೆ ಹಿಂದೆ ಬೀಳಲು ನಮ್ಮ ಗಂಡಸರೇ ಕಾರಣ. ಮುಂಡೆ ಹೋಗುವ ತಾಕತ್ತು ಮೊದಲು ಅವರಲ್ಲೇ ಇಲ್ಲ. ಇನ್ನು ನಮ್ಮನ್ನು ಮುಂದಕ್ಕೆ ಬಿಟ್ಟಾರೇ ಇವರು? ಅವರಿಗಿಂತ ನಾವು ಮುಂದೆ ಹೋದರೆ ಇವರ ಮರ್ಯಾದೆಗೆ ಕುಂದು ಅಲ್ಲವೇನೇ! ಆದರೆ ನಾ ಮಾತ್ರ ಯಾರು ಅಡ್ಡ ಬಂದರೂ ಕೇಳುವವಳಲ್ಲ. ನನ್ನ ಹಾದಿಯಲ್ಲಿ ಹೋಗುವವಳೇ."

ಮಾತನಾಡುತ್ತಿದ್ದ ಹಾಗೆ ಅವರು ಶಾಂತಳ ಮನೆಯ ಹತ್ತಿರ ಬಂದಿದ್ದರು.

ಅಲ್ಲಿಂದ ತುಸು ದೂರದಲ್ಲಿಯೆ ಲೀಲಳ ಮನೆ. ಇಪ್ಪತ್ತು ಸಾವಿರ ರೂಪಾಯಿಗಳ ವರೆಗೂ ವ್ಯಯಿಸಿ ವಕೀಲ ಶ್ಯಾಮರಾಯರು ಅದನ್ನು ಹೊಸದಾಗಿ ಕಟ್ಟಿಸಿದ್ದರು. ಮನೆ ಹೊಸ ಮಾದರಿಯದಾಗಿದ್ದು ತನ್ನ ಆಕರ್ಷಣೆಯಿಂದಾಗಿ ಆ ಭಾಗದಲ್ಲೆಲ್ಲ ಎದ್ದು ಕಾಣುತ್ತಿತ್ತು. ಮಹಡಿಯ ಮೇಲಿನ ಎರಡು ಕೊಟಡಿಗಳಲ್ಲೊಂದು ಲೀಲಳದಾಗಿತ್ತು. ಇನ್ನೊಂದನ್ನು ಅವಳ ತಂಗಿ ರಮಾ ಹಿಡಿದುಕೊಂಡಿದ್ದಳು. ರಮಾ ಇನ್ನೂ ಹದಿಮೂರು ವರ್ಷಗಳ ಹುಡುಗಿ. ಹೈಸ್ಕೂಲಿನಲ್ಲಿ ಓದುತ್ತಿದ್ದಳು. ತಂದೆ ತಾಯಿಗಳಿಗೆ ಅವರಿಬ್ಬರೇ ಮಕ್ಕಳು. ಗಂಡು ಮಕ್ಕಳಿರಲಿಲ್ಲವಾದ್ದರಿಂದ ತಂದೆ ತಾಯಿಗಳು ಆ ಇಬ್ಬರು ಹೆಣ್ಣು ಮಕ್ಕಳನ್ನೇ ಬಹಳ ಪ್ರೀತಿಯಿಂದ ಬೆಳೆಸಿದ್ದರು. ಮೊದಲನೆಯ ಮಗಳಾದುದರಿಂದ ಲೀಲಳಂತೂ ಮೊದಲಿನಿಂದಲೂ ಸಲುಗೆಯ ವಾತಾವರಣದಲ್ಲೇ ಬೆಳೆದು ಬಂದಿದ್ದಳು. ಮನೆಯಲ್ಲಿ ಅವಳಿಗೆ ಯಾವ ಬಗೆಯ ನಿರ್ಬಂಧವೂ ಇರಲಿಲ್ಲ. "ಲೀಲಳನ್ನು ಎಲ್‌ಎಲ್. ಬಿ. ವರೆಗೂ ಓದಿಸಿ ಅಡ್ವೊಕೇಟಳನ್ನಾಗಿ ಮಾಡುತ್ತೇನೆ," ಎಂದು ಆಗಾಗ ತಮ್ಮ ಗೆಳೆಯರೆದುರಿಗೆ ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದರು ಶ್ಯಾಮರಾಯರು. ಲೀಲಳಿಗೂ ಆ ಮಹತ್ವಾಕಾಂಕ್ಷೆಯಿರದಿರಲಿಲ್ಲ. ತಮ್ಮ ಸಮಾಜದಲ್ಲಿ, ಅಷ್ಟೇ ಏಕೆ ಈ ನಗರದಲ್ಲಿಯೆ ಮಹಿಳಾ ವಕೀಲರಿಲ್ಲ; ತಾನೇ ಮೊದಲನೆಯ ಲೇಡೀ ಅಡ್ವೊಕೇಟ್ ಆಗಿ ಮೆರೆಯಬೇಕು ಎಂದು ಅವಳ ಯೋಚನೆ.

"ಸ್ವಲ್ಪ ಚಹಾ ತಗೊಂಡು ಹೋದೀಯಂತೆ. ಬಾರೇ," ಎಂದು ಗೆಳತಿಯನ್ನು ಕರೆದಳು ಶಾಂತಾ.

"ಚಹಕ್ಕೇನಂತೆ. ನಡೀ. ಬರ್ತೀನಿ."

ಅವರಿಬ್ಬರೂ ಶಾಂತಳ ಮನೆಯಲ್ಲಿ ಅಡಿಯಿರಿಸುತಿದ್ದ ಹಾಗೆ ವೆಂಕಟೇಶನ ಕೊಟಡಿಯಿಂದ ಅವನ ದನಿ ಕೇಳ ಬಂದಿತು :

"ಶಾಂತಾ, ಲೀಲಾ, ಇಲ್ಲಿಗೇ ಬರ್ರಿ."

"ಯಾಕಪ್ಪ ?" ಏನು ಕೆಲಸ ?" ಎಂದಳು ಶಾಂತಾ.

ವೆಂಕಟೇಶ ತನ್ನ ಕೊಟಡಿಯ ಬಾಗಿಲಲ್ಲಿ ಬಂದು, "ಏನೂ ಇಲ್ಲ - ನಮ್ಮ ಗೆಳೆಯರು ಸದಾನಂದ ಬಂದಿದ್ದಾರೆ. ಪರಿಚಯ ಮಾಡಿಕೊಡ್ತೇನೆ, ಬರ್ರಿ."

"ಈಗ ಬಂದೆ, ಪುಸ್ತಕ ಇಟ್ಟು," ಎನ್ನುತ್ತಾ ತನ್ನ ಕೊಟಡಿಗೋಡಿದಳು ಶಾಂತಾ. ಅವಳ ಎದೆ ವೇಗವಾಗಿ ಬಡಿದುಕೊಳ್ಳತೊಡಗಿತು. ಒಂದು ಬಗೆಯ

ಅಧೈರ್ಯ ಅವಳ ಶರೀರವನ್ನೆಲ್ಲ ವ್ಯಾಪಿಸಿತು. ತನ್ನ ಅವಸ್ಥೆಯನ್ನು ಗುರುತಿಸಿ ಕೊಂಡಾಗ ಅವಳಿಗೆ ಕೊಂಚ ಆಶ್ಚರ್ಯವಾಗದಿರಲಿಲ್ಲ. ತಾನಿಷ್ಟು ಉದ್ರಿಕ್ತಳಾಗಲು ಕಾರಣವೇನೂ ಇಲ್ಲ. ಅಶಿಕ್ಷಿತ ಮುಗ್ಧ ಹುಡುಗಿಯಂತೆ ವರ್ತಿಸುತ್ತಿರುವೆನಲ್ಲ ತಾನು. ವೆಂಕಣ್ಣನ ಸ್ನೇಹಿತರೆಷ್ಟು ಜನರೊಡನೆ ತನಗೆ ಪರಿಚಯವಿಲ್ಲ? ಅವರೆಲ್ಲರ ಜತೆಗೆ ನಿಸ್ಸಂಕೋಚವಾಗಿ ಮಾತನಾಡುವ ನಾನು ಇಂದು ಮಾತ್ರ ಹೀಗೆ ಮಾಡುವುದು ಹಾಸ್ಯಾಸ್ಪದವಲ್ಲವೆ?

ಪುಸ್ತಕಗಳನ್ನು ಮೇಜಿನ ಮೇಲಿಟ್ಟು ಅವಳು ನಿಧಾನವಾಗಿ ಬಾಗಿಲಿನತ್ತ ಹೊರಳಿದಳು. ತನ್ನ ಜತೆಗೆ ಲೀಲಳೂ ಬಂದಿರಬಹುದೆಂದು ಅವಳು ಭಾವಿ ಸಿದ್ದಳು. ಆದರೆ ಲೀಲಾ ಆಗಲೆ ವೆಂಕಟೇಶನ ಕೊಟಡಿಯಲ್ಲಿ ಸೇರಿ ಸದಾನಂದನ ಪರಿಚಯ ಮಾಡಿಕೊಂಡು ಅವರಿಬ್ಬರೊಡನೆ ಮುಕ್ತಮನಸ್ಸಿನಿಂದ ಹರಟೆ ಗಾರಂಭಿಸಿದ್ದಳು.

"ಲೀಲಳ ದಿಟ್ಟತನ ನನ್ನಲ್ಲಿಲ್ಲ ಅನ್ನುವದೇ ನಿಜ," ಎಂದು ತನ್ನಷ್ಟಕ್ಕೇ ಹೇಳಿಕೊಳ್ಳುತ್ತ ಶಾಂತಾ ಸಹಜವಾಗಿ ಕನ್ನಡಿಯಲ್ಲಿ ಮುಖ ನೋಡಿಕೊಂಡಳು.

"ಯಾಕೆ ಅಂಜುತ್ತೀಯೇ ಹುಡುಗೀ! ನಿನ್ನಂಥ ಚೆಲುವೆ ಅಧೈರ್ಯ ಪಡಬೇಕಾದ ಅಗತ್ಯವೇನು?" ಎಂದು ಅವಳ ಪ್ರತಿಬಿಂಬ ನಕ್ಕು ನುಡಿದಂತೆ ಭಾಸವಾಯಿತು.

"ಹೌದೇ? ನಾನು ನಿಜಕ್ಕೂ ಚೆಲುವೆಯೇ?" ಎಂದು ಆ ಪ್ರತಿ ಬಿಂಬವನ್ನು ಮೂಕವಾಗಿ ಪ್ರಶ್ನಿಸುತ್ತಾ ಅವಳು ಮುಂಗುರುಳು ತಿದ್ದಿಕೊಂಡು, ಮೂಗಿನ ಮೇಲೆ ಬೆರಳನ್ನಾಡಿಸುತ್ತ ಒಂದು ನಿಮಿಷ ಹಾಗೆಯೆ ನಿಂತು ಕೊಂಡಿದ್ದಳು. ಬಿಸಿಲಲ್ಲಿ ನಡೆದುಬಂದುದಾಗಿದೆ, ಮುಖ ತೊಳೆದುಕೊಂಡು ಅವರನ್ನು ಕಾಣಲು ಹೋಗುವುದು ಒಳ್ಳೆಯದಲ್ಲವೆ? ಎಂದೂ ಅವಳಿಗೆನ್ನಿಸಿತು. ಮರುಕ್ಷಣವೆ ತಾನು ಹಾಗೆ ಮಾಡುವುದು ಉಚಿತವಾಗಲಾರದೆಂದೂ ಹೊಳೆಯಿತು. ವಧುಪರೀಕ್ಷೆಯೇನೂ ನಡೆದಿಲ್ಲವಲ್ಲ ಈಗ?

"ಶಾಂತಾ, ಏನು ನಡೆಸಿದ್ದೀಯೇ? ಬಾರಲ್ಲ?" ಲೀಲಳ ಕೂಗು ಕೇಳ ಬಂದಿತು.

ಧಡಧಡಿಸುವ ಹೃದಯದಿಂದ ಅಣ್ಣನ ಕೊಟಡಿಯತ್ತ ಸಾಗಿದಳು ಶಾಂತಾ.

೮

" ಹೂಂ. ಈಗ ?" ಎಂದಳು ಲೀಲಾ.

" ಹೂಂ. ಈಗ ?" ಎಂದಳು ಶಾಂತಾ.

ಇಬ್ಬರೂ ನಗತೊಡಗಿದರು.

ಸದಾನಂದನ ಪರಿಚಯ ಮಾಡಿಕೊಂಡು ಅವನೊಡನೆ ಔಪಚಾರಿಕವಾಗಿ ಕೆಲವು ಮಾತು ಆಡಿದುದಾಗಿತ್ತು, ಅವನೊಡನೆಯೆ ಕುಳಿತು ಚಹ ಸೇವಿಸಿದು ದಾಗಿತ್ತು. " ಇನ್ನೇನು, ಇಲ್ಲೇ ಇರುತ್ತೀರಲ್ಲ, ಆಗಾಗ ಭೆಟ್ಟಿಯಾಗೋಣ," ಎಂದು ಹೇಳಿ ಲೀಲಾ ಎದ್ದು ಹೊರಟಿದ್ದಳು. ಅವಳೊಡನೆ ಶಾಂತಳೂ ಬಂದು ಬಿಟ್ಟಿದ್ದಳು.

ನಡುಮನೆಯಲ್ಲಿ, ಅಕ್ಕಿಯಲ್ಲಿನ ಹರಳು ಆರಿಸುತ್ತ ಕುಳಿತಿದ್ದ ಲೀಲಳ ತಾಯಿ ಸೀತಾಬಾಯಿ ಕೇಳಿದರು :

" ಏನ್ರೇ ಅದು ? ಬಹಳ ನಗುತಾ ಇದೀರಿ ?"

" ಗುಟ್ಟು ಅವ್ವಾ, ಗುಟ್ಟು !" ಎನ್ನುತ್ತಾ ಲೀಲಾ ಮಹಡಿಯ ಮೆಟ್ಟಲುಗಳ ಮೇಲೆ ಹಾರತೊಡಗಿದಳು.

" ಇಷ್ಟು ಬೇಗ ಬಿಟ್ಟಿತೇನೇ ಕಾಲೇಜು ?"

" ಇವತ್ತು ಪಾಠ ಇರಲಿಲ್ಲ ಕಾಕೀ," ಎಂದಳು ಶಾಂತಾ.

" ಮೊದಲನೇ ದಿನಾನೇ ಪಾಠ ಇಲ್ಲಾಂದರೆ ಅದೆಂಥಾ ಕಾಲೇಜವ್ವಾ ಅದು !"

"ಗುಟ್ಟು!" ಎನ್ನುತ್ತಾ ಮತ್ತೆ ನಕ್ಕಳು ಲೀಲಾ.

ಪುಸ್ತಕಗಳನ್ನು ಕಪಾಟಿನಲ್ಲಿ ಬಿಸುಟು, ಸೋಫದ ಮೇಲೆ ದೇಹವನ್ನು ಚೆಲ್ಲುತ್ತಾ ಲೀಲಾ ಹೇಳಿದಳು:

"ಹೂಂ. ಈಗ?"

"ನಿನ್ನ ತಲೆ!" ಎಂದಳು ಶಾಂತಾ.

"ನಿನ್ನ ಮನಸ್ಸು?" ಎಂದಳು ಲೀಲಾ.

"ನಿನ್ನ ತಲೆ!" ಎಂದಳು ಶಾಂತಾ.

"ಬಿಡು ನಿನ್ನ ಬಡಿವಾರ ಎಲ್ಲಾ ನನ್ನ ಮುಂದೆ ಬೇಡ. ನಿನ್ನ ಬಣ್ಣ ಎಲ್ಲಾ ಗೊತ್ತಾಯ್ತು. ರೂಮಿನಲ್ಲಿ ಬರುವಾಗಲೇ ನಿನ್ನ ಮೋರೆ ಕೆಂಪು ಕೆಂಪಾಗಿ ಹೋಗಿತ್ತು. ತುಟಿ ನಡುಗುತ್ತಿದ್ದುವು. ಈ ಲಕ್ಷಣಗಳೆಲ್ಲಾ ಯಾತರವು ಅನ್ನುವದು ಗೊತ್ತಿಲ್ಲವೇ ನನಗೆ? ಸದಾನಂದನೊಡನೆ ಮಾತಾಡುವಾಗಲೂ ನೀನು ತಬ್ಬಿಬ್ಬಾಗಿ ತ ತ ತ ಅಂತ ತೊದಲಿದೆ."

"ಹೊಸ ಪರಿಚಯ ಅಂದರೆ ನನಗೆ ಸ್ವಲ್ಪ ಹಾಗೇ ಬಿಡೇ. ನಿನ್ನಷ್ಟು ದಿಟ್ಟೆಯಲ್ಲವಲ್ಲ ನಾ?"

"ನಾನು ದಿಟ್ಟೆ ಅಂತ ಬೇರೆ ಆರೋಪ. ದಿಟ್ಟತನಾನೂ ಇಲ್ಲ, ಏನೂ ಇಲ್ಲ. ನಾವಿದ್ದ ಹಾಗೆ ನಮ್ಮ ವರ್ತನೆಯಿರ್ತದೆ," ಎನ್ನುತ್ತಾ ಗೆಳತಿಯ ಕೆನ್ನೆಯನ್ನು ಮೃದುವಾಗಿ ಚಿವುಟಿದಳು ಲೀಲಾ.

"ಬಿಡು ಬಿಡೇ. ಎಷ್ಟದು ಅಣಗಿಸೂದು. ಏನೋ ಸ್ವಲ್ಪ ಸಂಕೋಚ ವಾಗಿ ಹಾಗಾಯ್ತು ನನಗೆ. ಅಷ್ಟಕ್ಕೇ...."

"ಏನಡ್ಡಿಯಿಲ್ಲ ಶಾಂತಾ. ಸದಾನಂದ ಒಳ್ಳೆಯ ಹುಡುಗ. ಮನಸ್ಸು ಕೂಡಾ ಸ್ವಚ್ಛ. ಮಾತು ಸರಳ. ಸವಾಯಿ ಕೀಟ್ಸನಿಗೂ ಇವನಿಗೂ ಆಕಾಶ ಪಾತಾಳಗಳಷ್ಟು ಅಂತರ. ನೋಡುವುದಕ್ಕೂ ಚೆನ್ನಾಗೇ ಇದಾನೆ, ಅಲ್ಲವೆ?"

"ಅದೆಲ್ಲಾ ನಿನಗೇ ಗೊತ್ತು."

"ಹೂಂ. ನನಗೆ ಗೊತ್ತಾಗದೆ? ನಾನೇನು ನಿನ್ನ ಹಾಗೆ ನಾಚುಬುರುಕಿ ಯಲ್ಲವಲ್ಲ. ಕವಿ ಕಾಣುವ ಹಾಗೇ ಕಾಣುತಾನೆ ಸದಾನಂದ."

"ಷೆಲ್ಲಿಯ ಹಾಗೋ? ಬೈರನ್ ಹಾಗೋ?" ನಗುತ್ತ ಕೇಳಿದಳು ಶಾಂತಾ.

"ಅವರಿಬ್ಬರ ಹಾಗೂ ಅಲ್ಲ – ಈತ ಕುವೆಂಪು ಇದ್ದ ಹಾಗಿದಾನೆ."

ಶಾಂತಳ ಮುಖ ಮತ್ತೆ ಆರಕ್ತವಾಯಿತು.

" ಥೂ ಬಿಡೇ ಲೀಲಾ."

" ಹಾಗಾದರೆ ಹಾಗೇ ಇರಬೇಕು. ಹೌದು. ನಿಶ್ಚಯವಾಗಿ ಹಾಗೇ ಇರಬೇಕು. ಹೋ. ಈಗ ನೆನಪಾಯ್ತು ನನಗೆ. ಒಂದು ಪತ್ರಿಕೆಯಲ್ಲಿ ಸದಾನಂದನ ಫೋಟೋ ಕೂಡಾ ಬಂದಿತ್ತು, ಅಲ್ಲವೆ? ಗೊತ್ತಾಯ್ತು. ಈಗ ಎಲ್ಲಾ ಗೊತ್ತಾಯ್ತು."

ಸೋಫಾದಿಂದೆದ್ದು ದೂರ ಹೋಗಿ ಕುರ್ಚಿಯೊಂದರಲ್ಲಿ ಕೂಡುತ್ತ ಶಾಂತಾ ಹೇಳಿದಳು :

" ಸುಮ್ಮನಾಗಬಾರದೇನೆ ಲೀಲಾ? ನಿನಗೆ ಬೇರೆ ವಿಷಯವೇ ಇಲ್ಲವೇನೇ ಮಾತಾಡಲಿಕ್ಕೆ?"

" ಇಂಥ ಉತ್ತಮ ವಿಷಯ ಇನ್ಯಾವದಿದೆಯೇ?"

" ಥೂ, ನೀನು ಹಾಳಾದೆ...."

" ನಾನ್ಯಾಕೆ ಹಾಳಾಗಲಿ? ನಾನೇನೂ ನನ್ನ ಹೃದಯವನ್ನ ಇನ್ನೂ ಯಾರಿಗೂ ಅರ್ಪಿಸಿಲ್ಲ," ಎಂದು ಲೀಲಾ ನಾಟಕೀಯವಾಗಿ ಹೇಳುತ್ತಾ ರೇಡಿಯೊವಿನ ಗುಂಡಿಯನ್ನು ತಿರುವಿದಳು. ಒಡನೆಯೆ ಗಂಡಸಿನ ಗಂಭೀರ ದನಿಯಲ್ಲಿ ಹಾಡು ಹೊರಡತೊಡಗಿತು.

" ಪಿಯಾ ಮಿಲನಕೋ ಜಾನಾ....

ಪಿಯಾ ಮಿಲನಕೋ ಜಾನಾ...."

" ನೋಡಿದೆಯಾ ಎಂಥ ಶಕುನ!" ಎಂದು ಲೀಲಾ ನಗಲಾರಂಭಿಸಿದಳು. " ರೇಡಿಯೋಕ್ಕೆ ಕೂಡಾ ತಿಳಿದಂತೆ ಕಾಣುತದೆ ನಿನ್ನ ಮನಸಿನಲ್ಲಿಯ ವಿಚಾರ!"

ಆ ವೇಳೆಗೆ ತಿಂಡಿಯ ತಟ್ಟೆ ಹಿಡಿದುಕೊಂಡು ಸೀತಾಬಾಯಿ ಮೇಲೆ ಬಂದರು.

" ಏನೇ ಲೀಲಾ, ಏನು ನಡೆದಿದೆಯೇ?"

" ಗುಟ್ಟು ಅವ್ವಾ! ಗುಟ್ಟು."

ತಟ್ಟೆಗಳನ್ನು ಟೀಪಾಯ್ ಮೇಲಿರಿಸಿ ಸೀತಾಬಾಯಿ ಮುಗುಳ್ನಗುತ್ತ ಕೇಳಿದರು :

" ಏನದು ಬರೀ ಗುಟ್ಟು ಗುಟ್ಟು ಅಂತಾಳಲ್ಲ ಈಕೆ ಶಾಂತಾ? ಏನಪ್ಪಾ ಅದೂ?"

" ಏನಿಲ್ಲ ಬಿಡಿರೀ ಕಾಕೀ. ಇವಳದೇನು ಇದ್ದೇ ಇರ್‍ತದಲ್ಲ ದಿನಾಲೂ."

" ಗುಟ್ಟು ಅಪ್ಪಾ ಗುಟ್ಟು, ನಿಜಾ ಅಂದರೂ ಗುಟ್ಟು!" ಎಂದು ರಾಗವಾಗಿ ಹೇಳುತ್ತಾ ಹಾಸುಗಂಬಳಿಯ ಮೇಲೆ ಎಳೆಮಗುವಿನಂತೆ ಕುಣಿಯ ತೊಡಗಿದಳು ಲೀಲಾ.

" ಶಾಂತಿಗೆ ಗಂಡು ಗೊತ್ತಾಯಿತೇನೇ?"

ಕುಣಿತವನ್ನು ನಿಲ್ಲಿಸಿ ಲೀಲಾ ಕುರ್ಚಿಯಲ್ಲಿ ಕೂಡುತ್ತ ಹೇಳಿದಳು:

" ಇನ್ನೇನು, ಗೊತ್ತಾದ ಹಾಗೇ ಅನ್ನು."

" ಇವಳ ಮಾತು ಏನು ಬಿಡಿರೀ ಕಾಕೀ–ಎಲ್ಲಾ ಸುಳ್ಳು. ಸುಮ್ಮನೆ ನನ್ನ ಕಾಡಿಸುವದಕ್ಕೆ ಅಂತ ಚೇಷ್ಟೆ ನಡಿಸಿದಾಳೆ.

" ಹೌದೇನೇ ಲೀಲೂ?"

" ಇಲ್ಲವ್ವಾ ಇಲ್ಲ. ನಾನು ಹೇಳೂದು ಸೆಂಟ್‌ಪರ್‌ಸೆಂಟ್ ಸತ್ಯ. ನಮ್ಮ ಶಾಂತೀದು ಲವ್‌ಮ್ಯಾರೇಜ್ ಆಗುತದವ್ವಾ ಇಷ್ಟರಲ್ಲೇ."

ಸೀತಾಬಾಯಿ ಗಹಗಹಿಸಿ ನಗುತ್ತ ಕೇಳಿದಳು:

" ನಿನ್ನದೋ?"

" ನನ್ನದು ಸ್ವಯಂವರ!" ಎಂದು ಗಂಭೀರವಾಗಿ ನುಡಿದು ತಿಂಡಿಯ ತಟ್ಟೆಯನ್ನು ಕೈಗೆತ್ತಿಕೊಂಡಳು ಲೀಲಾ.

## ೬

“ ಯಸ್ಮಾನ್ನೋದ್ವಿಜತೇ ಲೋಕೋ ಲೋಕಾನ್ನೋದ್ವಿಜತೇ ಚಯಃ
ಹರ್ಷಾಮರ್ಷಭಯೋದ್ವೇಗೈರ್ಮುತ್ತೋಯಃ ಸಚಮೇ ಪ್ರಿಯ,”

ಭಗವದ್ಗೀತೆಯ ಆ ಶ್ಲೋಕವೇನೋ ಮಧ್ವರಾಯರ ನಾಲಗೆಯ ಮೇಲೆ ಮೂಡುತ್ತಿದ್ದಿತು. ಅವರ ಲಕ್ಷ್ಯ ಮಾತ್ರ ಅದರಲ್ಲಿ ತೊಡಗಿರಲಿಲ್ಲ. ಆಗತಾನೆ ಮನೆಗೆ ಬಂದುಹೋಗಿದ್ದ ಸದಾನಂದನ ವಿಚಾರವಾಗಿ ಅವರ ಯೋಚನೆ ಹರಿಯ ತೊಡಗಿತ್ತು. ಪಡಸಾಲೆಯಲ್ಲಿ ಕುಳಿತು ಗೀತೆಯನ್ನೋದುತ್ತಿದ್ದ ಹಾಗೆ ಅವರು ಸದಾನಂದನನ್ನೊಮ್ಮೆ ಸೂಕ್ಷ್ಮವಾಗಿ ದಿಟ್ಟಿಸಿ ನೋಡಿದ್ದರು, “ ಹುಡುಗ ಸ್ಫುರದ್ರೂಪಿಯಾಗಿದ್ದಾನೆ, ಬುದ್ಧಿವಂತಿಕೆಯ ಲಕ್ಷಣಗಳೂ ಇವೆ,” ಎಂದೂ ಹೇಳಿಕೊಳ್ಳುತ್ತಿದ್ದ ಹಾಗೆ ಆತ ತಮ್ಮ ಜಾತಿಯವನೆ ಆಗಿರಬಹುದೇ ಎಂಬ ವಿಚಾರ ತೀರ ಸ್ವಾಭಾವಿಕವಾಗಿ ಆರಂಭವಾಗಿತ್ತು. ಆತ ತಮ್ಮ ಮತೀಯನೆ ಆಗಿದ್ದರೆ ಶಾಂತಿಗೆ ಎಲ್ಲ ಬಗೆಯಿಂದಲೂ ಅನುರೂಪ ವರನಾಗಬಹುದು....

ಹಾಗೆ ಯೋಚನೆಗಾರಂಭವಾದುದು ಸದಾನಂದ ಎದ್ದು ಹೋಗುವವರೆಗೂ ಮುಂದುವರೆದಿತ್ತು – ಆತ ತನ್ನ ಕೊಟಡಿಗೆ ಹೋಗುತ್ತಲೂ ಅವರು ವೆಂಕಟೇಶನನ್ನು ಪಡಸಾಲೆಗೆ ಕರೆದು ಕೇಳಿದರು :

“ ಈ ಸದಾನಂದ ಯಾರ ಪೈಕಿಯವರು ವೆಂಕಣ್ಣಾ ?”

“ ಇವರೇ ? ರಾವ್‌ಸಾಹೇಬ್ ಲಿಂಗಪ್ಪನವರಿದಾರಲ್ಲಾ, ಅವರಿಗೇನೊ ದೂರದ ಸಂಬಂಧವಾಗಬೇಕಂತೆ.”

ಮಧ್ವರಾಯರು ತಮ್ಮ ನಿರಾಸೆಯನ್ನು ಮುಖದಲ್ಲಿ ವ್ಯಕ್ತಗೊಳಿಸದೆ ಸಹಜ ಸ್ವರದಲ್ಲಿ ನುಡಿದರು :

"ಹೀಗೇನು ? ಹಾಗಾದರೆ ಇಲ್ಲಿಗ್ಯಾಕೆ ಬಂದಿದಾರೆ ಈ ಖೋಲಿಗೆ ?"

"ಆ ಲಿಂಗಪ್ಪ ಯಾರನ್ನಾದರೂ ಕರೆದುಕೊಂಡಾನೇನು ಅಣ್ಣಾ ? ಇವರೂ ಹಾಗೆಲ್ಲ ಹೋಗುವವರಲ್ಲ."

"ಸರಿ – ಸರಿ," ಎಂದಿಷ್ಟೆ ನುಡಿದು ರಾಯರು ಮತ್ತೆ ಗೀತೆಯನ್ನು ಕೈಗೆತ್ತಿಕೊಂಡು ಪಾರಾಯಣವನ್ನು ಮುಂದುವರೆಸಿದರು.

ಸದಾನಂದ ತಮ್ಮ ಜಾತಿಯವನಲ್ಲವೆಂಬುದು ಶಾಂತಳಿಗೂ ಗೊತ್ತಾಗಲು ಬಹಳ ದಿನ ಹಿಡಿಯಲಿಲ್ಲ.

ಇಬ್ಬರೂ ಒಂದೇ ವಠಾರದಲ್ಲಿದ್ದವರಾದುದರಿಂದ ದಿನವೂ ಎರಡು ಮೂರು ಸಲವಾದರೂ ಪರಸ್ಪರ ದರ್ಶನವಾಗುತ್ತಿತ್ತು. ಪ್ರತಿನಿತ್ಯವೂ ಸೂರ್ಯೋದಯಕ್ಕೆ ಮುನ್ನವೆ ಎದ್ದು ಕಾಲೇಜು ರಸ್ತೆಯ ಕಡೆ ವಾಯುವಿಹಾರಕ್ಕೆ ಹೋಗಿಬರುವ ಕ್ರಮಕ್ಕಾರಂಭಿಸಿದ್ದ ಸದಾನಂದ. ಸ್ವಭಾವತಃ ಸೋಮಾರಿಯಾಗಿದ್ದ ಕೊಟಬಾಗಿಯನ್ನೂ ಎಬ್ಬಿಸಿ ಪ್ರಾತಃಸಂಚಾರಕ್ಕೆ ಕರೆದೊಯ್ಯುವುದೊಂದು ಮಹಾ ಪ್ರಯಾಸದ ಕೆಲಸವಾಗಿ ಪರಿಣಮಿಸಿತ್ತು ಸದಾನಂದನಿಗೆ. ಅಂತೆಯೆ ಆತ ಕೊಟಬಾಗಿಯ ಹವ್ಯಾಸ ಬಿಟ್ಟು ವೆಂಕಟೇಶನನ್ನು ಜತೆಗೆ ಕರೆದೊಯ್ಯತೊಡಗಿದ. ಸದಾನಂದನ ಸಹವಾಸದಿಂದಾಗಿ ವೆಂಕಟೇಶನಿಗೂ ಬೆಳಗಿನಲ್ಲಿ ಬಲು ಬೇಗ ಏಳುವ ಪರಿಪಾಠ ಅಂಟಿಕೊಂಡಿತು. ಸದಾನಂದ ಎದ್ದು ದೀಪ ಅಂಟಿಸಿ ಮುಖ ತೊಳೆದುಕೊಳ್ಳುವುದಕ್ಕಾಗಿ ಬಾಗಿಲು ತೆರೆಯುತ್ತಲೂ ತನ್ನ ಕೊಟಡಿಯಲ್ಲಿ ಮಲಗಿರುತ್ತಿದ್ದ ಶಾಂತಳಿಗೂ ತಕ್ಷಣ ಎಚ್ಚರವಾಗುತಿತ್ತು. ಅವಳು ಒಡನೆಯೆ ಮೇಲಕ್ಕೇಳದೆ ಹಾಸಿಗೆಯಲ್ಲೊರಗಿಕೊಂಡಿದ್ದ ಹಾಗೆಯೆ ಎಡಗಡೆಗೆ ದೃಷ್ಟಿ ಹೊರಳಿಸಿ ಕಿಟಕಿಯಿಂದ ಕಾಣುತ್ತಿದ್ದ ಸದಾನಂದನ ಚಲನವಲನಗಳನ್ನೆಲ್ಲ ಕೌತುಕದಿಂದ ವೀಕ್ಷಿಸುವಳು. ಆತ ಮುಖ ತೊಳೆದು, ಕೊರಳಿಗೆ ಸ್ಕಾರ್ಫ್ ಸುತ್ತಿ ಕೊಟಡಿಯ ಬಾಗಿಲು ಮುಚ್ಚಿಕೊಂಡು ಅಂಗಳಕ್ಕಿಳಿದು ಬರುವುದರೊಳಗಾಗಿ ವೆಂಕಟೇಶನೂ ಸಿದ್ಧವಾಗಿರುತ್ತಿದ್ದ. ಅವರಿಬ್ಬರೂ ಹೋದ ಬಳಿಕ ಶಾಂತಾ ಎದ್ದು ದೀಪ ಅಂಟಿಸಿ ಮುಖ ತೊಳೆದುಕೊಂಡು ಬಂದು ಪುಸ್ತಕ ಹಿಡಿದು ಕೂಡುತ್ತಿದ್ದಳು. ಅವರು ವಾಯುವಿಹಾರದಿಂದ ಹಿಂದಿರುಗಿ ಬರುವಷ್ಟರಲ್ಲಿ

ಪೂರ್ಣವಾಗಿ ಬೆಳಗಾಗಿರುತ್ತಿತ್ತು. ಸದಾನಂದನಿಗೆ ಹೂವುಗಳೆಂದರೆ ಬಹಳ ಪ್ರೀತಿ. ಕಾಲೇಜಿನ ಮೇಲೆ ಹಾಯ್ದು ಬರುತ್ತಾ ಆತ ಪ್ರಿನ್ಸಿಪಾಲರ ಬಂಗಲೆ ಯೆದುರಿನ ಹೂದೋಟದಿಂದ ಬೇರೆ ಬೇರೆ ಬಣ್ಣಗಳ ಸುಂದರ ಹೂವುಗಳನ್ನು ಕಿತ್ತು ಕೈಯಲ್ಲಿ ಹಿಡಿದುಕೊಂಡು ಬರುತ್ತಿದ್ದ. ಅವುಗಳನ್ನು ಕಂಡಾಗಲೆಲ್ಲ ಶಾಂತಳಿಗೆ ಕೊಂಚ ನಗು ಬರದಿರುತ್ತಿರಲಿಲ್ಲ. "ಹೂ ಅಂದರೆ ಎಷ್ಟು ಆಸೆ ಇವರಿಗೆ....ಹೆಣ್ಣಿನ ಹಾಗೆ! ಕವಿಗಳಲ್ಲವೆ!" ಎಂದು ಮನಸ್ಸಿನಲ್ಲಿಯೆ ಹೇಳಿ ಕೊಳ್ಳುವಳು. ಇಷ್ಟೊಂದು ಹೂವುಗಳನ್ನು ಅವರು ಏತಕ್ಕಾಗಿ ತರುವರೋ, ಎಲ್ಲಿ ಇಡುವರೋ ಎಂದು ಅವಳಿಗೆ ಕುತೂಹಲ.

ಬೆಳಗಿನಲ್ಲಿ ತಿರುಗಾಡಲು ಹೋಗುವ ಅಭ್ಯಾಸವಿದ್ದ ಹಾಗೆ ತಣ್ಣೀರಿನಲ್ಲಿ ಸ್ನಾನ ಮಾಡುವ ಅಭ್ಯಾಸವೂ ಅವನಿಗಿದ್ದುದು ಶಾಂತಳಿಗೆ ಬಲುಬೇಗ ಗೊತ್ತಾಯಿತು. ಅವರ ಕೊಟಡಿಗೆ ಬಚ್ಚಲಿರಲಿಲ್ಲವಾದುದರಿಂದ ವಠಾರದ ಬಾವಿಯ ಬಳಿಯಲ್ಲಿಯೆ ಆತ ಸ್ನಾನ ಮಾಡುವ ಪರಿಪಾಠಕ್ಕಾರಂಭಿಸಿದ್ದ. ಒಂದು ಬೆಳಿಗ್ಗೆ ಅವಳು ನೀರು ತರಲು ಹೋಗಿದ್ದಾಗ ಕಲ್ಲಿನ ಮೇಲೆ ಕುಳಿತು ಸ್ನಾನ ಮಾಡುತ್ತಿದ್ದ ಸದಾನಂದನ ಬರಿಮೈಯನ್ನು ನೋಡಿ ಅಲ್ಲಿ ಜನಿವಾರವನ್ನು ಕಾಣದೆ ವಿಸ್ಮಿತಳಾದಳು. ಆತ ಬ್ರಾಹ್ಮಣನಾಗಿರದಿದ್ದರೂ ಇರಬಹುದು ಎಂಬ ವಿಚಾರ ಅವಳ ಮನಸ್ಸಿನಲ್ಲಿ ಪ್ರವೇಶಿಸಿದ್ದು ಹಾಗೆ.

ಅಂದು ಕಾಲೇಜಿಗೆ ಹೋಗುವಾಗ ಆಕೆ ಲೀಲಳೊಂದಿಗೆ ಮಾತನಾಡುತ್ತ, ಸದಾನಂದನ ಮೈಮೇಲೆ ಜನಿವಾರವಿರದಿದ್ದ ವಿಷಯ ಪ್ರಸ್ತಾಪಿಸುತ್ತಲೂ ಲೀಲಾ ಗಟ್ಟಿಯಾಗಿ ನಗುತ್ತ ಕೇಳಿದಳು :

"ಸದಾನಂದ ಜನಿವಾರದವನಲ್ಲ ಅನ್ನೂದು ಈಗ ಗೊತ್ತಾಯಿತೇನೇ ನಿನಗೆ?"

"ಗೊತ್ತಾಗುವದಾದರೂ ಹ್ಯಾಗೆ ಹೇಳು – ನೋಡುವದಕ್ಕಂತೂ ಬ್ರಾಹ್ಮಣರ ಹಾಗೇ ಕಾಣುತ್ತಾರಲ್ಲ!"

"ಈಗೇನು, ಎಷ್ಟೋ ಹರಿಜನರೂ ಹಾರುವರ ಹಾಗೇ ಕಾಣುತ್ತಾರೆ. ಎಲಾ ಬೆಪ್ಪೆ, ಇಷ್ಟು ತಿಳಿಯುವದಿಲ್ಲಲ್ಲ ನನಗೆ? ನಿನಗೆ ಯಾವತ್ತೋ ಗೊತ್ತಾಗಿತ್ತು ಆತ ಜನಿವಾರದವನಲ್ಲ ಅನ್ನೂದು."

"ಮತ್ತೆ?"

"ಸದಾನಂದ ಶಿವದಾರದವ."

ಶಾಂತಳ ಮನಸ್ಸಿನ ಅಂಗಳದಲ್ಲಿ ಕೆಲವು ದಿನಗಳಿಂದ ನಿರ್ಮಿತವಾಗುತ್ತಿದ್ದ ಆಸೆಯ ಕಟ್ಟಡ ಮರಳಿನ ಮನೆಯಂತೆ ದೊಪ್ಪನೆ ಕುಸಿದು ಬಿದ್ದಂತಾಯಿತು. ಕೆಳದುಟಿಯನ್ನು ಕಚ್ಚಿಕೊಳ್ಳುತ್ತಾ ಅವಳು ಮೌನವಾಗಿ ಹೆಜ್ಜೆ ಹಾಕ ತೊಡಗಿದಳು.

"ಯಾಕೇ? ಏನಾಯ್ತು? ಆತ ಲಿಂಗಾಯತನೆಂದು ದುಃಖವೋ ಏನು?" ಎಂದಳು ಲೀಲಾ.

ಶಾಂತಳ ಬಾಯಿಂದ ಶಬ್ದಗಳೇ ಹೊರಡುವಂತಿರಲಿಲ್ಲ. ಹಾದಿಯ ಇಕ್ಕೆಲಗಳಲ್ಲಿ ಗಿಡಗಳನ್ನು ಶೂನ್ಯ ದಿಟ್ಟಿಯಿಂದ ನಿಟ್ಟಿಸುತ್ತ ಅವಳು ಯಾಂತ್ರಿಕ ವಾಗಿ ನಡೆಯುತ್ತಿದ್ದಳು.

ಗೆಳತಿಯ ಭಾವನೆಗಳನ್ನು ಕಂಡುಕೊಂಡಿದ್ದ ಲೀಲಾ ಸಹಾನುಭೂತಿ ಯಿಂದ ಅವಳ ಬೆನ್ನು ತಟ್ಟಿ ಸಂತೈಸುವ ದನಿಯಲ್ಲಿ ಹೇಳಿದಳು :

"ಏನಾಯಿತೇ ಈಗ? ಇಷ್ಟ್ಯಾಕೆ ವ್ಯಸನ? ಆತ ನಮ್ಮ ಜಾತಿಯವ ನಾಗದಿದ್ದ ಮಾತ್ರಕ್ಕೇ ಏನಾದಂತಾಯ್ತು? ಸದಾನಂದ ಹಾಗೆಲ್ಲ ಜಾತ್ಯಾಭಿ ಮಾನಿಯೇನೂ ಅಲ್ಲ – ಜನಿವಾರದ ಬದಲು ಅವನ ಮೈಮೇಲೆ ಶಿವದಾರ ವನ್ನೇನಾದರೂ ನೋಡಿದಿಯಾ ನೀನು?"

"ಇಲ್ಲ."

"ಹೇಳಿ ಕೇಳಿ ಕಾಲೇಜು ವಿದ್ಯಾರ್ಥಿ ಅದರಲ್ಲೂ ಕವಿ. ಕವಿಗಳೆಂದರೆ ಮನಸಾ ಬಂಡುಗಾರರಿರ್ತಾರೆ. ಸದಾನಂದನೂ ಹಾಗೇ. ಪೂರಾ ಸ್ವತಂತ್ರ ವಿಚಾರದವನು.... ನೀನೂ ಅವನ ಹಾಗೇ ಅಲ್ಲವೇನೇ?"

"ಅಂದರೆ?"

"ಅಂದರೆ.... ಜಾತಿ ಗೀತಿ ಯಾವದನ್ನೂ ಲಕ್ಷ್ಯಕ್ಕೆ ತಂದುಕೊಳ್ಳದೆ ನಿನಗೆ ಸರಿ ಅಂತ ಅನ್ನಿಸಿದ್ದನ್ನು ಮಾಡುವಂಥವಳು...."

ಹಾಗೆ ಆಚರಿಸಬಲ್ಲ ಧೈರ್ಯ ತನ್ನಲ್ಲಿದೆಯೆ?

ಶಾಂತಾ ತನ್ನನ್ನು ತಾನೆ ಕೇಳಿಕೊಂಡಳು.

ತಾನೇನೋ ಅಂಥ ಧೈರ್ಯ ವ್ಯಕ್ತಗೊಳಿಸಬಹುದು. ಆದರೆ—

ಹಾಗೆ ಅನಿರ್ಬಂಧವಾಗಿ ವರ್ತಿಸಲು ತಾನು ಸ್ವತಂತ್ರಳಲ್ಲ. ಕುಟುಂಬ ವನ್ನು ಗಮನಿಸಬೇಕಾಗುವುದು. ತಂದೆ, ಅಣ್ಣ, ಅತ್ತಿಗೆ, ಸಮಾಜ....

ಅವಳ ಮನಸ್ಸು ಉದಾಸೀನತೆಯಿಂದ ಭಾರವಾಯಿತು. ಪೋರ್ಚಿನಲ್ಲಿ ಬೈಸಿಕಲುಗಳಿಗೊರಗಿ ನಿಂತು ಹುಡುಗಿಯರನ್ನು ದಿಟ್ಟಿಸುತ್ತಾ ಅವಾಚ್ಯ ಮಾತು ಗಳನ್ನಾಡುವ ವಿದ್ಯಾರ್ಥಿಗಳ ಕಡೆಗೂ ಅಂದು ಅವಳ ಲಕ್ಷ್ಯ ಹೊರಳಲಿಲ್ಲ. ತನ್ನ ಆಲೋಚನೆಗಳ ಆಳಕ್ಕಿಳಿದು ಅವಳು ನಿಧಾನವಾಗಿ ಮೆಟ್ಟಲುಗಳನ್ನೇರಿ ವರ್ಗದ ಕಡೆ ಸಾಗಿದ್ದ ಹಾಗೆ ಪೋರ್ಚಿನಲ್ಲಿನ ಕಿಲಾಡಿಯೊಬ್ಬ, "ಗುಲಾಬ್ ಜಾಮೂನ್ ಇವತ್ತು ಬಹಳ ಗಂಭೀರವಾಗಿದೆ ನೋಡಿರೋ!" ಎಂದು ಕೂಗಿದ. ಅವನ ಜತೆಗಾರರು ನಗೆಯ ಕೋಲಾಹಲವೆಬ್ಬಿಸಿದರು. ಆಗಲೂ ಅವಳ ಗಮನ ಅತ್ತ ಹರಿಯಲಿಲ್ಲ. ವರ್ಗಕ್ಕೆ ಬಂದು ಕುಳಿತುದಾಯಿತು. ಪಕ್ಕದಲ್ಲಿದ್ದ ಲೀಲಾ ಮೆಲ್ಲನೆ ಅವಳ ಕೈ ಮುಟ್ಟಿ ಕಪ್ಪು ಹಲಗೆಯ ಕಡೆ ನೋಡುವಂತೆ ಸೂಚಿಸಿದಳು. ಶಾಂತಾ ಬೇಸರದ ದೃಷ್ಟಿಯನ್ನು ಅತ್ತ ತಿರುಗಿಸಿದಾಗ ಹಲಗೆಯ ಮೇಲೆ ದೊಡ್ಡ ದೊಡ್ಡ ಅಕ್ಷರಗಳಲ್ಲಿ ಬರೆಯಲ್ಪಟ್ಟದ್ದ ಬರೆಹ ಕಾಣಿಸಿತು.

"ಸರೋಜ ಮುಖಿ ಶಾಂತಾ
ನನ್ನ ಕಾಂತಾ."

ಅವಳು ಚಕಿತಳಾಗಿ ಅತ್ತಿತ್ತ ದೃಷ್ಟಿ ತಿರುಗಿಸಿದಾಗ ವರ್ಗದಲ್ಲಿದ್ದ ವಿದ್ಯಾರ್ಥಿ ವಿದ್ಯಾರ್ಥಿನಿಯರೆಲ್ಲ ತನ್ನ ಕಡೆಗೇ ನೋಡಿ ತುಟಿಗಳಲ್ಲೇ ನಗುತ್ತಿದ್ದುದು ಕಾಣಿಸಿತು. ಅವಳಿಗೆ ಬಲು ಬೇಸರವಾಯಿತು, ಒಳಗೊಳಗೇ ಕೊಂಚ ನಗೆಯೂ ಬಂದಿತು. ತನ್ನನ್ನುದ್ದೇಶಿಸಿಯೆ ಯಾರೋ ಬರೆದ ಹಾಗಿತ್ತು, ಹಾಗೆ ತನ್ನನ್ನು ಬಿಟ್ಟರೆ ವರ್ಗದಲ್ಲಿ ಶಾಂತಾ ಎಂಬ ಹೆಸರಿನ ಇನ್ನೊಬ್ಬ ವಿದ್ಯಾರ್ಥಿನಿಯಿಲ್ಲ. ಇದನ್ನು ಬರೆದವನೂ ಕವಿಯೇ ಆಗಿರುವಂತೆ ತೋರುತ್ತದೆ! ಎಂಥ ಕವಿ!

ಮತ್ತೆ ಅವಳಿಗೆ ಸದಾನಂದನ ಜ್ಞಾಪಕ ಬಂದಿತು. ನಿಜವಾದ ಕವಿ ಯೆಂದರೆ ಸದಾನಂದ. ಎಂಥ ಗಾಂಭೀರ್ಯ....ಎಂಥ ಸರಳಮನೋವೃತ್ತಿ.... ಎಂಥ ಮೋಹಕ ವ್ಯಕ್ತಿತ್ವ....

"ಮಾಸ್ತರ್ ಬಂದರು....ಮಾಸ್ತರ್ ಬಂದರು...." ಎಂದು ಯಾರೋ ಕೂಗಿದರು. ಶಾಂತಾ ತಲೆಯೆತ್ತಿ ಬಾಗಿಲಿನತ್ತ ದೃಷ್ಟಿ ತಿರುಗಿಸಿದಳು. ಕನ್ನಡ ಅಧ್ಯಾಪಕರಾದ ಗಲಗಲಿಯವರು ಬಳುಕುತ್ತ ಬಳುಕುತ್ತ ಬರುತ್ತಿದ್ದರು.

ಅವರದು ತುಂಬ ತೆಳ್ಳನೆಯ ದೇಹವಾದುದರಿಂದ ಅವರು ನಡೆದು ಬರುವಾಗಲೆಲ್ಲ ಸಹಜವಾಗಿಯೆ ಅದು ಬಳುಕುತ್ತಿತ್ತು. ಹೆಣ್ಣಿನ ಹಾಗೆ ಹೊಯ್ದಾಡುವ ಅವರ ಕಟಿಯನ್ನು ಕಂಡು ಹುಡುಗರು ಹಾಸ್ಯಮಾಡಿ ನಗುತ್ತಿದ್ದರು. "ಬಡನಡುವಿನ ಬಾಲೆ," ಎಂದೂ ಆಗಾಗ ಅನೇಕರು ಅವರನ್ನು ಸಂಬೋಧಿಸುತ್ತಿದ್ದರು. ಅವರು ಪ್ರೊಫೆಸರರೆಂಬುದನ್ನೂ ಹುಡುಗರು ಒಪ್ಪಿರಲಿಲ್ಲ. "ಇವನಿಗೇನು ಬರುತ್ತದೆ ಪಾಠ ಹೇಳಲಿಕ್ಕೆ! ಯಾವ ಬೃಹಸ್ಪತಿ ಇವನನ್ನು ಪ್ರೊಫೆಸರನ್ನಾಗಿ ನೇಮಿಸಿದನೋ! ಇವನಿಗೆ ಸಂಬಳ ದಂಡ, ಕನ್ನಡ ಸಾಲೆಯ ಮಾಸ್ತರನಾಗಲಿಕ್ಕಷ್ಟೆ ಲಾಯಖ್ ಈತ!" ಎಂದು ಅವರ ಅಭಿಪ್ರಾಯ. ಅಂತೆಯೆ ಗಲಗಲಿಯವರು ಬಂದಾಗಲೆಲ್ಲ "ಮಾಸ್ತರ್ ಬಂದರು" ಎಂದು ಹುಡುಗರು ಕೂಗುವುದು ವಾಡಿಕೆಯಾಗಿತ್ತು.

ವಿದ್ಯಾರ್ಥಿಗಳು ತನ್ನನ್ನು ಹೀಯಾಳಿಸಿ ಹಾಸ್ಯಮಾಡುವರೆಂಬ ವಿಷಯ ಗಲಗಲಿಯವರಿಗೂ ಎಂದೋ ಗೊತ್ತಾಗಿದ್ದಿತು. ಹದಿನೈದು ವರ್ಷಗಳ ಕಾಲ ಅಂಥ ಟೀಕೆಗಳನ್ನು ಸಹಿಸಿಕೊಂಡು ಬಂದಿದ್ದರಾದುದರಿಂದ ಅವರು ಸಹನೆಯ ಮೂರ್ತಿಯಾಗಿದ್ದರು. ಯಾವ ವಿದ್ಯಾರ್ಥಿ ಏನೆಂದರೂ ಅವರು ಎಂದೂ ರೇಗುತ್ತಿರಲಿಲ್ಲ. ವರ್ಗಕ್ಕೆ ಬಂದೊಡನೆ ವೇದಿಕೆಯನ್ನೇರಿ ಕುರ್ಚಿಯ ಮೇಲೆ ಕುಳಿತು ಬಲಗೈಯ ತೋರು ಬೆರಳನ್ನು ಮೂಗಿಗಿರಿಸಿ ಒಂದು ಕ್ಷಣ ಧ್ಯಾನಸ್ಥರಂತೆ ಕುಳಿತಿದ್ದು ಅನಂತರ ಪಾಠಕ್ಕಾರಂಭಿಸುವುದು ಅವರ ಪದ್ಧತಿಯಾಗಿತ್ತು. ಮೂಗಿಗೆ ಬೆರಳಿಟ್ಟುಕೊಂಡು ಕಣ್ಣು ಮುಚ್ಚಿ ಕೂತಿರುವ ಅವರ ಆ ಭಂಗಿಯೂ ವಿದ್ಯಾರ್ಥಿಗಳ ಹಾಸ್ಯದ ವಿಷಯವಾಗಿತ್ತು. "ಇದೇನು ಕಾಲೇಜೋ, ತಪೋವನವೋ?" ಎಂಬುದಾಗಿಯೂ ಅನೇಕರು ಅನೇಕ ಬಾರಿ ಕೂಗಿದುದಿತ್ತು. ಗಲಗಲಿಯವರು ಮಾತ್ರ ಆ ಕ್ರಮವನ್ನು ನಿಲ್ಲಿಸಿರಲಿಲ್ಲ. ಒಂದು ನಿಮಿಷ ಹಾಗೆ ಧಾನ್ಯಸ್ಥರಂತೆ ಕುಳಿತಾಗಲೇ ಅವರಿಗೆ ಪಾಠ ಹೇಳಲು ಸ್ಫೂರ್ತಿ ಲಭಿಸುತ್ತಿತ್ತು.

ಅಂದು ಅವರು ವರ್ಗಕ್ಕೆ ಬಂದು ಕುರ್ಚಿಯ ಮೇಲೆ ಕುಳಿತುಕೊಳ್ಳುತ್ತಿದ್ದ ಹಾಗೆ ಕಾಗದದ ಬಾಣವೊಂದು ಸರ್‌ರನೆ ಬೀಸಿ ಬಂದು ಅವರ ಕಿವಿಯ ಬಳಿ ಹಾಯ್ದು ಕಪ್ಪು ಹಲಗೆಗೆ ಬಡಿದು ಕೆಳಗೆ ಬಿದ್ದಿತು. ಗಲಗಲಿಯವರು ಸಹಜವಾಗಿಯೆ ಅತ್ತ ತಿರುಗಿದರು. ಕಪ್ಪು ಹಲಗೆಯ ಮೇಲಿನ ಬರೆಹವನ್ನು ಕಂಡಾಗ ಅವರ ತುಟಿಗಳ ಮೇಲೆ ಅಸ್ಪಷ್ಟವಾದ ಹಾಸ್ಯಲಹರಿ ಹರಿದಾಡಿದಂತಾಯಿತು –

ಅವರು ಮೆಲ್ಲನೆದ್ದು ಆ ಬರೆಹವನ್ನಳಿಸಿ ಮತ್ತೆ ಬಂದು ಕುರ್ಚಿಯ ಮೇಲೆ ಕುಳಿತುಕೊಂಡರು. ಎಂದಿನಂತೆ ಅವರ ಬೆರಳು ಮೂಗಿನ ಕಡೆ ತೆರಳಿತು.... ಅವರು ಕಣ್ಣುಗಳನ್ನು ಮುಚ್ಚಿ ತೆರೆದು ವಿದ್ಯಾರ್ಥಿಗಳನ್ನೊಮ್ಮೆ ದಿಟ್ಟಿಸಿ ನೋಡಿ ಗಂಭೀರವಾದ ದನಿಯಲ್ಲಿ ಹೇಳಿದರು :

" ಬೋರ್ಡಿನ ಮೇಲೆ ಹಾಗೆ ಬರೆದದ್ದು ಯಾರು, ಎದ್ದು ನಿಲ್ಲಿರಿ."

ಹಿಂದಿನ ಸಾಲಿನಲ್ಲಿ ಕುಳಿತಿದ್ದ ವಿದ್ಯಾರ್ಥಿಗಳ ಗುಂಪು ಕಿಲಕಿಲನೆ ನಗತೊಡಗಿತು. ಯಾರೋ ಸಿಳ್ಳು ಹಾಕಿದರು. ಕೆಲವರು ಡೆಸ್ಕು ಬಾರಸಿ ಗದ್ದಲ ವೆಬ್ಬಿಸಿದರು. ಮತ್ತೆ ಕಾಗದದ ಸುರುಳಿಗಳು ಹಾರತೊಡಗಿದುವು. ಈ ಗದ್ದಲದಲ್ಲಿ ಯಾವನೊ ಒಬ್ಬ ಗುಂಡುಸೂಜಿ ಚುಚ್ಚಿದ ರಬ್ಬರ್ ಬಾಣವೊಂದನ್ನು ಶಾಂತಳ ಕಡೆ ಗುರಿಯಿಟ್ಟು ಎಸೆದ. ಡೆಸ್ಕಿನ ಮೇಲೆ ಕೈಯಿಟ್ಟು ಕುಳಿತಿದ್ದ ಅವಳ ಬಲದೋಳಿನ ಹಿಂಭಾಗಕ್ಕೆ ಸೂಜಿ ನಡುತ್ತಲೂ ಶಾಂತಾ 'ಹಾ' ಎಂದು ಕಿರಿಚಿಕೊಂಡು ಹಿಂದೆ ಹೊರಳಿದಳು. ಲೀಲಾ ವಿಹ್ವಲತೆಯಿಂದ ಸೂಜಿಯನ್ನು ಕಿತ್ತು ತೆಗೆದೊಡನೆ ರಕ್ತ ಹನಿಹನಿಯಾಗಿ ಚಿಮ್ಮತೊಡಗಿತು. ವಿದ್ಯಾರ್ಥಿನಿಯರೆಲ್ಲ ಅವಳ ಸುತ್ತಲೂ ನೆರೆದು ಸಹಾನುಭೂತಿ ವ್ಯಕ್ತಗೊಳಿಸುತ್ತಾ ಸೂಜಿ ಬಾಣವನ್ನೆಸೆಯುವಂಥ ಹೇಯ ಕೃತ್ಯ ಮಾಡಿದ ವಿದ್ಯಾರ್ಥಿಗಳನ್ನು ಶಪಿಸ ತೊಡಗಿದರು.

ಕೈಗಳೆರಡನ್ನೂ ಹಣೆಗಿಟ್ಟುಕೊಂಡು ಗಲಗಲಿಯವರು ಅರ್ಧ ತನ್ನಷ್ಟಕ್ಕೇ ಎಂಬಂತೆ ಉದ್ಗಾರ ತೆಗೆದರು :

" ದೇವರೇ ಕಾಪಾಡಬೇಕು, ದೇವರೇ ಕಾಪಾಡಬೇಕು."

ವರ್ಗದಲ್ಲಿ ನಡೆದಿದ್ದ ಆ ಮಹಾ ಕೋಲಾಹಲದಲ್ಲಿ ಅವರ ಉದ್ಗಾರ ಯಾರಿಗೂ ಕೇಳಿಸಲಿಲ್ಲ.

ಅಪರಾಹ್ನದಲ್ಲಿ ಕಾಲೇಜು ಬಿಡುತ್ತಲೂ ಶಾಂತಾ, ಲೀಲಾ, ಕುಮುದ ಮೂವರೂ ಸೇರಿ ಮಹಾದ್ವಾರದ ಕಡೆ ನಡೆದಿದ್ದ ಹಾಗೆ ಹತ್ತಿರದಲ್ಲಿದ್ದ ಗಿಡವೊಂದಕ್ಕೆ ಒರಗಿ ನಿಂತಿದ್ದ ಇಬ್ಬರು ವಿದ್ಯಾರ್ಥಿಗಳು ಅವರನ್ನು ಕೆಕ್ಕರಿಸಿ ನೋಡುತ್ತಿದ್ದುದು ಕಾಣಿಸಿತು. ವರ್ಗದಲ್ಲಿ ಪುಂಡಾಟಿಕೆ ನಡಸಿದವರಿವರೇ ಇರಬೇಕೆಂಬ ಅನುಮಾನವುಂಟಾಗದಿರಲಿಲ್ಲ ಲೀಲಾಗೆ.

ಮಹಾದ್ವಾರವನ್ನು ದಾಟಿ ಅವರು ಕಾಲುದಾರಿಗೆ ಬಂದು ಮುಟ್ಟಿದಾಗ

ಬಿಳಿಯ ಷರ್ಟು ಪ್ಯಾಂಟು ಧರಿಸಿದ ತೇಜಸ್ವಿ ಯುವಕನೊಬ್ಬ ಅವರ ಬಳಿ ಬಂದು,

" ಕ್ಷಮಿಸಿರಿ. ನಿಮ್ಮ ಪರಿಚಯ ನನಗಿಲ್ಲ. ಆದರೂ...." ಎಂದ.

ಅವನನ್ನು ಸೂಕ್ಷ್ಮವಾಗಿ ದಿಟ್ಟಿಸಿ ನೋಡುತ್ತ, ಅವನ ಸ್ವಭಾವವನ್ನರಿತು ಕೊಳ್ಳಲು ಯತ್ನಿಸುತ್ತ ಲೀಲಾ ಪ್ರಶ್ನಿಸಿದಳು :

" ನೀವು ಯಾರು ? ಯಾವ ಕ್ಲಾಸಿನಲ್ಲಿದೀರಿ ?"

" ನಾನೂ ನಿಮ್ಮ ಕ್ಲಾಸ್‌ಮೇಟು. ನನ್ನ ಹೆಸರು ನರಗುಂದ. ಇಂದು ನಡೆದದ್ದನ್ನು ನೋಡಿ ನನಗೆ ಬಹಳ ದುಃಖವಾಯ್ತು. ತಲೆಯಲ್ಲಿ ಸ್ವಲ್ಪ ಬುದ್ಧಿ ಯಿದ್ದವರಾರೂ ಹೀಗೆ ಮಾಡುವದಿಲ್ಲ. ಮಿಸ್ ಶಾಂತಾ ಅವರಿಗೆ ಬಹಳ ನೋವಾಗಿರಬೇಕು. ಮೂರ್ಖರು ಮಾಡಿದ ಕೆಲಸ. ವಿದ್ಯಾರ್ಥಿಗಳೆಲ್ಲರ ಪರವಾಗಿ ನಾನು ಕ್ಷಮೆ ಬೇಡುತ್ತೇನೆ."

ಶಾಂತಳ ಹೃದಯ ತುಂಬಿಬಂದಿದ್ದಿತಾದರೂ ಅವಳು ಮಾತನಾಡಲಿಲ್ಲ. ಮತ್ತೆ ಲೀಲಳೇ ನಸುನಗುತ್ತಾ ಹೇಳಿದಳು :

" ಆ ಮೂರ್ಖರಿಗಾಗಿ ನೀವ್ಯಾಕೆ ಕ್ಷಮೆ ಬೇಡಬೇಕ್ರೀ ?"

" ಇವರಿಗೆ ರಕ್ತ ಬರುವದನ್ನು ನೋಡಿ ಬಹಳ ಫೀಲ್ ಆಗಿ ತಡೆಯ ಲಾರದೆ...."

" ಸರಿ. ಸರಿ. ನೀವು ಬಹಳ ಸೆನ್ಸಿಟಿವ್ ಅಂತ ಕಾಣುತದೆ."

ಅವರಿಂದ ತುಸು ದೂರದಲ್ಲಿ ನಡೆದು ಬರುತ್ತ ನರಗುಂದ ಹೇಳಿದ :

" ಏನು ಸೆನ್ಸಿಟಿವ್ವೊ ಬಿಡಿರಿ. ಕಾಲೇಜು ಹುಡುಗರು ಮಾಡುವ ಮಂಗನಾಟ ನೋಡಿದರೆ ಒಂದೊಂದು ಸಲ ತಲೆ ಕೆಟ್ಟು ಹೋಗುತದೆ. ಒಂದು ರೀತಿಯಿಲ್ಲ, ನೀತಿಯಿಲ್ಲ, ಒಂದು ಧ್ಯೇಯವಿಲ್ಲ. ಇವರು ಕಾಲೇಜಿಗೆ ಯಾಕೆ ಬರುತ್ತಾರೋ ಅದೂ ತಿಳಿಯುವಂತಿಲ್ಲ. ನಮ್ಮ ತರುಣರ ಈ ಅಧಃಪತನ ನೋಡಿದಾಗೆಲ್ಲ ನನಗೆ ಭಯಂಕರ ವ್ಯಸನವಾಗುತದೆ."

" ನೀವು ಮಾತಾಡುವದನ್ನ ಕೇಳಿದರೆ ನೀವೆಲ್ಲೋ ಕಮ್ಯುನಿಸ್ಟರಿರಬೇಕು ಅನ್ನಿಸುತದೆ," ಎಂದಳು ಲೀಲಾ.

" ಕಮ್ಯುನಿಸ್ಟ್ ಅಲ್ಲ, ಸೋಶಲಿಸ್ಟ್," ಎಂದ ನರಗುಂದ.

"ಕಾಲೇಜಿನಲ್ಲೂ ಪಾರ್ಟಿ ಪ್ರಚಾರ ಮಾಡುತ್ತೀರೇನು?" ಎಂದು ಕುತೂಹಲದಿಂದ ಕೇಳಿದಳು ಕುಮುದಾ. ಅವಳಿಗೆ ಮೊದಲಿನಿಂದಲೂ ರಾಜಕೀಯದಲ್ಲಿ ಒಲವು ವಿಶೇಷವಾಗಿತ್ತು.

"ಇಂಥ ಹುಡುಗರಿರುವ ಕಡೆ ಸೋಶಲಿಜಂ ಪ್ರಚಾರವನ್ನಾದರೂ ಹ್ಯಾಗೆ ಮಾಡಬೇಕು ಹೇಳಿರಿ," ಎಂದು ನುಡಿದು ಮೃದುವಾಗಿ ನಕ್ಕ ನರಗುಂದ.

ಒಂದು ಕ್ಷಣ ಸುಮ್ಮನಿದ್ದು ಅನಂತರ ಅವನೇ ಮಾತನಾಡಿದ:

"ಇವತ್ತು ಬೋರ್ಡಿನಲ್ಲಿ ಮೇಲೆ ಬರೆದವನು, ರಬ್ಬರ್ ಬಾಣ ಒಗೆದವನು ಯಾರು ಅನ್ನೂದು ನನಗೆ ಗೊತ್ತಿದೆ."

"ಹೌದೇನು? ಯಾರದು?" ಲೀಲಾ ಕೇಳಿದಳು.

"ವರಶೆಟ್ಟಿ ಅಂತ ಒಬ್ಬ ಉಡಾಳ."

ಆ ಹೆಸರು ಕೇಳಿ ಮೂವರೂ ಗೆಳತಿಯರು ನಕ್ಕರು.

"ಎರಡು ವರ್ಷಗಳಿಂದ ಎಫ್. ವೈ. ದಲ್ಲೇ ಇದಾನಂತೆ. ಯಾವಾಗಲೂ ಇದೇ ಉದ್ಯೋಗವಂತೆ ಅವನದು. ತಂದೆ ದೊಡ್ಡ ಸಾಹುಕಾರರಂತೆ. ಇವನೊಬ್ಬನೇ ಮಗ. ಚೈನಿ ಮಾಡುವ ಉದ್ದೇಶದಿಂದಲೇ ಇವನು ಕಾಲೇಜು ಸೇರಿದ್ದು...."

"ಇದೆಂಥ ಚೈನೀರೀ ಇದು? ರಕ್ತ ತೆಗೆಯುವಂಥಾ ಕ್ರೂರತನದಿಂದ ಇವರಿಗೆ ಏನು ಸಂತೋಷವಾಗುತದೋ ಏನೊ," ಎಂದಳು ಕುಮುದ.

"ಇಂಥವು ಕೆಲವು ವಿಕೃತ ಮೆದುಳು ಇರುತ್ತವೆ. ಮುಖ್ಯವಾಗಿ ಇವರು ಹೀಗೆ ಕೆಡಲಿಕ್ಕೆ ಅವರ ಶ್ರೀಮಂತಿಕೆಯೇ ಕಾರಣ...."

"ಈಗ ನೀವು ಸೋಶಲಿಸ್ಟರಂತೆ ಮಾತಾಡ ಹತ್ತಿದಿರಿ." ಲೀಲಾ ನಗು ನಗುತ್ತ ನುಡಿದಳು: "ಶ್ರೀಮಂತಿಕೆ ಏನು ಮಾಡೀತು? ಶ್ರೀಮಂತರಲ್ಲಿ ಹುಟ್ಟಿದವರೆಲ್ಲಾ ಈ ಹರಶೆಟ್ಟಿಯಂತಾಗುತಾರೇನು?"

"ಹರಶೆಟ್ಟಿಯಲ್ಲ ಲೀಲಾ, ವರಶೆಟ್ಟಿ," ಎಂದು ತಿದ್ದಿದಳು ಕುಮುದ.

ಮತ್ತೆ ಎಲ್ಲರೂ ನಕ್ಕರು.

"ಅಲ್ಲರೀ, ನಿಮ್ಮ ಈ ಶೆಟ್ಟಿ ಕವಿಯೂ ಆಗಿದಾನೇನು?" ಎಂದು ಕೇಳಿದಳು ಲೀಲಾ.

"ಕವಿಗಳ ಹೆಸರನ್ಯಾಕೆ ಕೆಡಿಸುತ್ತೀ ಲೀಲಾ?" ಎಂದಳು ಕುಮುದ.

" ಸದಾನಂದನೂ ಕವಿಯೆ, ಈ ಶೆಟ್ಟಿಯೂ ಕವಿಯೇ! ಅಂತೂ ಈ ಕಾಲೇಜಿನಲ್ಲೆಲ್ಲ ಕವಿಗಳೇ ತುಂಬಿಕೊಂಡಂತೆ ಕಾಣುತದೆ."

" ಸದಾನಂದ ನಿಮುಗೂ ಗುರುತೇ ?" ಎಂದು ನರಗುಂದ ಕೇಳಿದ.

" ನಿಮುಗೆ ?"

" ಮೊನ್ನೆ ಮೊನ್ನೆ ಪರಿಚಯವಾಯ್ತು. ನಿಜ ಹೇಳಬೇಕಾದರೆ ನನಗೂ ಸ್ವಲ್ಪ ಸ್ವಲ್ಪ ಕವಿತೆ ಬರೆಯುವ ಚಟವಿದೆ," ಆತ ತುಸು ಸಂಕೋಚದಿಂದ ಹೇಳಿದ. " ನಾವೆಲ್ಲ ಸೇರಿ ಕಾವ್ಯಕೂಟ ಅಂತ ಒಂದು ಸಂಘ ಸ್ಥಾಪಿಸ ಬೇಕೆಂದು ಮಾಡಿದೇವೆ."

" ಎಲ್ಲಿ ? ಕಾಲೇಜಿನಲ್ಲೋ ?"

" ಅಲ್ಲ. ಇದು ಖಾಸಗಿ ಸಂಘ. ಸದಾನಂದರ ರೂಮಿನಲ್ಲಿ ರವಿವಾರ ಕ್ಕೊಮ್ಮೆ ಸೇರಿ ಕಾವ್ಯಗಾಯನ, ಚರ್ಚೆ ನಡೆಸಬೇಕೆಂದು ನಿಶ್ಚಯವಾಗಿದೆ."

" ಸರಿ ಹಾಗಾದರೆ. ಮತ್ತೆ ಭೆಟ್ಟಿಯಾಗುತ್ತೇವಲ್ಲ. ನಾವೂ ಅಲ್ಲೇ ಸಮಿಾಪದಲ್ಲೇ ಇರುವದು," ಎಂದಳು ಲೀಲಾ. " ನೀವೆಲ್ಲಿ ಇರುತ್ತೀರಿ ?"

" ನಾನೇ ? ಪೇಟೆಯಲ್ಲಿ ಒಂದು ರೂಮು ಮಾಡಿಕೊಂಡು ಇದ್ದೇನೆ."

" ಊಟ ?"

" ಕೈಲಿಂದ ಮಾಡಿಕೊಳ್ಳುತ್ತೇನೆ."

" ಬಹಳ ತ್ರಾಸವಾಗುವದಿಲ್ಲವೆ ?" ಎಂದಳು ಕುಮುದ.

" ತ್ರಾಸ ಇಲ್ಲದೆ ಯಾವದೂ ಆಗುವದಿಲ್ಲರೀ," ಎಂದು ಹೇಳಿ ನರಗುಂದ ಅವರನ್ನು ಬೀಳ್ಕೊಂಡು ನಗರದ ಹಾದಿ ಹಿಡಿದು ಸಾಗಿದ. ಗೆಳತಿಯರು ವಿಸ್ತರಣದತ್ತ ತಿರುಗಿದರು.

" ನೈಸ್ ಬಾಯ್," ಎಂದಳು ಲೀಲಾ.

" ಬಹಳ ಸರಳ ಇದ್ದಾನೆ," ಎಂದಳು ಕುಮುದಾ.

ಶಾಂತಾ ಏನನ್ನೂ ಆಡಲಿಲ್ಲ. ಸದಾನಂದನನ್ನು ನೆನೆಯುತ್ತ ಅವಳ ಮನಸ್ಸು ಮತ್ತೆ ಉದ್ವಿಗ್ನವಾಗಿತ್ತು. ಸೂಜಿಯಿಂದಾದ ಗಾಯದ ನೋವನ್ನೂ ಮರೆಸಿತ್ತು ಅವನ ನೆನಪು.

ಸಾಯಂಕಾಲ, ಕಿಟಕಿಯ ಬಳಿ ಕುಳಿತು ಅವಳು ಕವಿತೆಯೊಂದನ್ನು ಓದುತ್ತಿದ್ದ ಹಾಗೆ ಆಗ ತಾನೆ ಕಾಲೇಜಿನಿಂದ ಹಿಂದಿರುಗಿ ಬಂದಿದ್ದ ಸದಾನಂದ

ಮುಖ ತೊಳೆದುಕೊಳ್ಳಲು ಕೊಟಡಿಯ ಹೊರಗಿನ ಕಟ್ಟೆಯ ಮೇಲೆ ಬಂದು ನಿಂತ. ಅವನನ್ನಿನ್ನು ಮೊದಲಿನಂತೆ ನೋಡಬಾರದೆಂದು ಅವಳು ಯೋಚಿಸಿದ್ದ ಳಾದರೂ ಮನಸ್ಸು ಅಂಕೆಯಲ್ಲಿ ನಿಲ್ಲಲಿಲ್ಲ. ನಸುಬಾಗಿ ಮುಖ ತೊಳೆದು ಕೊಳ್ಳುತಿದ್ದ ಅವನನ್ನೊಂದು ಬಾರಿ ದಿಟ್ಟಿಸಿ ನೋಡಿ ಮತ್ತೆ ಪುಸ್ತಕದತ್ತ ದೃಷ್ಟಿ ಹೊರಳಿಸಿದಳು. ನೋಡಬಾರದು ಅವನನ್ನು; ಮತ್ತೆ ನೋಡಬಾರದು. ನೋಡಿ ಮಾರು ಹೋಗುವುದಕ್ಕಿಂತ ನೋಡದಿರುವುದೇ ಒಳ್ಳೆಯದು. ಅವನು ತಮ್ಮ ಜಾತಿಯವನಲ್ಲವೆಂಬುದು ಇಷ್ಟು ಬೇಗ ಗೊತ್ತಾದುದೂ ಒಳ್ಳೆಯದೇ. ಅವನೆಡೆಗೆ ಓಡುತ್ತಿದ್ದ ತನ್ನ ಮನಸ್ಸನ್ನು ಹತೋಟಿಯಲ್ಲಿಟ್ಟುಕೊಳ್ಳಲು ಸುಲಭ ವಾಯಿತು....

ಹಠಾತ್ತಾಗಿ ಅವಳ ಕಣ್ಣುಗಳಲ್ಲಿ ಅಶ್ರುಗಳು ಚಿಮ್ಮಿ ಬಂದುವು. ಸೆರಗಿ ನಿಂದ ಅವುಗಳನ್ನು ಮಿಡಿದುಕೊಂಡು ಕವಿತೆಯ ಮೇಲೆ ದೃಷ್ಟಿಯನ್ನೋಡಿ ಸಿದಳು :

"She only said 'My life is dreary,
He cometh not,' She said ;
She said : 'I am aweary, aweary,
I would that I were dead !'"

## ೧೦

" ನಿಮ್ಮ ತಂಗಿಯ ಮದುವೆಯದೇನಾದರೂ ಗೊತ್ತಾಯಿತೇನ್ರೀ ರಾಮ ಚಂದ್ರರಾವ್ ?" ಎಂದು ಕೇಳಿದ ವೀರಣ್ಣ.

ರಾಮಚಂದ್ರ ನಿಟ್ಟುಸಿರೊಂದನ್ನು ಬಿಟ್ಟು, ಹಣೆಯ ಮೇಲಿನ ಬೆವರ ನ್ನೊರೆಸಿಕೊಳ್ಳುತ್ತ ಹೇಳಿದ :

" ಇನ್ನೂ ಏನೂ ಆಗಲಿಲ್ಲ ವೀರಣ್ಣ. ವರಗಳನ್ನು ಹುಡುಕಿ ನನಗಂತೂ ಜೀವ ಬೇಸರವಾಗಿ ಹೋಯಿತು."

" ಅವತ್ತು ಯಾವದೋ ಊರಿಗೆ ಹೋಗಬೇಕು ಅಂತ ಇದ್ದಿರಲ್ಲ ?"

" ಹೋಗಲಿಕ್ಕೆ ನನಗೆ ರಜಾ ಸಿಗಲಿಲ್ಲವಲ್ಲ. ಅಷ್ಟರಲ್ಲಿ ಅವರು ಮನಸ್ಸು ಬದಲಿಸಿ ಅಲ್ಲಿಗೆ ಬರುವ ಅಗತ್ಯವಿಲ್ಲವೆಂತ ತಿಳಿಸಿಬಿಟ್ಟರು."

ಮಾಣಿ ತಂದಿರಿಸಿದ ಚಹವನ್ನು ಗುಟುಕರಿಸುತ್ತ ಸ್ವಲ್ಪ ಹೊತ್ತು ಸುಮ್ಮನೆ ಕುಳಿತಿದ್ದು ಅನಂತರ ವೀರಣ್ಣ ಹೇಳಿದ :

" ಒಂದು ಪ್ರಪೋಸಲ್ ಬಂದಿದೆ ನನ್ನ ಹತ್ತಿರ. ನೀವು ವಿಚಾರಮಾಡುವ ದಾದರೆ...."

ಒಂದೇ ಗುಟುಕಿನಲ್ಲಿ ಚಹವನ್ನೆಲ್ಲ ಗಂಟಲಿಗಿಳಿಸಿ ರಾಮಚಂದ್ರನೆಂದ :

" ಪ್ರಪೋಸಲ್ಲೇ ? ಯಾರದು ? ಎಲ್ಲಿಯವರು ಅವರು ?"

" ಇಲ್ಲಿಯೆ ಇದ್ದಾರೆ ಸದ್ಯಕ್ಕೆ. ಸಬ್‌ಇನ್ಸ್‌ಪೆಕ್ಟರ್ ಮುಧೋಳರನ್ನು ನೀವು ನೋಡಿರಬಹುದಲ್ಲ ?"

ಇಲ್ಲ. ರಾಮಚಂದ್ರ ಅವರನ್ನು ನೋಡಿರಲಿಲ್ಲ. ತನ್ನ ಕಚೇರಿ, ತನ್ನ ಕೆಲಸ, ತನ್ನ ಮನೆ, ತಂಗಿಯ ಮದುವೆಯ ಯತ್ನ – ಇದಿಷ್ಟೆ ಅವನ ವರ್ತುಲ ವಾಗಿತ್ತು. ವೀರಣ್ಣ ಸ್ನೇಹಜೀವಿ. ನಗರದಲ್ಲಿದ್ದ ಅವನ ಗೆಳೆಯರ ಬಳಗ ಬಹಳ ದೊಡ್ಡದಾಗಿತ್ತು.

"ನೀವು ಒಪ್ಪುವದಾದರೆ ನಿಮ್ಮ ತಂಗಿಯ ಮದುವೆ ಇಂದೇ ಹೊಂದಿಸಿ ಬಿಡುತ್ತೇನೆ. ಫೌಜದಾರರೂ ಬಹಳ ಒಳ್ಳೆಯವರು. ಪೋಲೀಸ್ ಖಾತೆಯವ ರಾದರೂ ಸಭ್ಯರು. ಬೇರೆ ಅನೇಕರ ಹಾಗಲ್ಲ. ಕುಡಿತ ಗಿಡಿತ ಮೊದಲಾದ ಯಾವ ಚಟವೂ ಇಲ್ಲ."

"ವಯಸ್ಸೆಷ್ಟು ಅವರಿಗೆ?"

"ವಯಸ್ಸು?" ವೀರಣ್ಣ ಕೊಂಚ ತಡೆದು ಬೀಡಿಯೊಂದನ್ನು ಹೊತ್ತಿಸಿ ಹೊಗೆಯೆಳೆಯುತ್ತ ಹೇಳಿದ: "ವಯಸ್ಸು ಸ್ವಲ್ಪ ಹೆಚ್ಚೇ ಅನ್ನಿರಿ."

"ಎಷ್ಟು?"

"ಹಾಗೆ ಬಹಳ ಹೆಚ್ಚೇನೂ ಅಲ್ಲ. ನಿಜವಾಗಿ ಅವರಿನ್ನೂ ತರುಣರೇ ಅನ್ನಬೇಕು. ಮೂವತ್ತೈದು ಅಂದರೆ ಬಹಳವೇನೂ ಅಲ್ಲ, ಅಲ್ಲವೇ?"

ಹದಿನೇಳರ ಹುಡುಗಿಗೆ ಮೂವತ್ತೈದು ಅಂದರೆ ಹೆಚ್ಚೇ ಆಯಿತು. ಶಾಂತಾ ಇವರನ್ನು ಒಪ್ಪುವಳೋ ಇಲ್ಲವೋ? ಎಂದು ಯೋಚಿಸುತ್ತ ರಾಮ ಚಂದ್ರ ಕೇಳಿದ:

"ಇದು ಎರಡನೆಯ ಸಂಬಂಧವೇನ್ರೀ ವೀರಣ್ಣ?"

"ಹೌದು. ಮೊದಲನೆಯ ಹೆಂಡತಿ ಮೊನ್ನೆ ಟೈಫಾಯಿಡ್‌ನಿಂದ ತೀರಿ ಕೊಂಡರು."

"ಮಕ್ಕಳಿವೆಯೇನು?"

"ಇಬ್ಬರು ಹುಡುಗಿಯರಿದ್ದಾರೆ. ಇನ್ನೂ ಬಹಳ ಸಣ್ಣವರು, ಮೊದಲನೆ ಯವಳಿಗೆ ನಾಲ್ಕು ವರ್ಷ, ಎರಡನೆಯದು ಇನ್ನೂ ಎರಡು ವರ್ಷದ ಕೂಸು. ಪಾಪ. ಎರಡೂ ಪರದೇಶಿಗಳಾದವು. ಅವನ್ನು ನೋಡಿಕೊಳ್ಳಲಿಕ್ಕೆ ಯಾರಾದರೂ ಬೇಕಲ್ಲ....ಅದಕ್ಕೆ ಫೌಜದಾರ ಸಾಹೇಬರು ಮತ್ತೊಂದು ಹೆಣ್ಣು ನೋಡುತ್ತಿ ದ್ದಾರೆ...."

ಮೇಜಿನ ಮೇಲೆ ಹಾರಾಡುತಿದ್ದ ನೊಣಗಳನ್ನು ದಿಟ್ಟಿಸುತ್ತ ರಾಮಚಂದ್ರ ಮೌನವಾಗಿ ಕುಳಿತುಕೊಂಡಿದ್ದ. ವೀರಣ್ಣ ನಿಧಾನವಾಗಿ ಮುಂದುವರೆಸಿದ:

“ನನ್ನದೇನೂ ಒತ್ತಾಯವಿಲ್ಲ ರಾಮಣ್ಣಾ. ನೋಡಿರಿ. ವಿಚಾರ ಮಾಡಿರಿ. ನನ್ನ ಅಭಿಪ್ರಾಯ ಹೇಳಬೇಕೆಂದರೆ ಈ ಸಂಬಂಧ ಏನೂ ಕೆಟ್ಟದ್ದಲ್ಲ. ಎಷ್ಟೋ ಜನರು ಅವರಿಗೆ ಹೆಣ್ಣು ಕೊಡಲು ತಯಾರಿದ್ದಾರೆ. ಫೌಜದಾರರೂ ಕಲಿತವರು. ಸುಸಂಸ್ಕೃತ ಮನುಷ್ಯ. ಈಗ ಎರಡುನೂರು ಸಂಬಳವಿದೆ. ರಿಟೈರ್ ಆಗುವ ವೇಳೆಗೆ ಅವರು ಡಿ.ಎಸ್.ಪಿ. ಆಗುವದು ಖಂಡಿತ. ಈಗಾಗಲೇ ಸಾಕಷ್ಟು ಸಂಪಾದನೆ ಮಾಡಿದ್ದಾರೆ. ಊರಲ್ಲಿ ಹೊಲ ಮನೆಗಳೂ ಇವೆ. ಇಂಥವರಿಗೆ ಹೆಣ್ಣು ಕೊಡಲು ಯಾರು ತಯಾರಾಗಲಿಕ್ಕಿಲ್ಲ ಹೇಳಿರಿ.”

“ನಮ್ಮ ಜತೆಗೆ ಸಂಬಂಧ ಬೆಳಸಲು ಅವರು ಸಿದ್ಧರಾಗಬಹುದೇ ವೀರಣ್ಣಾ ?”

“ನಿಮ್ಮ ತಂಗಿಯ ವಿಷಯ ನಾನವರ ಮುಂದೆ ಹೇಳಿದ್ದೇನೆ. ಅವರೂ ಸುಶಿಕ್ಷಿತ ಹುಡುಗಿಯನ್ನು ಹುಡುಕುತ್ತಿದಾರೆ. ನನಗೂ ಅವರಿಗೂ ಬಹಳ ಗೆಳೆತನ. ನೀವೆಲ್ಲ ಒಪ್ಪಿದರೆ ಈ ಸಂಬಂಧ ಗಟ್ಟಿಮಾಡುವ ಜವಾಬ್ದಾರಿ ನನ್ನದು.”

“ಅದೆಲ್ಲ ಸರಿ. ಆದರೆ....”

“ಏನು ? ವರದಕ್ಷಿಣೆಯೇ ? ಅದರ ಮಾತೇ ಇಲ್ಲ. ಹುಡುಗಿ ಯೋಗ್ಯಳಾಗಿದ್ದರಾಯಿತು, ಫೌಜದಾರರು ಹಣದ ವಿಚಾರವನ್ನೇ ಮಾಡುವದಿಲ್ಲ. ಮದುವೆಯ ಖರ್ಚೂ ಅವರೇ ವಹಿಸಿಕೊಳ್ಳಬಹುದು.”

ಫೌಜದಾರರ ರೂಪದಲ್ಲಿ ದೇವರೇ ತನ್ನನ್ನು ಪಾರುಮಾಡಲು ಬಂದಿರಬೇಕೆಂದು ರಾಮಚಂದ್ರನಿಗೆನ್ನಿಸಿತು. ತನ್ನ ನಾಲ್ಕು ವರ್ಷಗಳ ಗೋಳಾಟವೊಮ್ಮೆ ಮುಗಿಯುವ ಹಾಗೆ ತೋರುತ್ತದೆ. ವರದಕ್ಷಿಣೆಯ ಚಿಂತೆಯಿಲ್ಲ, ಮದುವೆಯ ಖರ್ಚಿನ ಚಿಂತೆಯೂ ಇಲ್ಲ. ಹಾಗಿದ್ದರೆ ತನ್ನೆಲ್ಲ ಚಿಂತೆಗಳೂ ಪರಿಹಾರಗೊಂಡಂತಾಗುವುದು....

ದಿನವೂ ಬಾಡಿದ ಮುಖವನ್ನು ಹೊತ್ತು ಮನೆಗೆ ಬರುತ್ತಿದ್ದ ರಾಮಚಂದ್ರ ಅಂದು ಪ್ರಫುಲ್ಲವದನನಾಗಿ ಬಂದುದನ್ನು ಕಂಡಾಗ ಏನೋ ವಿಶೇಷ

ವಿರಬೇಕೆಂದು ಮಧ್ವರಾಯರಿಗೆನ್ನಿಸದಿರಲಿಲ್ಲ. ರಾಮನಾಮ ಜಪ ಮಾಡುತ್ತಿದ್ದ ಅವರು ಮೆಲ್ಲನೆ ತಲೆಯೆತ್ತಿ ಕೇಳಿದರು :

" ಏನು ವಿಶೇಷ ರಾಮಣ್ಣಾ ?"

ಕೋಟು ಟೊಪ್ಪಿಗೆಗಳನ್ನು ತೆಗೆದು ಗೂಟಕ್ಕಿರಿಸಿ ತಂದೆಯ ಬಳಿ ಕುಳಿತು ಕೊಂಡು ಆತ ಹೇಳಿದ :

" ದೇವರಿಗೆ ನಮ್ಮ ಮೇಲೆ ದಯೆ ಬಂದಂತೆ ಕಾಣುತದೆ ಅಣ್ಣಾ."

" ಅಗಣಿತ ಗುಣಗಣ ಭೂಷಿತ ರಾಮ

ರಾಕಾ ಚಂದ್ರ ಸಮಾನನ ರಾಮ

ರಾಮ ರಾಮ ಜಯ ಸೀತಾರಾಮ" ಎಂದು ಹೇಳಿ ದೇವರ ಪಟಕ್ಕೆ ಕೈಮುಗಿದು, ಮಗನ ಕಡೆ ತಿರುಗಿ ರಾಯರು ಕೇಳಿದರು :

" ಏನು ಸುದ್ದಿ ರಾಮಣ್ಣಾ ?"

ರಾಮಚಂದ್ರ ನಿಧಾನವಾಗಿ ಫೌಜದಾರರ ವಿಷಯವನ್ನೆಲ್ಲ ಹೇಳಿ,

" ಈ ಸಂಬಂಧ ಒಳ್ಳೆಯದು ಅಂತ ನಿನಗೂ ಅನ್ನಿಸುವದಲ್ಲವೇನಣ್ಣಾ ?" ಎಂದ.

ಮಧ್ವರಾಯರು ಒಡನೆಯೆ ಉತ್ತರವೀಯಲಿಲ್ಲ. ಒಂದೆರಡು ನಿಮಿಷ ಸುಮ್ಮನೆ ಕುಳಿತಿದ್ದು ಅವರೆಂದರು :

" ಎರಡನೆಯ ಸಂಬಂಧ ಅನ್ನುವದೊಂದೇ ತೊಡಕು ರಾಮಣ್ಣಾ."

" ಆದರೇನಾಯಿತಣ್ಣಾ ? ಫೌಜದಾರರಿನ್ನೂ ತರುಣರು ಅನ್ನುವದನ್ನ ಮರೆಯಬಾರದು ನಾವು."

" ಮಾಡಿಕೊಳ್ಳುವ ಹುಡುಗಿ ಅವರನ್ನ ಒಪ್ಪಬೇಕಲ್ಲ ಮೊದಲು ? ಶಾಂತಿ ಯನ್ನು ಕೇಳೋಣ. ಅವಳು ಅವರನ್ನ ನೋಡಲಿ. ಅವಳು ಒಪ್ಪಿದರೆ ಮುಂದೆ ಸುಲಭ."

ರಾಮಚಂದ್ರನ ಮನಸ್ಸು ಮತ್ತೆ ವಿವಂಚನೆಗೊಳಗಾಯಿತು. ತಂದೆ ಯೆನ್ನುವುದೂ ಸರಿಯೆ. ಮೊದಲು ಶಾಂತಿ ಅವರನ್ನೊಪ್ಪಬೇಕು. ಅವಳು ಒಪ್ಪುವಳೊ ಇಲ್ಲವೊ ಯಾರು ಬಲ್ಲರು ? ಎರಡನೆಯ ಸಂಬಂಧವೆನ್ನುತ್ತಲೂ ಅವಳು ಮೂಗು ಮುರಿದು ನಿರಾಕರಿಸಿಬಿಡುವಳೊ ಏನೊ. ಅವಳೇನು ಅಶಿಕ್ಷಿತ ಹಳ್ಳಿಯ ಹುಡುಗಿಯಲ್ಲ. ಕಾಲೇಜಿಗೆ ಹೋಗುವ ಸುಶಿಕ್ಷಿತ ಯುವತಿ.

ತನ್ನ ಮನಸ್ಸೊಪ್ಪದವರನ್ನು ಆಕೆ ಮದುವೆಯಾಗಲು ಸಿದ್ಧಳಾಗಳೆಂದೇ ತೋರುತ್ತದೆ....

"ಇವಳಿಗೆ ಇಲ್ಲಿಯತನಕ ಓದಿಸದಿದ್ದರೇ ಒಳ್ಳೆಯದಾಗುತಿದ್ದಿತೇನೊ," ಎಂದು ತನ್ನಷ್ಟಕ್ಕೇ ಹೇಳಿಕೊಂಡ ರಾಮಚಂದ್ರ.

ಪಡಸಾಲೆಯಲ್ಲಿ ನಡೆಯುತ್ತಿದ್ದ ಈ ಮಾತುಕತೆಗಳು ತನ್ನ ಕೊಟಡಿಯಲ್ಲಿ ಕುಳಿತಿದ್ದ ಶಾಂತಳಿಗೂ ಕೇಳಿಸಿದ್ದುವು. ಮೊದಲೇ ಶೋಕಾಕುಲವಾಗಿದ್ದ ಅವಳ ಚಿತ್ತ ಇನ್ನೂ ಉದ್ವಿಗ್ನವಾಯಿತು. ಇಂಥ ವಾರ್ತೆ ಅವಳಿಗೆ ಅನಿರೀಕ್ಷಿತವಾದುದೇನೂ ಆಗಿರಲಿಲ್ಲ. ಒಂದಿಲ್ಲೊಂದು ದಿನ ತಾನು ಇಂಥ ಸಮಸ್ಯೆಯನ್ನೆದುರಿಸಬೇಕಾಗುವುದೆಂದು ಅವಳೆಂದೋ ತಿಳಿದುಕೊಂಡಿದ್ದಳು. ಅಂತೆಯೆ ಅವಳಿಗೆ ಈ ವಾರ್ತೆ ಆಶ್ಚರ್ಯವನ್ನೇನೂ ಉಂಟುಮಾಡಲಿಲ್ಲ. ಮದುವೆಗೆ ನೆರೆದು ನಿಂತ ತನ್ನಂಥ ಬ್ರಾಹ್ಮಣ ಯುವತಿಯರು ಇಂಥ ಸಂದರ್ಭಗಳನ್ನೆದುರಿಸಬೇಕಾದುದು ಅನಿವಾರ್ಯ....

ಅಂದು ರಾತ್ರೆ ರಾಮಚಂದ್ರ ಮತ್ತೆ ಆ ವಿಚಾರವನ್ನು ಪ್ರಸ್ತಾಪಿಸಲಿಲ್ಲ. ಮಾರನೆಯ ದಿನ ಬೆಳಿಗ್ಗೆ ಚಹ ಕುಡಿಯುತ್ತ ಕುಳಿತಿದ್ದಾಗ ಮೆಲ್ಲನೆ ಆ ಮಾತು ತೆಗೆದು ಶಾಂತಳನ್ನು ಕುರಿತು ಹೇಳಿದ:

"ನಾಳೆ ಆದಿತ್ಯವಾರ ಒಬ್ಬರು ನಿನ್ನ ನೋಡಲು ಬರ್ತಾರೆ ಶಾಂತೂ."

ಅವಳು ಮಾತನ್ನೇನೂ ಆಡದೆ ಚಹದ ಕಪ್ಪುಗಳನ್ನೆತ್ತಿಕೊಂಡು ಅಡುಗೆ ಮನೆಗೆ ಹೊರಟುಹೋದಳು.

"ಈ ಸಲ ಸಂಬಂಧ ಕುದುರುವ ಹಾಗೆ ಕಾಣುತದೆ ಶಾಂತೂ," ಎಂದಳು ಜಾನಕಿ. ಮುನ್ನಾದಿನದಿಂದ ಅವಳೂ ಕೊಂಚ ಗೆಲುವಾಗಿದ್ದಳು.

"ಅಂತೂ ಈ ಸಂಬಂಧದಿಂದ ಇವರಿಗೆಲ್ಲಾ ಸಂತೋಷವಾಗುವಂತೆ ಕಾಣುತ್ತದೆ," ಎಂದು ಮನಸ್ಸಿನಲ್ಲೇ ಹೇಳಿಕೊಂಡಳು ಶಾಂತಾ. ಇವರಿಗೇನೋ ಸಂತೋಷವಾಗುವುದು. ತನಗೆ ಸಂತೋಷವಾಗುವುದೋ ವ್ಯಸನವಾಗುವುದೋ ಎಂಬುದನ್ನು ಯಾರೂ ಯೋಚಿಸುವ ಹಾಗೆ ಕಾಣುವುದಿಲ್ಲ. 'ಶಾಂತಳನ್ನು ಕೇಳೋಣ' ಎಂಬುದಾಗಿ ತಂದೆ ಹೇಳಿದುದೇನೊ ನಿಜ. ಆದರೆ ಅವರೂ ತನ್ನನ್ನು ಕೇಳಲಿಲ್ಲ. ರಾಮಣ್ಣ ಕೇಳಿದ....ಅಲ್ಲ....ಹೇಳಿದ....ಇದೂ ಒಂದು ಬಗೆ ಕೇಳುವುದು! "ಆದಿತ್ಯವಾರ ನೋಡಲು ಬರ್ತಾರೆ." ಅವರು ಬರುವ

ಹಾಗೆ ಬರುತ್ತಾರೆ. ತಾನು ಸಿದ್ಧಳಾಗಬೇಕು. ಇಲ್ಲಿಯವರೆಗೆ ನೂರಾರು ಜನರೆದುರಿಗೆ ಮುಖ ಪ್ರದರ್ಶಿಸಿದ ಹಾಗೆ ಇವರೆದುರಿನಲ್ಲೂ ಪ್ರದರ್ಶಿಸಬೇಕು....

"ನೂರು ಜನರಾದರು. ಇವರು ನೂರೊಂದನೆಯವರು. ಅದಕ್ಕೇನಂತೆ ಸಂಕೋಚ?" ಎಂದೂ ಅವಳಿಗೆನ್ನಿಸಿತು. ಆದರೆ, ಮರುಕ್ಷಣವೆ, "ಇವರೇ ಕೊನೆಯವರಾಗಬಹುದೆಂದು ಕಾಣುತ್ತದೆ. ಈ ಸಂಬಂಧ ಗಟ್ಟಿಯಾಗಬಹುದೆಂದೇ ಎಲ್ಲರೂ ಹೇಳುತ್ತಾರೆ," ಎಂದು ಯೋಚನೆ ಬಂದಾಗ ಅವಳ ಕರುಳಿನಲ್ಲಿ ಕಲಮುಲವಾಗತೊಡಗಿತು.

ಜಾನಕಿ ಹೇಳುತ್ತಿದ್ದಳು :

"ತಿಂಗಳಿಗೆ ಎರಡೂವರೆ ನೂರು ಸಂಬಳವಂತೆ ಶಾಂತೂ. ಬ್ಯಾಂಕಿನಲ್ಲಿ ಇಪ್ಪತ್ತುಮೂರು ಸಾವಿರ ಇದೆಯಂತೆ!"

ಜಾನಕಿಗೆ ಆನಂದವಾಗುವುದು ಸಹಜ. ಅವಳು ಹಳೆಯ ಮನೋವೃತ್ತಿಯ ಹೆಣ್ಣು. ಅವಳ ದೃಷ್ಟಿಯಲ್ಲಿ ಹಣವೇ ಎಲ್ಲಕ್ಕಿಂತ ದೊಡ್ಡದು. ಸಹಜ. ಅವಳಿಗೆ ಆನಂದವಾಗುವುದು ಸಹಜ.

"ಫೌಜದಾರರ ಹೆಂಡತಿ ಅಂದರೇನವ್ವ! ದೊಡ್ಡ ರಾಣಿಯ ಹಾಗೆ ಮೆರೆಯಬಹುದು ನೀನು. ಊರನ್ನೆಲ್ಲಾ ನಡುಗಿಸುವ ಗಂಡ....ನೀನು ಹೇಳಿದ ಕೆಲಸ ಎಲ್ಲಾ ಮಾಡುವ ಶಿಪಾಯಿಗಳು. ಇಂಥ ಭಾಗ್ಯ ಎಲ್ಲರಿಗೂ ಸಿಗುವದಿಲ್ಲ ಶಾಂತೂ...."

ಇಂಥ ಭಾಗ್ಯ....

ಶಾಂತಳ ತುಟಿಗಳ ಮೇಲೆ ವಿಕಟವೂ ಕ್ರೂರವೂ ಆದ ನಗೆ ತೇಲತೊಡಗಿತು. ಭಾಗ್ಯ....ಇದೂ ಒಂದು ಭಾಗ್ಯ....ಬೇರೆ ವರ ಸಿಕ್ಕಲಿಲ್ಲವಾದುದರಿಂದ ಒಬ್ಬ ವಿಧುರನನ್ನು ಕಟ್ಟಿಕೊಳ್ಳುವ ಭಾಗ್ಯ....ಹ ಹ ಹ ಹ ಹ್ಹ....

"ಹ್ಯಾಗೆ ಕುಲುಕುಲು ನಗುತ್ತಾಳಲ್ಲ! ಇವಳಿಗೂ ಸಂತೋಷವಾಗುವದು ಸಹಜವಲ್ಲವೇ? ಪಾಪ. ಹುಡುಗಿ ಎಷ್ಟು ವರ್ಷ ಮದುವೆಯಿಲ್ಲದೆ ಕುಳಿತಿತ್ತು!" ಎಂದು ತನ್ನಲ್ಲಿ ತಾನೆ ಹೇಳಿಕೊಂಡು ಜಾನಕಿ ಒಲೆಯ ಕಡೆ ದೃಷ್ಟಿ ತಿರುಗಿಸಿದಳು.

ಕೊಡವನ್ನೆತ್ತಿಕೊಂಡು ಬಾವಿಗೆ ಹೊರಟಳು ಶಾಂತಾ. ಮನಸ್ಸಿನ ಉದ್ವೇಗವನ್ನು ಮರೆಯಿಸಲು ಅವಳು ಯಾವುದೊಂದು ಕೆಲಸದಲ್ಲಿ ತೊಡಗುವುದು ಅಗತ್ಯವಾಗಿತ್ತು.

ಬಾವಿಯ ಮೇಲೆ ನೀರು ಸೇದುತ್ತ ನಿಂತಿದ್ದ ಸದಾನಂದ ಅವಳನ್ನು ಕಂಡು ಸಹಾನುಭೂತಿ ಬೆರೆತ ದನಿಯಲ್ಲಿ ನುಡಿದ:

"ನಿನ್ನೆ ಕಾಲೇಜಿನಲ್ಲಿ ಯಾರೋ ಉಡಾಳರು ನಿಮಗೆ ಗಾಯ ಮಾಡಿದ ರಂತಲ್ಲ? ಬಹಳ ನೋವಾಯಿತೇ?"

"ಅಂಥ ನೋವೇನೂ ಇಲ್ಲ."

"ನೋವಾಗದಿರುತ್ತದೆಯೆ? ಈಚೆಗೆ ಹುಡುಗರು ಬಹಳ ಕೆಟ್ಟು ಹೋದರು."

"ಏನು ಮಾಡುವದು ಹೇಳಿರಿ. ಇಂಥವರೂ ಇರ್ತಾರೆ. ಸಹಿಸಿಕೊಳ್ಳ ಬೇಕಲ್ಲ?"

"ಅಡ್ಡಿಯಿಲ್ಲ. ನಿಮಗೆ ಬಹಳ ತಾಳ್ಮೆಯಿದೆ. ಈ ಸುದ್ದಿ ಕೇಳಿ ನನಗೆ ಬಹಳ ವ್ಯಸನವಾಯಿತು. ನೀವೇಕೆ ಆಗಿಂದಾಗ ಪ್ರಿನ್ಸಿಪಾಲರ ಕಡೆ ತಕರಾರು ಮಾಡಲಿಲ್ಲ?"

"ತಕರಾರಿನಿಂದಾದರೂ ಏನು ಉಪಯೋಗ? ನೂರಿನ್ನೂರು ಹುಡುಗರಲ್ಲಿ ಯಾರು ಹೊಡೆದರೆನ್ನುವದು ಹ್ಯಾಗೆ ಗೊತ್ತಾಗಬೇಕು?"

"ಅದೂ ನಿಜವೇ ಅನ್ನಿರಿ. ಆದರೆ ಇಂಥವನೇ ಹೊಡೆದ ಅಂತ ಸಾಕ್ಷಿ ಹೇಳಲು ಒಬ್ಬರು ತಯಾರಿದ್ದಾರೆ, ನರಗುಂದ ಅಂತ. ನಿಮಗೂ ಹೇಳಿದ ರಂತಲ್ಲ?"

"ಹೌದು. ಭೆಟ್ಟಿಯಾಗಿದ್ದರು. ಆದರೆ ನನಗೇ ಯಾಕೋ ಬೇಸರು ತಕರಾರು ಅಂದರೆ...."

ಸದಾನಂದ ತನ್ನ ಕೊಡವನ್ನೆತ್ತಿಕೊಂಡು ಕೊಟಡಿಗೆ ಹೊರಟುಹೋದ. ಅವನು ಇನ್ನೂ ಸ್ವಲ್ಪ ಹೊತ್ತು ಬಾವಿಯ ಮೇಲೆ ನಿಂತು ಮಾತನಾಡಬೇಕಿದ್ದಿ ತೆಂದು ಅವಳಿಗೆನ್ನಿಸಿತು. ಅವನೊಡನೆ ಸಂಭಾಷಿಸುತ್ತ ತನ್ನ ಕಳವಳವನ್ನೆಲ್ಲ ಅವಳು ಮರೆತುಬಿಟ್ಟಿದ್ದಳು. ಆತ ಹೋಗುತ್ತಲೂ ಅದು ಮತ್ತೆ ಅವಳ ಮನಸ್ಸನ್ನು ಕೊರೆಯುತೊಡಗಿತು.

ಕಾಲೇಜಿಗೆ ಹೋಗುತ್ತಿದ್ದಾಗ ಲೀಲ ಮತ್ತು ಕುಮುದರೆದುರು ಫೌಜ ದಾರರ ವಿಷಯವನ್ನೆಲ್ಲ ವರದಿಯೊಪ್ಪಿಸಿದುದಾಯಿತು. ಅವಳು ಹೇಳಿ ಮುಗಿ ಸುತ್ತಲೂ ಲೀಲ ಚೇಷ್ಟೆಯ ದನಿಯಲ್ಲಿ ನುಡಿದಳು:

"ಅಂತೂ ಸಬ್‌ಇನ್ಸ್‌ಪೆಕ್ಟ್ರೆಸ್ ಆಗುವಾಕೆ ನಮ್ಮ ಶಾಂತಾ!"

"ಇನ್ನೇನು ಆ ವರಶೆಟ್ಟಿ ಜೈಲು ಕಾಣಬಹುದು!" ಎಂದಳು ಕುಮುದ.

ಶಾಂತಳ ಕಣ್ಣುಗಳಲ್ಲಿ ನೀರೂರುವ ಹಾಗಾಯಿತು. "ನಿಮಗೆ ಚೇಷ್ಟೆ. ನನಗೆ ಪ್ರಾಣಸಂಕಟ!"

ಚೇಷ್ಟೆಯನ್ನು ನಿಲ್ಲಿಸಿ ಲೀಲಾ ನೊಂದ ದನಿಯಲ್ಲಿ ಹೇಳಿದಳು:

"ಅಳಬೇಡವೇ ಬೇಬೀ. ನಿನ್ನ ಮನಸ್ಸಿಗೊಪ್ಪದವನಿಗೆ ನಿನ್ನನ್ನು ಕೊಡಲು ಬಿಡ್ತೇವೆಯೆ ನಾವು? ಆತ ಬಂದು ನೋಡಿಕೊಂಡು ಹೋಗಲಿ ಮೊದಲು. ಆ ಮೇಲೆ ಅವನನ್ನ ಒಪ್ಪುವದೂ ಬಿಡುವದೂ ನಿನ್ನ ಕೈಯಲ್ಲೇ ಇದೆಯಲ್ಲ?"

"ನಮ್ಮ ತಂದೆ ಮತ್ತು ರಾಮಣ್ಣ ಇಬ್ಬರಿಗೂ ಈ ಸಂಬಂಧ ಒಪ್ಪಿಗೆಯಾದ ಹಾಗೆ ಕಾಣುತ್ತದೆ."

"ವೆಂಕಣ್ಣನೇನೆನ್ನುತಾನೆ?"

"ಅವನೂ ನಾನೂ ಇನ್ನೂ ಈ ವಿಷಯ ಮಾತಾಡಿಲ್ಲ."

"ಮಾತಾಡಿ ನೋಡು. ಅವನೊಬ್ಬ ನಿನ್ನ ಪಾರ್ಟಿಗೇ ಇದ್ದರೊಳ್ಳೆಯದು," ಎಂದಳು ಲೀಲಾ.

ಸಾಯಂಕಾಲ ಕಾಲೇಜಿನಲ್ಲಿ ಪರಸ್ಥಳದ ವಿದ್ವಾಂಸರೊಬ್ಬರ ಉಪನ್ಯಾಸವಿತ್ತು. ಲೀಲಾ ಮತ್ತು ಕುಮುದ ಅದನ್ನು ಕೇಳಿಯೆ ಮನೆಗೆ ಹೋಗುವುದೆಂದು ನಿಶ್ಚಯಿಸಿಕೊಂಡಿದ್ದರು. ಶಾಂತಳಿಗೆ ಮಾತ್ರ ಅಂದು ಯಾವುದೂ ಬೇಡವಾಗಿತ್ತು. ಗೆಳತಿಯರನ್ನು ಬೀಳ್ಕೊಂಡು ಅವಳೊಬ್ಬಳೇ ಮನೆಯ ಕಡೆ ಹೊರಟಿದ್ದ ಹಾಗೆ ತನ್ನ ಹಿಂದಿನಿಂದ ಯಾರೋ ಅವಸರದಿಂದ ನಡೆದುಬರುತ್ತಿದ್ದುದನ್ನು ಕಂಡು ಸಹಜವಾಗಿಯೆ ತಿರುಗಿನೋಡಿದಳು. ಬರುತ್ತಿದ್ದವನು ಸದಾನಂದ.

ಬೇಗ ಬೇಗ ಹೆಜ್ಜೆ ಹಾಕುತ್ತ ಬಂದು ಆತ ಅವಳನ್ನು ಕೂಡಿಕೊಂಡ.

"ನೀವೂ ಸಭೆಗೆ ಬರಬಹುದೆಂದು ತಿಳಿದು ನಾನೂ ಹೋಗಿ ಕೂತುಕೊಂಡಿದ್ದೆ. ನೀವು ಮನೆಗೆ ಹೋದಿರೆಂದು ಲೀಲಾ ಹೇಳಿದಳು. ಸರಿ. ನಾನೂ ಹೊರಟುಬಿಟ್ಟೆ," ಎಂದ ಸದಾನಂದ.

" ನಾನು ಹೊರಟರೆ ನೀವೂ ಯಾಕೆ ಹೊರಡಬೇಕು ?" ಅವಳು ಮೃದು ವಾಗಿ ನಗುತ್ತ ಕೇಳಿದಳು.

ಆ ಪ್ರಶ್ನೆಗೆ ಏನು ಉತ್ತರವೀಯುವುದೆಂದು ತಿಳಿಯದೆ ಆತ ತಬ್ಬಿಬ್ಬಾದ, ಕ್ರಾಪುಕೂದಲಲ್ಲಿ ಬೆರಳುಗಳನ್ನಾಡಿಸುತ್ತ ಅವಳ ಮುಖವನ್ನೊಮ್ಮೆ ದಿಟ್ಟಿಸಿ ನೋಡಿದ. ಅವಳ ತುಟಿಗಳ ಮೇಲೆ ನರ್ತಿಸುತ್ತಿದ್ದ ನಗೆಯನ್ನು ಕಂಡೊಡನೆ ಅವನಿಗೂ ನಗೆ ಬಂದಿತು.

" ಹಿ ಹಿ," ಎನ್ನುತ್ತ ಆತ ನಕ್ಕು, ಕಾಲುಹಾದಿಯನ್ನು ಬಿಟ್ಟು ಹಸುರು ಹಾಸಿನ ಮೇಲೆ ನಡೆಯತೊಡಗಿದ. ತನಗರಿವಾಗದಂತೆ ಅವಳೂ ಅವನ ಪಕ್ಕದಲ್ಲಿ ಹೆಜ್ಜೆ ಹಾಕತೊಡಗಿದಳು.

ಒಂದು ಕ್ಷಣ ಬಿಟ್ಟು ಆತ ಮತ್ತೆ ಹೇಳಿದ:

" ಮುಂಜಾನೆ ಬಾವಿಯ ಮೇಲೆ ಭೆಟ್ಟಿಯಾದಾಗ ಒಂದು ಮಾತು ಹೇಳಲು ಮರೆತುಬಿಟ್ಟಿದ್ದೆ. ಅದನ್ನು ನಿಮಗೆ ಹೇಳುವತನಕ ಮನಸ್ಸಿಗೆ ಸಮಾಧಾನವಾಗುವಂತಿರಲಿಲ್ಲ. ಅದಕ್ಕೇ ಸಭೆಯಲ್ಲಿ ನಿಮ್ಮನ್ನು ಎದುರು ನೋಡುತ್ತ ಕೂತಿದ್ದೆ – ಸಭೆ ಮುಗಿದ ಬಳಿಕ ಹೇಳೋಣ ಅಂತ."

" ಏನದು ಅಂಥಾ ಮಾತು ?" ಅವಳು ಕೌತುಕದಿಂದ ಕೇಳಿದಳು.

" ನಿನ್ನೆ ನರಗುಂದನ ಬಾಯಿಯಿಂದ ನಿಮಗೆ ನೋವಾದದ್ದು ಕೇಳಿ ಬಹಳ ಫೀಲಾಗಿತ್ತು. ಅದಕ್ಕೇ ಅಂತ ಕಾಣುತ್ತದೆ, ರಾತ್ರಿ ಒಂದು ಕನಸಾಯಿತು. ಬಹಳ ಭಯಂಕರ ಕನಸು...."

ಅವಳಿಗೆ ವಿಸ್ಮಯವಾಗದಿರಲಿಲ್ಲ. ರಾತ್ರೆಯಿಡೀ ಅವಳಿಗೂ ನಿದ್ದೆ ಬಂದಿರಲಿಲ್ಲ. ರಾಮಣ್ಣ, ಫೌಜದಾರರ ಪ್ರಸ್ತಾಪವೆತ್ತಿದ ಕ್ಷಣದಿಂದ ಅವಳ ಬಗೆಗಣ್ಣಿನೆದುರಿಗೆ ಬಗೆ ಬಗೆಯ ಚಿತ್ರಗಳು ಮೂಡತೊಡಗಿದ್ದುವು. ತನ್ನ ಮನಸ್ಸಿಗೆ ವಿರುದ್ಧವಾಗಿ ಅಣ್ಣ ಆ ವಿವಾಹವನ್ನು ನಿಶ್ಚಯಿಸಿದ ಹಾಗೆ, ತಂದೆ ಯನ್ನು ನೋಯಿಸಲಿಷ್ಟಪಡದೆ ತಾನು ಆ ಫೌಜದಾರರನ್ನು ಮದುವೆಯಾಗಲು ಒಪ್ಪಿದ ಹಾಗೆ, ಸಂಸಾರದ ರೂಪದಲ್ಲಿ ದೊಡ್ಡದೊಂದು ಶೂನ್ಯ ತನ್ನನ್ನು ಕಬಳಿಸಿದ ಹಾಗೆ, ದುಃಖದ ಆ ಮಹಾಸಾಗರದಲ್ಲಿ ತಾನು ಮುಳುಗಿಹೋದ ಹಾಗೆ, ತನ್ನ ಜೀವನವೆಲ್ಲ ವ್ಯರ್ಥವಾದ ಹಾಗೆ – ಇನ್ನೂ ಏನೇನೋ ಕಲ್ಪನೆಗಳು ನುಗ್ಗಿ ಬಂದು ಅವಳನ್ನು ರಾತ್ರೆಯಿಡೀ ಅಸ್ವಸ್ಥಳನ್ನಾಗಿಸಿದ್ದುವು. ಮಧ್ಯೆ

ಮಧ್ಯೆ ಸದಾನಂದನನ್ನು ಜ್ಞಾಪಿಸಿಕೊಂಡು ಅವಳು ಉಸಿರುಗರೆದಿದ್ದಳು. ತಾನು ತನ್ನ ಕೊಟಡಿಯಲ್ಲಿ ಅವನನ್ನು ಸ್ಮರಿಸುತ್ತ ಹಾಸಿಗೆಯಲ್ಲಿ ಹೊರಳಾಡುತ್ತಿದ್ದ ಹಾಗೆ ತನ್ನ ಕನವರಿಕೆ ಗಾಳಿಯಲ್ಲಿ ಹರಿದು ಅವನ ಕೊಟಡಿಯಲ್ಲಿ ನುಗ್ಗಿ ಅವನ ಕನಸಿನಲ್ಲಿ ಕೂಡಿಕೊಂಡಿತೇ ಹೇಗೆ?

ಪುಲಕಿತ ಹೃದಯದಿಂದ ಅವಳು ಕೇಳಿದಳು:

"ಏನಾಯಿತು ಕನಸಿನಲ್ಲಿ?"

ಕನಸಿನಲ್ಲಿ ವಿಲಕ್ಷಣ ದೃಶ್ಯವೊಂದನ್ನು ಕಂಡ ಎಳೆ ಹುಡುಗನೊಬ್ಬ ತಾಯಿಯೆದುರಿಗೆ ಅದನ್ನು ಬಣ್ಣಿಸುವ ಧಾಟಿಯಲ್ಲಿ ಸದಾನಂದ ಹೇಳತೊಡಗಿದ:

"ಕೇಳಿ ನೀವು ನಗಬಾರದು ಮತ್ತೆ. ಎತ್ತರದ ಗುಡ್ಡವೊಂದರ ಮೇಲೆ ನೀವು ಮತ್ತು ನಾನು ನಿಂತುಕೊಂಡಿದ್ದ ಹಾಗೆ ಮೊದಲು ಕನಸಾಯಿತು. ಗುಡ್ಡದ ಕೆಳಗೆ ಭಯಂಕರ ಆಳವಾದ ಕೊಳ್ಳ. ಅದರಲ್ಲಿದ್ದದ್ದೇನೂ ಕಾಣುತ್ತಿರಲಿಲ್ಲ. ಬರೀ ಕತ್ತಲೆಯೇ ಕತ್ತಲೆ. ಕತ್ತಲೆಯಿಂದ ತುಂಬಿದ ಭಯಂಕರ ಬಾವಿಯ ಹಾಗೆ ಕಾಣುತಿತ್ತು ನೋಡಿರಿ ಆ ಕೊಳ್ಳ. ಒಮ್ಮಿಂದೊಮ್ಮೆಲೆ ನೀವು ಕಾಲುಜಾರಿ ಆ ಕತ್ತಲೆಗೆ ಬಿದ್ದುಬಿಟ್ಟಿರಿ. ಹಾ ಅಂತ ಚೀರಿ ನಿಮ್ಮನ್ನು ಹಿಡಿದುಕೊಳ್ಳಲು ನಾನು ಮುಂದಾದೆ. ನೀವು ಸಿಕ್ಕಲಿಲ್ಲ. ಏನನ್ನೂ ಮಾಡಲು ಸಾಧ್ಯವಿಲ್ಲದೆ ನಾನು ಬೆಪ್ಪನ ಹಾಗೆ ನಿಂತಲ್ಲೇ ನಿಂತುಕೊಂಡಿದ್ದೆ. ಅಷ್ಟರಲ್ಲಿ ಇನ್ನೂ ಭಯಂಕರ ದೃಶ್ಯ. ಕೆಳಗೆ ಬಿದ್ದಿದ್ದ ನಿಮ್ಮ ಶರೀರ ಒಮ್ಮಿಂದೊಮ್ಮೆಲೆ ಕೊಳ್ಳದ ವರ್ತುಲದಲ್ಲಿ ಮೇಲಿಂದ ಕೆಳಕ್ಕೆ ಗರಗರನೆ ತಿರುಗತೊಡಗಿತು. ಅದನ್ನು ನೋಡಲಾರದೆ ನಾನು ಮತ್ತೆ ಕೂಗಿಕೊಂಡೆ. ಆಗ ಎಚ್ಚರವಾಯಿತು."

ಕನಸಿನ ವರ್ಣನೆಯನ್ನು ಮುಗಿಸಿ ಆತ ತನ್ನ ವಿಸ್ಫುರಿತ ನೇತ್ರಗಳನ್ನು ಅವಳತ್ತ ತಿರುಗಿಸಿ ಮುಗುಳ್ನಗೆ ಬೀರುತ್ತ ಕೇಳಿದ:

"ಈಗ ಹೇಳಿರಿ. ಕನಸು ಭಯಂಕರ ಹೌದೋ ಅಲ್ಲವೋ?"

"ಭಯಂಕರ ಅನ್ನುವದೇನೋ ನಿಜ."

"ಎಚ್ಚರವಾದ ಕೂಡಲೆ ನನಗನ್ನಿಸಿತು...." ಎಂದು ನುಡಿದು ನಡುವೆಯೆ ತಡೆದು ಆತನೆಂದ. "ಏನನ್ನಿಸಿತು ಹೇಳಲೇ? ನೀವೇನೂ ತಿಳಿದುಕೊಳ್ಳಬಾರದು ಮತ್ತೆ!"

"ಇಲ್ಲ. ಹೇಳಿರಿ."

"ನನಗನ್ನಿಸಿತು....ಕನಸಿನಲ್ಲಿ ನಾನು ಕಂಡ ಹಾಗೆ ನೀವು ನಿಜವಾಗಿ ಯಾವುದೋ ಗಂಡಾಂತರದಲ್ಲಿ ಬೀಳುವ ಸಂಭವವಿದೆಯೇನೊ ಎಂದು ಅನ್ನಿಸಿತು."

"ಮುಂದೆ ಆಗುವ ಘಟನೆಗಳೆಲ್ಲ ಕನಸಿನಲ್ಲಿ ಕಾಣುತ್ತವೆಂದು ಕೆಲವರು ಹೇಳುತ್ತಾರಲ್ಲ? ಈ ಬಗ್ಗೆ ನೀವೇನಾದರೂ ಓದಿಕೊಂಡಿದ್ದೀರಾ?" ಎಂದು ಅವಳು ಕೇಳಿದಳು.

"ಎಂದೋ ಒಮ್ಮೆ ಯಾವುದೋ ಪತ್ರಿಕೆಯಲ್ಲಿ ಒಂದು ಲೇಖವೋದಿದಂತೆ ನೆನಪು." ಆತ ಕೊಂಚ ನಕ್ಕು ಮುಂದೆ ಹೇಳಿದ: "ನಿಮಗೆ ಗೊತ್ತಿಲ್ಲವೇ? ನನಗೆ ನೆನಪಿನ ಶಕ್ತಿ ಅಷ್ಟಕ್ಕಷ್ಟೆ. ನನ್ನ ತಾಯಿ ನನಗೆ ಮರಗುಳಿ ಅಂತ ಇನ್ನೊಂದು ಹೆಸರನ್ನೇ ಇಟ್ಟಿದ್ದಾರೆ. ಮೊನ್ನೆ ಏನಾಯಿತೆಂದಿರಿ, ಯಾವದೋ ಧ್ಯಾನದಲ್ಲಿದ್ದವನು ಕಾಲೇಜಿಗೆ ಹೋಗುವದನ್ನು ಮರೆತು ಹುಚ್ಚರಾಸ್ಪತ್ರೆಗೆ ಹೋಗಿಬಿಟ್ಟಿದ್ದೆ."

ಅವಳೂ ಮನಸೋಕ್ತವಾಗಿ ನಕ್ಕಳು.

"ಅಲ್ಲಿಗೆ ಹೋದಮೇಲಾದರೂ ನಿಮ್ಮ ತಪ್ಪು ತಿಳಿದು ಬಂದಿರಬೇಕಲ್ಲ?"

ಆಸ್ಪತ್ರೆಯ ಮುಂದಿದ್ದ ಸಿಪಾಯಿ ತಡೆದು ನಿಲ್ಲಿಸಿದಾಗ ಗೊತ್ತಾಯಿತು. ಸರಿ, ನಾನೊಂದು ದಿನ ಇಲ್ಲಿಗೇ ಬರಬೇಕಾಗುವದೇನೊ ಅಂದುಕೊಳ್ಳುತ್ತಾ ಮತ್ತೆ ಒಂದು ಮೈಲು ನಡೆದು ಕಾಲೇಜಿಗೆ ಹೋದೆ."

"ಇಂಥ ಮರೆವಿನ ಸ್ವಭಾವದವರು ನೀವು ಪಾಠಗಳನ್ನಾದರೂ ಹ್ಯಾಗೆ ನೆನಪಿಟ್ಟುಕೊಳ್ಳುತ್ತೀರಿ?"

"ಅದರ ಗುಂಗಿನಲ್ಲೇ ಇರುತ್ತೇನಲ್ಲ. ಅವು ಹ್ಯಾಗೆ ಮರೆವಾದಾವು?"

ಮಾಮಲೆದಾರರ ಕಚೇರಿಯೆದುರಿಗೆ ಹಾಯ್ದು ಅವರು ಗಿಡಗಳ ಕೆಳಗೆ ನಡೆದುಬರುತ್ತಿದ್ದ ಹಾಗೆ ಕೆಲದಿನಗಳ ಹಿಂದೆ ತಾನು ಅಲ್ಲಿ ಕುಳಿತು ರೊಟ್ಟಿ ತಿಂದುದರ ನೆನಪು ಬಂತು ಸದಾನಂದನಿಗೆ. ಆ ಜಾಗ ಅವನಿಗೆ ತುಂಬ ಪ್ರಿಯವಾಗಿ ತೋರಿತು. ಕಚೇರಿ ಯಾವಾಗಲೋ ಮುಚ್ಚಿದ್ದಿತಾದುದರಿಂದ ಅಲ್ಲಿ ಯಾರ ಸುಳಿವೂ ಇರಲಿಲ್ಲ.

"ಸ್ವಲ್ಪ ಕುಳಿತು ಹೋಗೋಣವೇ?" ಎಂದು ಆತ ಕೊಂಚ ಸಂಕೋಚ

ದಿಂದಲೇ ಕೇಳಿದ. ಅವಳು ನಗುತ್ತಾ ಕತ್ತು ಕೊಡಹುತ್ತಲೂ ಆತ ಸಂತಸ ದಿಂದ ಬಾಗಿ ತನ್ನ ಕೈವಸ್ತ್ರವನ್ನು ನೆಲದ ಮೇಲೆ ಹಾಸಿ,

"ಇಲ್ಲಿ....ಇದರ ಮೇಲೆ ಕುಳಿತುಕೊಳ್ಳಿರಿ," ಎಂದ.

"ಛೆ. ಅದನ್ನ್ಯಾಕೆ ಹೊಲಸು ಮಾಡ್ತೀರಿ?" ಎಂದು ಅವಳು ಆಕ್ಷೇಪಿ ಸಿದಳು.

"ಹೊಲಸಾದರೆ ಅವರ ಪುಣ್ಯ," ಎಂದು ಆತ ಥಟ್ಟನೆ ನುಡಿದ. ಅವಳು ಲಜ್ಜಿತಳಾಗಿ ಕಣ್ಣುಗಳ ಮೂಲೆಗಳಿಂದ ಅವನನ್ನು ವೀಕ್ಷಿಸುತ್ತ ಎಡಗೈಯನ್ನು ನೆಲಕ್ಕೂರಿ ಕುಳಿತುಕೊಂಡಳು.

"ಹೊಲಸಾದರೂ ಏನಂತೆ ಬಿಡಿರಿ. ಇದೇನು ಸಿಲ್ಕ್ ಸೀರೆಯಲ್ಲವಲ್ಲಾ!"

ಮುಗ್ಧಸಂತೋಷದಿಂದ ಪ್ರಫುಲ್ಲಿತವಾಗಿದ್ದ ಅವನ ಮುಖದ ಮೇಲೆ ವಿಷಾದದ ನೆರಳೊಂದು ಕಾಣಿಸಿಕೊಂಡಿತು.

"ಇದು ವಾಯಲ್ ಸೀರೆಯಲ್ಲವೆ? ಇದುವರೆಗೆ ನನ್ನ ಲಕ್ಷ್ಯಕ್ಕೇ ಬಂದಿರಲಿಲ್ಲ." ಒಂದು ಕ್ಷಣ ಸುಮ್ಮನಿದ್ದು ಆತ ಮತ್ತೆ ಹೇಳಿದ: "ಸಿಲ್ಕ್ ಸೀರೆಯಲ್ಲಿ ನೀವು ಹ್ಯಾಗೆ ಕಾಣಿಸಬಹುದೋ ಅಂತ ನನಗೆ ಕುತೂಹಲ."

ಅವಳು ಕೊರಳನ್ನು ಹಿಂದೆ ಹೊರಳಿಸಿ ಒಂದು ಸಲ ನಕ್ಕಳಷ್ಟೆ. ಮಾತ ನಾಡಲಿಲ್ಲ.

"ಹೋಗಲಿ ಬಿಡಿರಿ. ಸಿಲ್ಕಿನಲ್ಲಾದರೂ ಏನಿದೆ? ಎಂಥ ಸಾದಾ ಸೀರೆ ಯಲ್ಲೂ ನೀವು ಚೆಂದಾಗಿಯೆ ಕಾಣುತ್ತೀರಿ."

ಆಕೆ ಮತ್ತೆ ಮುಗುಳ್ನಕ್ಕು ಪಡುವಲದ ಕಡೆ ದೃಷ್ಟಿ ತಿರುಗಿಸಿದಳು. ಗಿಡಗಳ ಆಚೆ ಗುಡ್ಡದಡಿಯಲ್ಲಿ ಸೂರ್ಯ ನಿಧಾನವಾಗಿ ಇಳಿಯುತ್ತಿದ್ದ. ಬಣ್ಣ ಬಣ್ಣಗಳ ಅರಳೆಯ ಛತ್ತನ್ನು ಹೊದಿಸಿದಂತೆ ಕಾಣುತ್ತಿತ್ತು ಆಕಾಶ. ಗಾಳಿಗೆ ಓಡುತ್ತಿದ್ದ ಮುಗಿಲುಗಳ ನೆರಳು ನೆಲದ ಮೇಲೂ ಮೂಡತೊಡಗಿದ್ದುವು. ಹಸುರು ತುಂಬಿ ನಿಂತಿದ್ದ ಮಾವಿನ ಮರಗಳ ಕಂಪು ಹವೆಯಲ್ಲಿ ಬೆರೆತು ಕೊಂಡಿತ್ತು.

"ಬಹಳ ಚೆಂದಾಗಿದೆಯಲ್ಲವೇ ಸಂಜೆ?" ಎಂದ ಸದಾನಂದ.

"ಗ್ರ್ಯಾಂಡ್," ಎಂದಳು ಶಾಂತಾ.

"ಉಷಃಕಾಲ ಸಾಯಂಕಾಲಗಳ ಚೆಲುವನ್ನು ನೋಡುತ್ತಿದ್ದಾಗಲೆಲ್ಲ

ನನಗನ್ನಿಸುತದೆ – ಈ ಜಗತ್ತಿನ ಜನರು ಹಣದ ಹುಚ್ಚಿಗೆ ಬಿದ್ದು ಎಷ್ಟು ರುಕ್ಷ ಜೀವನ ನಡಸುತ್ತಾರಲ್ಲಾ ಅಂತ...."

"ಇಂದಿನ ಜಗತ್ತು ನಿಂತಿರುವದೇ ಹಣದ ಮೇಲೆ."

"ನೀನನ್ನುವದೇ ನಿಜ. ಹಣದ ಮುಂದೆ ಇನ್ನಾವದರ ಮಹತ್ವವೂ ಉಳಿದಿಲ್ಲ. ನನ್ನಂಥ ನಿಮ್ಮಂಥ ಎಷ್ಟು ಜೀವಗಳು ಸಂಕಟಪಡುತ್ತಿವೆಯೊ ಈ ಹಣ ಪ್ರಪಂಚದಲ್ಲಿ...."

ಆತ ಆ ಮಾತು ಆಡುತ್ತಲೂ ತನ್ನ ಮದುವೆಯ ಸಮಸ್ಯೆ ಮತ್ತೆ ಭೂತಾಕಾರ ತಳೆದು ಅವಳೆದುರು ಸುಳಿಯಿತು. ಆ ಭೂತದಿಂದ ತಾನು ಮುಕ್ತಳಾಗುವುದು ಹೇಗೆ? ಸದಾನಂದ ತನ್ನನ್ನು ಮುಕ್ತಗೊಳಿಸಬಹುದೇ? ಅದು ಸಾಧ್ಯವೇ ಹೇಗೆ? ತನ್ನ ಮನಸ್ಸಂತೂ ಅವನನ್ನು ಬಯಸುತ್ತಿದೆ. ತನ್ನ ಹಾಗೆ ಅವನೂ ತನ್ನನ್ನು ಪ್ರೀತಿಸಲು ಮೊದಲು ಮಾಡಿರಬಹುದೇ? ಯಾರು ಬಲ್ಲರು?

"ಕತ್ತಲಾಗುತಾ ಬಂತು. ಏಳಿರಿ, ಹೋಗೋಣ," ಎಂದ ಸದಾನಂದ.

ಅವಳು ಕೊಂಚ ಬೆಚ್ಚಿ ಅವಸರದಿಂದ ಎದ್ದುಬಿಟ್ಟಳು. ಅಷ್ಟು ಬೇಗ ಅಲ್ಲಿಂದ ಹೊರಡಲು ಅವಳ ಮನಸ್ಸು ಒಪ್ಪದಾಯಿತು. ಕತ್ತಲಾಗುವವರೆಗೂ ಅಲ್ಲಿಯೆ ಅವನೊಡನೆ ಮಾತನಾಡುತ್ತ ಕುಳಿತುಕೊಳ್ಳಬೇಕು, ಆಡಬೇಕಾದು ದೆಲ್ಲವನ್ನೂ ಈಗಲೇ ಆಡಿಬಿಡಬೇಕು, ಅವನು ತನ್ನನ್ನು ಪ್ರೀತಿಸುವುದು ನಿಜವೋ ಅಲ್ಲವೋ ಎಂಬುದನ್ನು ಇತ್ಯರ್ಥಗೊಳಿಸಿಕೊಂಡೇ ಇಲ್ಲಿಂದ ಹೊರಡ ಬೇಕು ಎಂದು ಅವಳಿಗೆನ್ನಿಸುತ್ತಿತ್ತು. ಆತ ತನ್ನನ್ನು ಪ್ರೀತಿಸುವುದೇ ನಿಜವಿದ್ದಲ್ಲಿ, ಬೆಳಕು ಮಾಯವಾದ ಬಳಿಕ ತನ್ನ ಕೈಯನ್ನಾತ ಹಿಡಿಯಬಹುದು, ತನ್ನನ್ನು ಬರಸೆಳೆದು ಅಪ್ಪಿಕೊಂಡು ಚುಂಬಿಸಬಹುದು. ಚುಂಬನ....ತನ್ನ ಹೃದಯವನ್ನು ಗೆದ್ದುಕೊಂಡ ಗಂಡಿನ ಪ್ರಥಮ ಚುಂಬನ....ಅವಳ ಶರೀರದಲ್ಲೆಲ್ಲ ಕಾವೇರಿ ಅವಳನ್ನು ಸೂಕ್ಷ್ಮವಾಗಿ ನಡುಗಿಸತೊಡಗಿತ್ತು. ಅವನ ಎದೆಯ ಮೇಲೆ ತಲೆಯನ್ನೊರಗಿಸಿ ಅವನ ವ್ಯಕ್ತಿತ್ವದಲ್ಲಿ ತನ್ನ ವ್ಯಕ್ತಿತ್ವವನ್ನು ಲೀನಗೊಳಿಸ ಬೇಕು, ಮುನ್ನಾದಿನದ ಇರುಳಿನಿಂದ ತನ್ನನ್ನು ಕಬಳಿಸಲು ನುಗ್ಗಿಬರುತ್ತಿರುವ ಭೂತದಿಂದ ತಪ್ಪಿಸಿಕೊಳ್ಳಬೇಕು ಎಂದು ಆಕೆ ಯೋಚಿಸುತ್ತಿದ್ದಳು. ಅವಳ

ಎದೆಯಲ್ಲಿ ತುಂಬಿ ಬಂದ ಈ ಭಾವನೆಗಳನ್ನರಿತುಕೊಳ್ಳಬಲ್ಲ ಕೌಶಲ ಅವನಲ್ಲಿ ಕೊಂಚವೂ ಇರಲಿಲ್ಲ. ಕತ್ತಲಾದ ಬಳಿಕ ತಾವಿಬ್ಬರೇ ಹೀಗೆ ಏಕಾಂತದಲ್ಲಿ ಕುಳಿತಿರುವುದು ಉಚಿತವಲ್ಲವೆಂದು ಯೋಚಿಸಿ ಆತ ಎದ್ದುಬಿಟ್ಟದ್ದ.

ಕೊಂಚ ದೂರ ಬಂದಾಗ ಅವಳಿಗೆ ಅವನ ಕರವಸ್ತ್ರದ ಜ್ಞಾಪಕ ಬಂದಿತು. ಅವನದಂತೂ ಮೊದಲೇ ಮರೆವಿನ ಸ್ವಭಾವ; ತನಗೂ ಅದರ ನೆನಪು ಉಳಿದಿರಲಿಲ್ಲ!

"ಈಗ ನೀವು ಏನನ್ನು ಮರೆತುಬಂದಿರಿ ಗೊತ್ತೇ ?"

ಆತ ತಡೆದು ನಿಂತು ಕೂದಲುಗಳಲ್ಲಿ ಬೆರಳುಗಳನ್ನಾಡಿಸುತ್ತ ಗೊಂದಲದ ದನಿಯಲ್ಲಿ ಕೇಳಿದ:

"ಏನೋ ನೆನಪಾಗಲೊಲ್ಲದು. ಏನು ?"

"ಕೈವಸ್ತ್ರ," ಅವಳು ಮೋಹಕವಾಗಿ ನಗುತ್ತ ನುಡಿದಳು.

"ಓ, ಹೌದು, ಹೌದು. ಥ್ಯಾಂಕ್ಸ್," ಎಂದು ಪುಟುಪುಟಿಸುತ್ತ ಆತ ಓಡಿಹೋಗಿ ವಸ್ತ್ರವನ್ನು ತೆಗೆದುಕೊಂಡು ಬಂದ.

"ನಾನು ನೆನಪು ಮಾಡದಿದ್ದರೆ ಅದು ಕಳೆದೇ ಹೋಗುತಿತ್ತು, ಅಲ್ಲವೆ ?"

"ಮತ್ತೆ! ಹೀಗೆ ನಾ ಕಳೆದುಕೊಂಡ ವಸ್ತ್ರಗಳಿಗೆ ಲೆಕ್ಕವಿಲ್ಲ."

"ಕಳೆದುಕೊಂಡ ಸಂದರ್ಭಗಳಿಗೂ ಲೆಕ್ಕವಿರಲಿಕ್ಕಿಲ್ಲ," ಎಂದು ತನ್ನಲ್ಲಿಯೆ ಹೇಳಿಕೊಂಡಳು ಶಾಂತಾ.

ಕಚೇರಿಯ ಪ್ರಾಂಗಣವನ್ನು ದಾಟಿ ಅವರು ವಿಸ್ತರಣದ ರಸ್ತೆಗೆ ಬಂದು ಮುಟ್ಟಿದಾಗ ಎದುರಿಗಿದ್ದ ಲಿಂಗಪ್ಪನವರ ಬಂಗಲೆಯತ್ತ ಸದಾನಂದನ ದೃಷ್ಟಿ ಸಹಜವಾಗಿ ಹೊರಳಿತು. ಆ ಬಂಗಲೆಯ ಅಂಗಳದಲ್ಲಿನ ಮಾವಿನ ಗಿಡಗಳ ಕೆಳಗೆ ಕುಳಿತು ಅಭ್ಯಾಸ ಮಾಡಬೇಕೆಂದಿದ್ದ ತನ್ನ ಯೋಚನೆಯ ಜ್ಞಾಪಕ ಬಂದು ಆತ ನಗತೊಡಗಿದ.

"ಏನು ಬಹಳ ನಗುತ್ತಿದ್ದೀರಿ ?" ಎಂದು ಶಾಂತಾ ಕೇಳುತ್ತಿದ್ದ ಹಾಗೆ ಬಂಗಲೆಯ ಮುಂದೆ ನಿಂತುಕೊಂಡಿದ್ದ ಲಿಂಗಪ್ಪನವರು ಇವರಿಬ್ಬರನ್ನೂ ಕಂಡು ಗೇಟಿನ ಬಳಿ ಬಂದು ಕೂಗಿದರು:

"ಸದಾನಂದಾ."

ಆತ ಕಣ್ಣು ಪಿಳುಕಿಸುತ್ತ ಅವರ ಹತ್ತಿರ ಬಂದ.

" ಎಲ್ಲಿಂದ ಬಂದೆ ಸದಾನಂದಾ? ಇವಳು ಯಾರು ಈ ಹುಡುಗಿ? ಬ್ರಾಹ್ಮಣರವಳಂತೆ ಕಾಣುವಳಲ್ಲ?"

" ಹೌದು, ಹೌದು. ಅವರ ಹೆಸರು ಶಾಂತಾ ಅಂತ. ನಮ್ಮ ಕಾಲೇಜಿನಲ್ಲೇ ಇದಾರೆ. ಅಲ್ಲಿಂದಲೇ ಬಂದೆವು. ಇವರ ಮನೆಯ ಹತ್ತರದ ರೂಮಿನಲ್ಲೇ ನಾನಿರುವದು."

" ಹೀಗೇನು?" ಎಂದು ವಿಲಕ್ಷಣವಾದ ದನಿಯಲ್ಲಿ ಕೇಳಿದರು ಲಿಂಗಪ್ಪ.

" ಹೋಗುತೇನೆ. ಹೊತ್ತಾಯಿತು," ಎಂದವನೆ ಅಲ್ಲಿ ನಿಲ್ಲದೆ ಮುಂದೆ ಸಾಗಿದ ಸದಾನಂದ. ಶಾಂತಾ ಆಗಲೆ ದೂರ ಹೋಗಿ ಅವನಿಗಾಗಿ ಕಾಯುತ್ತಿದ್ದಳು. ಅವನು ಸಮೀಪಿಸುತ್ತಲೂ ಅವಳು ಕೇಳಿದಳು:

" ಯಾರವರು ಸದಾನಂದಾ?

ಅವರು ಯಾರೆಂಬುದನ್ನು ಆತ ವಿವರಿಸುತ್ತಲೂ ಅವಳು ಕೊಂಚ ಗಾಬರಿಗೊಂಡ ದನಿಯಲ್ಲಿ,

" ನಾನ್ಯಾರೆನ್ನುವದನ್ನ ಹೇಳಿದಿರಾ ಅವರಿಗೆ?" ಎಂದಳು.

" ನೀವು ಯಾರು ಅಂತ ಕೇಳಿದರು. ನಿಮ್ಮ ಮನೆಯ ಹತ್ತರವೇ ನಮ್ಮ ರೂಮಿದೆ ಅಂತ ಹೇಳಿದೆ, ಅಷ್ಟೆ. ಯಾಕೆ? ಹೇಳಬಾರದಾಗಿತ್ತೇ?"

" ಹಾಗೇನಿಲ್ಲ, ಹಾಗೇನಿಲ್ಲ," ಎಂದಿಷ್ಟೆ ನುಡಿದು ಆ ವಿಷಯವನ್ನಾಕೆ ಅಲ್ಲಿಗೇ ನಿಲ್ಲಿಸಿದಳು. ಆದರೂ ಅವಳ ಎದೆಯಲ್ಲಿ ಯಾವುದೋ ಅವ್ಯಕ್ತ ಭೀತಿ ಮತ್ತೆ ಮತ್ತೆ ಹೆಡೆಯಾಡತೊಡಗಿತು.

## ೧೧

ವಠಾರಕ್ಕೆ ಬಂದು ತಲುಪಿದೊಡನೆ ಶಾಂತಾ ತನ್ನ ಮನೆ ಸೇರಿ ಕಣ್ಮರೆಯಾಗುತ್ತಲೂ ತಾನು ಏನನ್ನು ಕಳೆದುಕೊಂಡಂತೆ ಭಾಸವಾಯಿತು ಸದಾನಂದನಿಗೆ. ಕನಸಿನಲ್ಲಿ ನಡೆಯುವಂತೆ ನಡೆಯುತ್ತ ಆತ ತನ್ನ ಕೊಟಡಿಯ ಬಳಿ ಬಂದು ಕಟ್ಟೆಯನ್ನೇರಿ ಜೇಬಿಗೆ ಕೈಹಾಕಿ ಬೀಗದ ಕೈಯನ್ನು ಹೊರದೆಗೆದು ಯಾಂತ್ರಿಕವಾಗಿ ಬೀಗ ತೆಗೆಯಲು ಯತ್ನಿಸ ತೊಡಗಿದ. ಆದರೆ ಅಲ್ಲಿ ಬೀಗವೇ ಇರಲಿಲ್ಲ.

"ಎಲಾ, ಬೀಗ ಎಲ್ಲಿ ಹೋಯಿತು?" ಎಂದುಕೊಳ್ಳುತ್ತ ಆತ ಬಾಗಿಲನ್ನು ನೂಕಿದ. ಬಾಗಿಲು ಓರೆಯಾಗಿ ವಿದ್ಯುದ್ದೀಪದ ಪ್ರಖರ ಬೆಳಕು ಅವನ ಮೇಲೆ ಸುರಿಯಿತು. ಆತ ಕಣ್ಣು ಪಿಳುಕಿಸುತ್ತ ಮೂಢನಂತೆ ಒಳಸೇರಿದ. ತನ್ನಷ್ಟಕ್ಕೆ ತಾನೇ ನಕ್ಕು ಮನಸ್ಸಿನಲ್ಲಿಯೆ ಹೇಳಿಕೊಂಡ: "ಇಂದು ಏನಾಗಿದೆ ನನಗೆ? ಹೀಗೇಕೆ ಮಾಡುತ್ತಿದೇನೆ ನಾನು ಹುಚ್ಚನ ಹಾಗೆ?"

ತಾನು ಹಾಗೆ ಆಚರಿಸುವುದಕ್ಕೇನು ಕಾರಣವೆಂಬುದು ಹಠಾತ್ತಾಗಿ ಅವನಿಗೆ ಹೊಳೆಯಿತು. ಅಂದು ತಾನು ಶಾಂತಳೊಡನೆ ಹಲವು ಗಂಟೆಗಳನ್ನು ಕಳೆದಿದ್ದ....ಅವಳೊಡನೆ ಮುಕ್ತಮನದಿಂದ ಮಾತನಾಡಿದ್ದ....ಅವಳೂ ಹಸನ್ಮುಖದಿಂದ ತನ್ನೊಡನೆ ಮಾತನಾಡಿದ್ದಳು. ಆ ಕರವಸ್ತ್ರದ ಸನ್ನಿವೇಶ....

ಮತ್ತೆ ಅವನಿಗೆ ನಗು ಬಂದಿತು. ಕೈಯಲ್ಲಿದ್ದ ಪುಸ್ತಕಗಳನ್ನು ಕಪಾಟಿನಲ್ಲಿಟ್ಟು ಆತ ವಿರಾಮ ಕುರ್ಚಿಯಲ್ಲಿ ದೇಹ ಚೆಲ್ಲಿದ. ಮತ್ತೆ ಅವನ ಮನಸ್ಸು

ಗೊಂದಲದಲ್ಲಿ ಸಿಲುಕಿದಂತಾಯಿತು. ಅವಳ ಸಹವಾಸದಲ್ಲಿ ತಾನು ಬಹಳ ಆನಂದದಿಂದ ಕಾಲ ಕಳೆದುದಾಗಿತ್ತು. ಆ ಆನಂದವನ್ನು ಮರೆಸುವಂಥ ಪ್ರಸಂಗ ಬರಬಾರದಾಗಿತ್ತು ಕೊನೆಗೆ. ಲಿಂಗಪ್ಪನವರು ತಮ್ಮನ್ನು ನೋಡಬಾರದಾಗಿತ್ತು....ಅವಳೇಕೋ ಬಹಳ ಭೀತಳಾದ ಹಾಗೆ ಕಾಣಿಸಿತ್ತು. ಛೆ. ಏನಾಯಿತಿದು? ತನ್ನಿಂದೇನಾದರೂ ತಪ್ಪಾಯಿತೇ? ಕತ್ತಲಾಗುವವರೆಗೆ ಅವಳೊಡನೆ ಅಲ್ಲಿ ಕುಳಿತದ್ದು ತಪ್ಪಾಯಿತೇನೊ.

ಆದರೂ....

ತನ್ನ ಜತೆಗೆ ಕುಳಿತಿರಲು ಅವಳಿಗೂ ಇಷ್ಟವಿದ್ದಿತಲ್ಲವೆ? ಅವಳ ಸಹವಾಸ ತನಗೆ ಪ್ರಿಯವೆನ್ನಿಸಿದ ಹಾಗೆ ತನ್ನ ಸಹವಾಸ ಅವಳಿಗೂ ಪ್ರಿಯವೆನ್ನಿಸಿರಬೇಕು. ಅವಳ ಮೋಹಕ ನಗೆ....ಅವಳ ಮಂಜುಳ ಸ್ವರ....ಅವಳ ಸುಂದರ ಹಾವಭಾವಗಳು....ಅವಳ ಕಣ್ಣುಗಳ ಚೆಲುವು....

ಥಟ್ಟನೆ ಕುರ್ಚಿಯಿಂದೆದ್ದ ಸದಾನಂದ. ಪುಸ್ತಕದಲ್ಲಿ ಮುಖವಿಟ್ಟು ಒರಗಿದ್ದ ಕೊಟಬಾಗಿಯನ್ನು ದಿಟ್ಟಿಸುತ್ತಾ ಆತ ತನ್ನಷ್ಟಕ್ಕೆ ತಾನೆ ಹೇಳಿಕೊಂಡ :

"ಎಲಾ, ಎಂಥ ಬೆಪ್ಪ ನಾನು! ಎಂಥ ಬೆಪ್ಪ!"

ಆತ ಪುನಃ ಕುರ್ಚಿಯಲ್ಲಿ ಕುಳಿತುಕೊಂಡ; ಕೈಗಳೆರಡನ್ನೂ ಕ್ರಾಪಿನ ಮೇಲಾಡಿಸುತ್ತ ಮತ್ತೆ ತನ್ನಷ್ಟಕ್ಕೆ ತಾನೆ ಹೇಳಿಕೊಂಡ :

"ಬೆಪ್ಪನೇ ಇರಬೇಕು ನಾನು. ಅಷ್ಟೂ ತಿಳಿಯಲಿಲ್ಲವಲ್ಲ ನನಗೆ! ಅವಳ ಅರಳಿದ ಮುಖ, ಮುಂದಹಾಸ, ಓರೆ ನೋಟ....ಪ್ರೇಮದ ಲಕ್ಷಣಗಳಲ್ಲವೇ ಇವುಗಳೆಲ್ಲ? ಆಗಲೆ ಹೇಗೆ ತಿಳಿಯಲಿಲ್ಲ ನನಗೆ. ಮತ್ತೆ ನಾನು ಕವಿಯಂತೆ! ಎಂಥ ಕವಿಯೊ....ಶುದ್ಧ ಕಪಿ!"

ಕೆಲಹೊತ್ತಿನ ಹಿಂದೆ ನಡೆದುದೆಲ್ಲ ಮತ್ತೆ ಅವನ ಬಗೆಗಣ್ಣಿನೆದುರಿಗೆ ಮೂಡತೊಡಗಿತು. ಎಡಗೈಯನ್ನು ಸೊಗಸಾಗಿ ನೆಲಕ್ಕೂರಿ ತನ್ನ ಕರವಸ್ತ್ರದ ಮೇಲೆ ಕುಳಿತಿದ್ದಳಾಕೆ. ಅವಳಿಗೆದುರಾಗಿ, ಅವಳ ಸನಿಯದಲ್ಲಿಯೆ ತಾನು ಕುಳಿತಿದ್ದ. ಅಂಥ ಹೆಣ್ಣನ್ನು ಅದುವರೆಗೂ ತಾನು ಕಂಡಿರಲಿಲ್ಲವೆಂದೇ ತೋರುತ್ತದೆ. ಹೆಂಗಸರ ಸಹವಾಸವೂ ಕಡಮೆಯೇ ತನಗೆ. ಅಂತೆಯೆ ಹೆಣ್ಣಿನ ಬಗೆಗೆ ತಾನು ಯೋಚಿಸಿದ್ದೂ ಕಡಮೆ. ಅದಕ್ಕೆ ಪುರಸತ್ತೂ ಇರಲಿಲ್ಲ

ವಲ್ಲ. ಆದರೂ....ಆದರೂ ಒಂದಿಲ್ಲೊಂದು ದಿನ ಒಬ್ಬಳನ್ನು ತಾನು ಪ್ರೀತಿಸ ಬೇಕಾಗುವುದೆಂಬುದು ಮಾತ್ರ ತನಗೆ ಗೊತ್ತಿದ್ದಿತು. ಆ ತನ್ನ 'ಅವಳಿಗಾಗಿ' ತನ್ನ ಸುಪ್ತ ಮನಸ್ಸು ಅತ್ಯಂತ ಆತುರತೆಯಿಂದ ಕಾಯುತ್ತಿದ್ದಿತೊ ಏನೊ ಯಾರು ಬಲ್ಲರು? ಹಾಗೂ ಇರಬಹುದು. ಅಂತೆಯೆ, ನಿನ್ನೆ ರಾತ್ರಿ ತನ್ನ ಕನಸಿನಲ್ಲಿ ಅವಳು ಕಾಣಿಸಿಕೊಂಡಿರಬೇಕು. ಅವಳನ್ನು ಕಂಡು ತನಗರಿಯ ದಂತೆಯೆ ತನ್ನ ಮನಸ್ಸು ಮರುಳಾಗಿರಬೇಕು. ಅಂದು, ವೆಂಕಟೇಶನ ರೂಮಿನಲ್ಲಿ ಮೊತ್ತ ಮೊದಲಬಾರಿ ಅವಳ ರೂಪು ಕಣ್ಣಿಗೆ ಬಿದ್ದಂದಿನಿಂದಲೂ ತನ್ನ ಖೋಡಿ ಮನಸ್ಸು ಅವಳ ಕಡೆಗೇ ಧಾವಿಸುತ್ತಿರಬೇಕು....ಇಂದು ಅವಳ ಮನಸ್ಸನ್ನು ಅದು ಮುಟ್ಟಿತೇನೊ. ಅವಳ ಆತ್ಮವನ್ನು ತನ್ನ ಆತ್ಮ ಅಪ್ಪಿ ಕೊಂಡಿತೊ ಏನೊ. ಅಂತೆಯೆ ಈ ಅನುಭವ....

"ಶಾಂತಾ, ನನ್ನ ಶಾಂತಾ, ನೀನು ನನ್ನ ಪ್ರೀತಿಸುತ್ತೀಯಾ?" ತನ್ನ ಮನಸ್ಸಿನ ಮೇಲೆ ಮೂಡಿದ್ದ ಅವಳ ಮೂರ್ತಿಯನ್ನು ಕುರಿತು ಆತ ಮೂಕವಾಗಿ ಪ್ರಶ್ನಿಸಿದ. ಆ ಮೂರ್ತಿ ರಹಸ್ಯಪೂರ್ಣ ನಗೆ ಬೀರಿ ಹಠಾತ್ತಾಗಿ ಅದೃಶ್ಯ ವಾದಂತಾಯಿತು.

"ಊಟವಾಯಿತೇನ್ರೀ?" ಕೊಟಬಾಗಿ ಕೇಳುತ್ತಿದ್ದ.

ಸದಾನಂದ ಬೆಚ್ಚಿ, ಅವನ ಕಡೆ ತಿರುಗಿ, "ಊಟ ಅಂದಿರಾ? ಇನ್ನೂ ಆಗಲಿಲ್ಲ, ಈಗ ಹೋಗುತ್ತೇನೆ," ಎಂದ. "ನೀವು?"

"ನನಗೇಕೋ ಇಂದು ಹಸಿವೇ ಇಲ್ಲ." ಬೇಸರದ ದನಿಯಲ್ಲಿ ನುಡಿದ ಕೊಟಬಾಗಿ.

"ಹಸಿವಿಲ್ಲ? ಯಾಕೆ?"

"ಏನೋ ಬಹಳ ಬೇಸರು ನೋಡಿರಿ. ಎಲ್ಲಾ ಬೇಸರು."

"ಯಾಕ್ರೀ, ಹೀಗೆ ಮಾತಾಡುತೀರಿ? ಏನಾಯಿತು ನಿಮಗೆ?"

"ಆಗುವುದೇನೂ ಉಳಿದಿಲ್ಲ. ಆಗಬೇಕಾದ್ದೆಲ್ಲ ಆಗಿಹೋಗಿದೆ."

"ಅರೆ, ಏನಿದು, ಇವತ್ತೊಂದು ತರಹಾ ಆಗಿದ್ದೀರಲ್ಲ? ಯಾರು ಏನಾದರೂ ಅಂದರೇ? ಸಾಲೆಯಲ್ಲೇನಾದರೂ ಜಗಳವಾಯಿತೇ?"

"ಜಗಳ ಎಲ್ಲಿಯದು ಬಿಡಿರಿ. ಹಾಗೆಲ್ಲ ಜಗಳವಾಡಲಿಕ್ಕೂ ಹೋಗುವವ ನಲ್ಲ ನಾನು."

"ಮತ್ತೆ ?"

"ಈ ಸಾಲೆಯ ನೌಕರಿ ಬಿಟ್ಟು ಎಲ್ಲಿಗಾದರೂ ಹೋಗಿಬಿಡೋಣ ಅಂತ ಅನ್ನಿಸುತಾ ಇದೆ ನೋಡಿರಿ."

"ನೌಕರಿ ಬಿಟ್ಟು ಏನು ಮಾಡುವವರು ಕೊಟಬಾಗಿ ?"

"ಏನಾದರೂ ಮಾಡಲು ಬಂದೀತು ಬಿಡಿರಿ. ಎಲ್ಲಾದರೂ ಹಿಡಿ ಅನ್ನ ಸಿಕ್ಕೀತು. ಈ ನೌಕರಿಯಿಂದಂತೂ ನನಗೆ ರೋಸಿಹೋಗಿದೆ."

"ಮತ್ತೇನಾಯಿತು ? ಹೆಡ್ಮಾಸ್ತರು ಏನಾದರೂ ಅಂದರೇ ?"

"ಅವರು ಅನ್ನುವದೂ ಏನೂ ಉಳಿದಿಲ್ಲ–ಅನ್ನಬೇಕಾದ್ದೆಲ್ಲ ಅಂದು ಬಿಟ್ಟಿದ್ದಾರೆ. ನಾನು ಈ ಸಾಲೆಗೆ ಸೇರಿದ್ದೇ ತಪ್ಪಾಯಿತು. ಕೂಲಿಮಾಡಿ ಹೊಟ್ಟೆ ಹೊರೆಯುವದು ಬೇಕು, ಇಂಥವರ ಕೈಯಲ್ಲಿ ಮಾಸ್ತರಕಿ ಮಾಡುವದು ಬೇಡ."

"ನಿಮ್ಮ ಹೆಡ್ಮಾಸ್ತರರು ಸ್ವಲ್ಪ ಕೋಪದ ಪ್ರಕೃತಿಯವರೆಂತ ಕೇಳಿದ್ದೇನೆ...."

"ಕೋಪವೇನು ಬಿಡಿರಿ. ಎಲ್ಲರೂ ಒಂದಿಲ್ಲೊಂದು ಸಲ ಕೋಪಿಸಿ ಕೊಳ್ಳುತ್ತಾರೆ. ಇವರು ನನ್ನ ಮೇಲೆ ಮತ್ತೆ ಮತ್ತೆ ಕೋಪಿಸಿಕೊಂಡರೂ ನನ ಗೇನು ವ್ಯಸನವಾಗಲಿಕ್ಕಿಲ್ಲ. ಆದರೆ ಇವರು ದ್ವೇಷಿಸುತ್ತಿದ್ದಾರೆ, ನನ್ನನ್ನು ವಿಷ ದಂತೆ ದ್ವೇಷಿಸುತ್ತಿದ್ದಾರೆ."

ಸದಾನಂದ ವಿಸ್ಮಿತನಾಗಿ ಕೇಳಿದ :

"ದ್ವೇಷಿಸುತ್ತಿದ್ದಾರೆಯೆ ? ಯಾಕೆ ? ನೀವೇನು ಮಾಡಿದ್ದೀರಿ ಅವರಿಗೆ ?"

ಕೈಯಲ್ಲಿದ್ದ ಪುಸ್ತಕವನ್ನು ಮೇಜಿನ ಮೇಲೆ ಬಿಸುಟಿ ಕೊಟಬಾಗಿ ನೆಟ್ಟಗೆ ಕುಳಿತುಕೊಂಡು ಭಾವಾತಿರೇಕದಿಂದ ಕಂಪಿಸುವ ದನಿಯಲ್ಲಿ ಹೇಳಿದ :

"ನಾನು ಮಾಡಿರುವ ಮೊದಲನೆಯ ಅಪರಾಧ ಅಂದರೆ ಬ್ರಾಹ್ಮಣ ರವನಾಗಿ ಹುಟ್ಟಿಬಂದದ್ದು. ಚೌಕೀಮಠ ಮಾಸ್ತರರ ದೃಷ್ಟಿಯಲ್ಲಿ ಅದೊಂದು ಮಹಾಪರಾಧ. ಬಿ.ಎ. ದಲ್ಲಿ ಮೊದಲನೆಯ ಕ್ಲಾಸ್ ತೆಗೆದುಕೊಂಡು ಪಾಸಾದದ್ದು ನನ್ನ ಎರಡನೆಯ ಅಪರಾಧ. ಚೌಕೀಮಠ ಮಾಸ್ತರರು ಥರ್ಡ್‌ಕ್ಲಾಸಿ ನವರಲ್ಲವೆ ? ಬೇರೆ ಕಡೆ ಎಲ್ಲಾದರೂ ಹಾಳಾಗುವದನ್ನು ಬಿಟ್ಟು ನಾನು ಅವರ ಸಾಲೆಯಲ್ಲಿಯೇ ಕೆಲಸ ಹಿಡಿದದ್ದು ನನ್ನ ಮೂರನೆಯ ಅಪರಾಧ....ತಮ್ಮ

ಹೈಸ್ಕೂಲ್ ಸ್ಟಾಫ್‌ನಲ್ಲಿ ಜನಿವಾರದವರೊಬ್ಬರೂ ಇರಬಾರದೆಂದು ಅವರ ಇಚ್ಛೆ. ಸ್ಕೂಲು ನಡಸುವ ಸಂಸ್ಥೆಯವರೂ ಜಾತ್ಯಂಧರೇ ಆದರೂ ಸಹ ಜನರ ಮಾತಿಗೆ ಭಯಪಡುವವರು. ಸ್ಟಾಫ್‌ನಲ್ಲಿ ಎಲ್ಲರೂ ಲಿಂಗಾಯತರೇ ಇದ್ದಲ್ಲಿ ಸಂಸ್ಥೆಗೆ ಜಾತೀಯ ಸ್ವರೂಪ ಬಂದೀತೆಂಬ ಅಂಜಿಕೆಯಿಂದ ಅವರು ನಾಮ ಮಾತ್ರಕ್ಕೆ ನನ್ನನ್ನು ತೆಗೆದುಕೊಂಡಿದ್ದಾರೆ. ಚೌಕೀಮಠರಿಗೆ ಅದು ಒಪ್ಪಿಗೆಯಾಗಲಿಲ್ಲ. ಸರಿ. ಅಂದಿನಿಂದ ನನ್ನನ್ನು ಹಿಡಿದು ಹಿಂಡಿ ಹೀರುತ್ತಿದ್ದಾರೆ. ನಾನು ಮಾಡಿದ ಕೆಲಸವೊಂದೂ ಅವರಿಗೆ ತೃಪ್ತಿಯಿಲ್ಲ. ಮಾಸ್ತರ ಜನರೆದುರಿನಲ್ಲೇ ನನ್ನನ್ನು ಹಂಗಿಸುತ್ತ ಬಂದಿದ್ದಾರೆ. ಇವತ್ತು ಅಂತೂ ಹಿಂಸೆಯ ಪರಮಾವಧಿಯಾಯಿತು...."

ಕೊಟಬಾಗಿ ಮಾತು ನಿಲ್ಲಿಸಿದ, ಒಂದು ಸಿಗರೇಟು ಹೊತ್ತಿಸಿ ಹೊಗೆಯೆಳೆಯುತ್ತಾ ಮುಂದುವರೆಸಿದ :

"ಇಂದು ಏಳನೆಯ ವರ್ಗಕ್ಕೆ ಕನ್ನಡ ಹೇಳುತ್ತಿದ್ದಾಗ ಅಕಸ್ಮಾತ್ತಾಗಿ ಬೇಂದ್ರೆಯವರ ಪ್ರಸ್ತಾಪ ಬಂತು. ಅವರ ವಿಷಯ ಹೇಳುತ್ತಾ ನಾನು ನನ್ನನ್ನೇ ಮರೆತೆನೆಂದು ತೋರುತ್ತದೆ. ಪಾಠ ಹೇಳುವದನ್ನು ನಿಲ್ಲಿಸಿ 'ಕುಣಿಯೋಣು ಬಾರs' ಅನ್ನತೊಡಗಿದೆ. ಹುಡುಗರು ಡೆಸ್ಕು ಬಡಿದು ನಗತೊಡಗಿದರು. ಆ ಗದ್ದಲವನ್ನು ಕೇಳಿ ಚೌಕೀಮಠ ಮಾಸ್ತರರು ನಮ್ಮ ಕ್ಲಾಸಿನೆದುರಿಗೆ ಹಾದು ಹೋದವರು ಪೀರಿಯಡ್ ಮುಗಿಯುತ್ತಲೂ ನಾನು ಟೀಚರ್ಸ್ ರೂಮಿಗೆ ಹೋದಾಗ ಕ್ರೂರವಾಗಿ ನಗುತ್ತಾ, ಇಲ್ಲಿ ನೀವು ಹುಡುಗರಿಗೆ ಪಾಠ ಹೇಳಲು ಬಂದಿದ್ದೀರೋ, ಕುಣಿಯಲು ಬಂದಿದ್ದೀರೋ? ಎಂದು ಕೇಳಿಬಿಟ್ಟರು. ರೂಮಿನಲಿದ್ದ ಇತರ ಮಾಸ್ತರರೆಲ್ಲ ಗೊಳ್ಳೆಂದು ನಕ್ಕರು. ಹೆಡ್ಮಾಸ್ತರರು ಅಷ್ಟಕ್ಕೇ ಸುಮ್ಮನಾಗದೆ, ಬೇಂದ್ರೆಯವರ ಪಬ್ಲಿಸಿಟಿ ಮಾಡಲೆಂದು ನಾವು ನಿಮ್ಮನ್ನಿಲ್ಲಿ ನೇಮಿಸಿಕೊಂಡಿಲ್ಲ ತಿಳೀತೇ? ಎಂದರು. ಅಪಮಾನದಿಂದಲೂ ಅಸಹನೆಯಿಂದಲೂ ನನ್ನ ಕಣ್ಣಲ್ಲಿ ನೀರು ಬರುವ ಹಾಗಾಯಿತು. ಅಲ್ಲಿ ಕೂಡ್ರದೆ ಎದ್ದು ಬಂದುಬಿಟ್ಟೆ."

ಕೊಟಬಾಗಿ ಹೇಳಿ ಮುಗಿಸಿ ಹೊಗೆಯೆಳೆಯುತ್ತ ಕುಳಿತುಕೊಂಡ. ಸದಾನಂದ ಹಣೆಗೆ ಕೈಯಿಟ್ಟುಕೊಂಡು ತೆಂಗಿನ ಗರಿಗಳನ್ನು ದಿಟ್ಟಿಸುತ್ತಲಿದ್ದ. ಐದಾರು ನಿಮಿಷ ಶಾಂತಿಯಿತ್ತು.

ಸಿಗರೇಟಿನ ಕೊನೆಯನ್ನು ಕಿಟಕಿಯಿಂದಾಚೆ ಎಸೆಯುತ್ತ ಕೊಟಬಾಗಿ ಯೆಂದ :

" ಬೇಂದ್ರೆಯವರು ಬ್ರಾಹ್ಮಣರಾಗಿ ಹುಟ್ಟಿದ್ದು ಅವರ ತಪ್ಪು. ನಾನು ಬ್ರಾಹ್ಮಣನಾಗಿ ಹುಟ್ಟಿದ್ದೂ ನನ್ನ ತಪ್ಪು...."

" ಇದರಲ್ಲೇನೂ ಅರ್ಥವಿಲ್ಲ ಕೊಟಬಾಗಿ. ಬೇಂದ್ರೆಯವರನ್ನು ಬ್ರಾಹ್ಮಣರು ಮಾತ್ರ ಮೆಚ್ಚುತ್ತಾರೆಯೆ? ಪುಟ್ಟಪ್ಪನವರನ್ನು ಬ್ರಾಹ್ಮಣೇತರರು ಮಾತ್ರ ಎತ್ತಿ ಹಿಡಿಯುತ್ತಾರೆಯೆ? ಮಾಸ್ತಿಯವರು ಬ್ರಾಹ್ಮಣರೆಂದು ನಾವು ಅವರನ್ನು ಕಡೆಗಣಿಸುತ್ತೇವೆಯೆ ?" So also Kulkarni

" ನಮ್ಮ ಪೀಳಿಗೆಯವರಲ್ಲಿ ಈ ಜಾತೀಯ ದೃಷ್ಟಿಯಿನ್ನೂ ಅಷ್ಟೊಂದು ಬಂದಿರಲಿಕ್ಕಿಲ್ಲ. ಹಳೆಯ ಪೀಳಿಗೆಯ ಚೌಕೀಮಠರಂಥವರಿಗೆ ಮಾತ್ರ ರಕ್ತದಲ್ಲಿ ಬೆರೆತುಬಿಟ್ಟದೆ ವಿಷ."

" ಅವರಿಗೆ ನಾವು ಹೆಚ್ಚು ಮಹತ್ವ ಕೊಡದಿದ್ದರಾಯಿತು ಬಿಡಿರಿ. ನಾವು ತರುಣರು ಎಲ್ಲಾ ಒಂದೇ ವಿಚಾರದವರಾಗಿದ್ದರೆ ಸಾಕು."

" ಅದೇನೋ ಸರಿ. ಆದರೆ ನಾನಿನ್ನು ಈ ಚೌಕೀಮಠರ ಕೈಯಲ್ಲಿ ಕೆಲಸ ಮಾಡುವದು ಹ್ಯಾಗೆ ಅಂತ ಚಿಂತೆ...."

" ಚಿಂತೆಯೇನು ಇದ್ದೇ ಇರುತ್ತದೆ ಬಿಡಿರಿ. ಅದನ್ನೆಲ್ಲ ಮನಸ್ಸಿಗೆ ಹಚ್ಚಿ ಕೊಂಡರಾಗುತ್ತದೆಯೆ ?"

" ನೀವಿನ್ನೂ ಹೊಸ ಹರೆಯದವರು. ನನ್ನಷ್ಟು ಕಷ್ಟಪಟ್ಟವರಲ್ಲ. ಆದ್ದರಿಂದ ಹೀಗೆ ಮಾತಾಡುತ್ತೀರಿ. ನನಗೆ ಒಂದೇ ಎರಡೇ ಎಷ್ಟೊಂದು ಕಷ್ಟಗಳು ಅಂತೀರಿ. ಎಲ್ಲಿಯೂ ಯಾವುದರಲ್ಲಿಯೂ ಸಮಾಧಾನ ಸಿಗಲೊಲ್ಲದು...."

ಅವನನ್ನು ಬಲವಂತದಿಂದ ಊಟಕ್ಕೆಬ್ಬಿಸಿ ಭೋಜನಾಲಯಕ್ಕೆ ಕರೆದೊಯ್ದ ಸದಾನಂದ.

ಭೋಜನಾಲಯದ ಒಡೆಯ ಮಹಾಲಿಂಗಪ್ಪ ಕೊಟಬಾಗಿಯನ್ನು ತುಂಬ ಆದರದಿಂದ ಬರಮಾಡಿಕೊಂಡ.

" ಬರ್ರಿ, ಬರ್ರಿ; ಮಾಸ್ತರರೇ – ಬಹಳ ದಿನಗಳ ಮ್ಯಾಲ ಬಂದಿರಿ. ಎಲ್ಲಾ ನೆಟ್ಟಗಿದ್ದೀರಾ ?"

" ಏನೋ ಹೀಗೆ ಇದ್ದೇನೆ. ನಿಮ್ಮ ಹುಡುಗ ಎಲ್ಲಿ ಕಾಣುವದಿಲ್ಲವಲ್ಲ ?"

ಮಹಾಲಿಂಗಪ್ಪನ ಹಿರಿಯ ಮಗ ಶಿವಲಿಂಗ ಕೊಟಬಾಗಿಯ ವಿದ್ಯಾರ್ಥಿ. ಮ್ಯಾಟ್ರಿಕ್ ಪರೀಕ್ಷೆ ದಾಟಲು ಆತ ಮೂರು ವರ್ಷಗಳಿಂದ ಯತ್ನಿಸುತ್ತಿದ್ದರೂ ಯಶಸ್ವಿಯಾಗಿರಲಿಲ್ಲ. ಮಗನನ್ನು ಕಾಲೇಜಿಗೆ ಕಳಿಸಿ ಪದವೀಧರನನ್ನಾಗಿಸ ಬೇಕೆಂದು ಮಹಾಲಿಂಗಪ್ಪನ ಬಯಕೆ. ಶಿವಲಿಂಗ ಮಾತ್ರ ಇನ್ನೂ ಹೈಸ್ಕೂಲನ್ನು ದಾಟಲು ಸಮರ್ಥನಾಗಿರಲಿಲ್ಲ.

" ಅನ್ನ ಆಗ್ತಾ ಇದೆ. ಸ್ವಲ್ಪ ಕೂಡ್ರಿ," ಎಂದ ಮಹಾಲಿಂಗಪ್ಪ.

ಎಲ್ಲರೂ ಕುಳಿತುಕೊಂಡರು.

ಮಹಾಲಿಂಗಪ್ಪ ಬೀಡಿಯೊಂದನ್ನು ಹೊತ್ತಿಸಿ ಸೇದುತ್ತ ಮಾತನಾಡಿದ:

" ಅಲ್ರೀ ಮಾಸ್ತರೆ, ನಮ್ಮ ಹುಡುಗ ಈ ವರ್ಷ ಆದರೂ ದಾಟಿಯಾನೋ ಇಲ್ಲೋ ?"

ಶಿವಲಿಂಗನ ಬುದ್ಧಿವಂತಿಕೆಯನ್ನು ಜ್ಞಾಪಿಸಿಕೊಂಡು ಮುಗುಳ್ನಗೆ ಬೀರಿ ಸುಮ್ಮನಾದ ಕೊಟಬಾಗಿ.

" ಈ ಸಲ ಆದರೂ ಅವ ಪಾಸಾದರೆ ಮಾನ ಉಳೀತದೆ ಮಾಸ್ತರರೆ," ಎಂದ ಮಹಾಲಿಂಗಪ್ಪ.

" ನಿಜ. ಅವನಿಗೆ ಟ್ಯೂಶನ್ ಆದರೂ ಹೇಳಿಸಿ ನೋಡಿರಿ."

" ಯಾರು ಬೇಡಂತಾರೆ ಮಾಸ್ತರರೇ ? ನೀವೇ ಹೇಳಿಕೊಡಿರಲ್ಲ !"

" ಛೆ. ಛೆ. ನನ್ನಿಂದ ಆಗುವದಿಲ್ಲಪ್ಪ. ನನಗೆ ಬಹಳ ಕೆಲಸ," ಎಂದು ನುಡಿದು ಕೊಟಬಾಗಿ ಸದಾನಂದನ ಕಡೆ ತಿರುಗಿ,

" ಶಿವಲಿಂಗನಿಗೆ ನೀವು ಟ್ಯೂಶನ್ ಹೇಳುತೀರಾ ಸದಾನಂದ ?" ಎಂದ.

" ಅಷ್ಟು ಉಪಕಾರಮಾಡಿ ಪುಣ್ಯ ಕಟ್ಟಿಕೊಳ್ಳಿರಪ್ಪಾ," ಎಂದು ಬೇಡಿ ಕೊಂಡ ಮಹಾಲಿಂಗಪ್ಪ.

ಒಂದೆರಡು ಪಾಠ ಗೊತ್ತುಮಾಡಿಕೊಂಡು ಹತ್ತಿಪ್ಪತ್ತು ರೂಪಾಯಿ ಗಳನ್ನಾದರೂ ಗಳಿಸಬೇಕೆಂದು ಹಲವು ದಿನಗಳಿಂದ ಯೋಚಿಸುತ್ತಿದ್ದ ಸದಾನಂದ ಶಿವಲಿಂಗನ ಗುರುವಾಗಲು ಸಂತೋಷದಿಂದ ಒಪ್ಪಿಕೊಂಡ. ಪ್ರತಿದಿನವೂ ಬೆಳಿಗ್ಗೆ ಒಂದು ಗಂಟೆ ಪಾಠ ಹೇಳುವುದೆಂದು ಗೊತ್ತಾಯಿತು.

" ಇವರು ತಮ್ಮ ಶಕ್ತಿ ಮೀರಿ ಕಲಿಸಿದರೂ ಶಿವಲಿಂಗ ಮತ್ತೆ ಲಾಗ ಒಗೆದರೇನು ಮಾಡುವದು ಮಹಾಲಿಂಗಪ್ಪ ?"

" ಅದಕ್ಕೇನು ಮಾಡುವದು ಹೇಳಿರಿ. ಅವನ ಹಣೆಯೊಳಗೆ ಬರೆದದ್ದು ಆಗುತದೆ. ನಾವು ನೀವು ಪ್ರಯತ್ನಮಾಡುವ ಹಾಗೆ ಮಾಡೂದು," ಎಂದ ಮಹಾಲಿಂಗಪ್ಪ.

ಊಟ ಮುಗಿಸಿಕೊಂಡು ಅವರು ಹೊರಟುನಿಂತಾಗ ಮಹಾಲಿಂಗಪ್ಪ ಕೇಳಿದ :

" ಇವರಿಗೆ ಫೀ ಎಷ್ಟು ಕೊಡಬೇಕು ಮಾಸ್ತರರೇ ?"

" ಎಷ್ಟು ಕೊಡುತ್ತೀರಿ, ನೀವೇ ಹೇಳಿರಿ."

ಕೊಟಬಾಗಿ ಒಂದು ಕ್ಷಣ ಯೋಚಿಸಿ,

" ಫೀ ಏನೂ ಬೇಡ. ಟ್ಯೂಶನ್ನಿಗೆ ಪ್ರತಿಯಾಗಿ ಇವರು ಉಚಿತವಾಗಿ ಊಟ ಮಾಡಲಿ," ಎಂದ.

" ನೀವು ಹೇಳಿದ ಹಾಗೇ ಆಗಲಿ," ಎಂದ ಮಹಾಲಿಂಗಪ್ಪ.

ಭೋಜನಾಲಯಕ್ಕೆ ಹಣವನ್ನೆಲ್ಲಿಂದ ಹೊಂದಿಸುವುದೆಂದು ಚಿಂತಿಸುತ್ತಿದ್ದ ಸದಾನಂದನಿಗೆ ತುಂಬಾ ಸಮಾಧಾನವಾಯಿತು. ಆ ಸಮಸ್ಯೆಯೊಂದು ಸುಲಭ ವಾಗಿ ಪರಿಹಾರವಾಗಿತ್ತು.

## ೧೨

ಕೊಟಡಿಯ ಕಡೆ ನಡೆದು ಬರುತ್ತಿದ್ದ ಹಾಗೆ ಸದಾನಂದ ಹೇಳಿದ:

"ನಿಮ್ಮಿಂದ ಬಹಳ ಉಪಕಾರವಾಯ್ತು ಕೊಟಬಾಗಿ. ಊಟದ ಪ್ರಶ್ನೆಯಾದರೂ ಬಗೆಹರಿಯಿತು."

ಕೊಟಬಾಗಿ ಶುಷ್ಕ ನಗೆ ನಕ್ಕು ನುಡಿದ:

"ಒಂದು ಪ್ರಶ್ನೆ ಬಗೆಹರಿದರೆ ಇನ್ನೊಂದು ಇದ್ದೇ ಇರುತ್ತದ್ದಲ್ಲ?"

"ಅದೂ ನಿಜವೇ. ಆದರೂ ನನಗೆ ಬಹಳ ಅನುಕೂಲವಾಯಿತು ನೋಡಿರಿ. ಈ ಟ್ಯೂಶನ್ ಸಿಗದಿದ್ದರೆ ನನ್ನ ವಿದ್ಯಾಭ್ಯಾಸವೇ ಮುಂದುವರೆಯುತ್ತಿರಲಿಲ್ಲ."

"ವಿದ್ಯಾಭ್ಯಾಸ....ಪದವಿ....ಎಲ್ಲಾ ಸರಿ – ಇಷ್ಟು ಕಷ್ಟಪಟ್ಟು ಪದವಿ ದೊರಕಿಸಿದರೂ ಸುಖವಿಲ್ಲವಲ್ಲ ಸದಾನಂದಾ? ಸಾಯುವವರೆಗೂ ಸಮಸ್ಯೆಗಳು ನಮ್ಮನ್ನು ಬಿಡುವದಿಲ್ಲ. ಈಗ ನನ್ನನ್ನೇ ನೋಡುತ್ತೀರಲ್ಲ, ಎಷ್ಟು ತೊಂದರೆಗಳು....ಒಮ್ಮೊಮ್ಮೆ ಅನಿಸುತದೆ – ಇದನ್ನೆಲ್ಲಾ ಬಿಟ್ಟು ಬೂದಿ ಬಡಿದುಕೊಂಡು ಎಲ್ಲಿಗಾದರೂ ಹೋಗಿ ಬಿಡೋಣಾ ಅಂತ...."

"ಇನ್ನೂ ಮದುವೆಯಿಲ್ಲ, ಮಕ್ಕಳಿಲ್ಲ. ಇಷ್ಟರಲ್ಲೇ ವೈರಾಗ್ಯ ಬಂತಲ್ಲ ನಿಮಗೆ?"

"ಏನು ಮದುವೆಯೋ ಬಿಡಿರಿ ಸದಾನಂದ. ನಮ್ಮಂಥವರನ್ನು ಮದುವೆಯಾಗುವ ಹುಡುಗಿಯರಾದರೂ ಎಲ್ಲಿ ಸಿಕ್ಕುತ್ತಾರೆ?"

" ಅದೇನ್ರೀ ಹೀಗನ್ನುತೀರಿ ? ನಿಮ್ಮಂಥ ಗ್ರ್ಯಾಜುಯೇಟರಿಗೇನು ಕೊರತೆ ವಧುಗಳದು ?"

" ಕೊರತೆಯಿರಲಿಕ್ಕಿಲ್ಲ ಅನ್ನಿರಿ. ಆದರೆ, ನಿಮಗೆ ಗೊತ್ತಿಲ್ಲವೇ, ನಾನು ಅಂಥಿಂಥವರನ್ನ ಮದುವೆಯಾಗುವದಿಲ್ಲ ಅನ್ನುವದು !"

" ಮತ್ತೆ ಎಂಥವರನ್ನಾಗುವವರು ?"

" ನಾನು ಮೆಚ್ಚಿ ಪ್ರೀತಿಸಿದವಳು ಸಿಕ್ಕರೆ ಮಾತ್ರ ಮದುವೆ. ಇಲ್ಲವಾದರಿಲ್ಲ."

" ಅಂಥವಳಿನ್ನೂ ಒಪ್ಪಿಲ್ಲವೋ ಏನು ?"

ಒಂದು ಕ್ಷಣ ಸುಮ್ಮನಿದ್ದು ಕೊಟಬಾಗಿಯೆಂದ :

" ಇನ್ನೂ ಒಪ್ಪಿಲ್ಲ."

ಸದಾನಂದನಿಗೆ ನಗೆಯನ್ನು ತಡೆಯಲಾಗಲಿಲ್ಲ.

" ಹಾಗಾದರೆ ಈಗಲೂ ನಿಮ್ಮ ಕೋರ್ಟ್‌ಷಿಪ್ ನಡೆದಿದೆ ಅನ್ನಿರಿ."

" ಏನು ಕೋರ್ಟ್‌ಷಿಪ್ಪೋ ಏನು ಲವ್ವೋ ! ಈ ಪ್ರಪಂಚವೇ ವಿಚಿತ್ರವಾಗಿದೆ." ಕೊಟಬಾಗಿ ಕೊಂಚ ತಡೆದು ಮತ್ತೆ ಮುಂದುವರೆಸಿದ : " ರವೀಂದ್ರರೊಂದು ಕಡೆ ಹೇಳಿದ್ದಾರೆ – I seek what I cannot get, I get what I donot seek – ಅಂತ. ಆ ಮಾತು ಪೂರಾ ನಿಜ ನೋಡಿರಿ. ಇದುವರೆಗೆ ನಾನು ಬಯಸಿದ್ದಾವದೂ ಸಿಕ್ಕಿಲ್ಲ ನನಗೆ."

" ಬಿ.ಎ. ಆದರೂ ಆಯಿತಲ್ಲ ?"

" ಇಷ್ಟರಿಂದ ನನಗೆ ಸಮಾಧಾನವಿರಲಿಲ್ಲ. ಎಂ.ಎ. ಮುಗಿಸಬೇಕೆಂಬ ಬಯಕೆ ನನಗಿತ್ತು. ಆದರೆ, ನಿಮಗೆ ಗೊತ್ತಲ್ಲಾ – ಹಣದ ತೊಂದರೆಯಿಂದ ಇಲ್ಲಿಗೇ ನಿಲ್ಲಿಸಬೇಕಾಯಿತು. ಯಾವದಾದರೊಂದು ನೌಕರಿ ಹಿಡಿದು ಹಾಗೇ ಎಂ. ಎ. ಗೂ ಓದಬೇಕೆಂಬ ವಿಚಾರವಿತ್ತು – ಆದರೆ – ಈ ನೌಕರಿ ನನ್ನ ಕುತ್ತಿಗೆಯನ್ನೇ ಹಿಸುಕುತ್ತಿರುವಾಗ ಎಂ.ಎ. ಅಭ್ಯಾಸ ಹೇಗಾದೀತು ?"

ಬೆಳದಿಂಗಳಲ್ಲಿ ಸ್ತಬ್ಧವಾಗಿ ಶಾಂತವಾಗಿ ನಿಂತಿದ್ದ ಗಿಡಗಳನ್ನು ದಿಟ್ಟಿಸುತ್ತ ಮೌನವಾಗಿ ಹೆಜ್ಜೆ ಹಾಕುತ್ತಿದ್ದ ಸದಾನಂದ. ಕೊಟಬಾಗಿಯ ಉದಾಸೀನತೆ ಮೆಲ್ಲಮೆಲ್ಲನೆ ಅವನ ಅಂತರಂಗದಲ್ಲೂ ಪ್ರವೇಶಿಸುತ್ತಿತ್ತು.

" ಎಂ.ಎ. ಪಾಸು ಮಾಡಿ ಯಾವದೊಂದು ಕಾಲೇಜಿನಲ್ಲಿ ಪ್ರೊಫೆಸರ್

ಆಗಬೇಕು, ವರ್ಷಕ್ಕೊಂದು ಕವನಸಂಕಲನ ಪ್ರಕಟಿಸುತ್ತ ಸಾಹಿತ್ಯ ಕ್ಷೇತ್ರದಲ್ಲಿ ದುಡಿಯಬೇಕು ಎಂದೆಲ್ಲ ನಾನು ಲೆಕ್ಕ ಹಾಕಿಕೊಂಡಿದ್ದೆ. ಈ ಮಾಸ್ತರಕಿಯನ್ನು ಕೊರಳಿಗೆ ಕಟ್ಟಿಕೊಳ್ಳಲು ಸ್ವಲ್ಪವೂ ಮನಸ್ಸಿರಲಿಲ್ಲ. ಆದರೇನು ಮಾಡುವದು? ಇದೇ ನನ್ನ ಹಣೆಯಲ್ಲಿ ಬರೆದಿತ್ತೆಂದು ತೋರುತ್ತದೆ. ಕವಿತೆಗಳನ್ನಾದರೂ ಪ್ರಕಟಿಸೋಣ ಅಂದರೆ ಯಾವ ಪ್ರಕಾಶರಿಗೂ ಅವು ಬೇಕಾಗಿಲ್ಲ. ಪುಸ್ತಕ ಪ್ರಕಟಿಸುವ ಮಾತಿರಲಿ, ಪತ್ರಿಕೆಯಲ್ಲಿ ಕವಿತೆ ಪ್ರಕಟಿಸಿದರೂ ಕೂಡ ದೊಡ್ಡ ಉಪಕಾರ ಮಾಡುವ ಹಾಗೆ ವರ್ತಿಸುತ್ತಾರೆ ಸಂಪಾದಕರು. ಈಚೆಗೆ ಕವಿತೆ ಬರೆಯುವದೂ ಬೇಸರವಾಗಿದೆ ನೋಡಿರಿ. ಯಾತಕ್ಕಾಗಿ ಯಾರಿಗಾಗಿ ಬರೆಯುವದು?"

"ಇಷ್ಟು ಬೇಸರವಾದರೆ ಹೇಗೆ ಕೊಟಬಾಗಿ? ನಮ್ಮ ಮನಸ್ಸಿನ ಆನಂದಕ್ಕಾದರೂ ಬರೆಯಬೇಕು ನಾವು."

"ಏನು ಆನಂದವೊ....ಏನು ಸಂತೋಷವೊ. ಗೋಳು ಕವಿತೆ ಬರೆಯುವದು....ಅವನ್ನೋದಿ ಮತ್ತೆ ಗೋಳಾಡುವದು....ಎಲ್ಲಿಯ ಆನಂದ?"

"ನೀವು ಪೂರಾ ನಿರಾಶಾವಾದಿಗಳ ಹಾಗೆ ಮಾತಾಡುತ್ತೀರಿ."

"ನಿರಾಶಾವಾದಿ! ಇರಬಹುದು. ಎಲ್ಲಾ ಆಸೆಗಳೂ ಭಗ್ನವಾದ ಬಳಿಕ ಮನುಷ್ಯ ನಿರಾಶಾವಾದಿಯಾಗುವದು ಸಹಜವಲ್ಲವೇನು?"

ಎರಡು ನಿಮಿಷ ಮೌನ.

ಮತ್ತೆ ಕೊಟಬಾಗಿಯೆ ಹೇಳಿದ:

"ನಿರಾಶಾವಾದ ಪಲಾಯನವಾದ ಅಂತ ಮಾತಾಡುವದು ಸುಲಭ ಸದಾನಂದಾ. ಮನಸ್ಸಿನಲ್ಲಿ ಬರೀ ಕಳವಳ ತುಂಬಿರುವಾಗಲೂ ಆಶಾವಾದಿಯಾಗಿ ಉಳಿಯುವದು ಬಹಳ ಕಷ್ಟ."

"ನೀವು ಮಾತಾಡುವದನ್ನ ನೋಡಿದರೆ ನನಗನ್ನಿಸುತದೆ...."

"ಹೂಂ....?"

"ನೀವು ಯಾರನ್ನೋ ಪ್ರೀತಿಸುತ್ತಿರಬೇಕು...."

"ಕ್ವೈಟ್ ರೈಟ್," ಎಂದ ಕೊಟಬಾಗಿ.

"ಅವರೂ ನಿಮ್ಮನ್ನು...."

"ಕ್ವೈಟ್ ರಾಂಗ್," ಎಂದ ಕೊಟಬಾಗಿ.

"ಇಲ್ಲವೇ ?"

"ಇಲ್ಲ. ಅದಕ್ಕೇ ಈ ಗೋಳಾಟ...."

"ಅವರು ಯಾರು ಅನ್ನುವದನ್ನ...."

"ಈಗಲೇ ಹೇಳಲಾರೆ. ಮತ್ತೊಮ್ಮೆ ಎಂದಾದರೂ ಹೇಳುತ್ತೇನೆ." ಎಂದ ಕೊಟಬಾಗಿ.

ಆತ ಶಾಂತಳನ್ನು ಪ್ರೀತಿಸುತ್ತಿರಬಹುದೆಂಬ ವಿಚಾರ ಸದಾನಂದನಿಗೆ ಹೊಳೆಯುವಂತಿರಲಿಲ್ಲ.

ಕೊಟಡಿಗೆ ಬಂದು ಹಾಸಿಗೆಯ ಮೇಲುರುಳಿದ ಬಳಿಕ ಕೊಟಬಾಗಿ ಕೇಳಿದ :

"ನನ್ನದೆಲ್ಲಾ ಕೇಳಿಕೊಂಡಿರಿ. ನಿಮ್ಮದೇನೂ ಹೇಳಲಿಲ್ಲವಲ್ಲಾ ?"

ಶಾಂತಾ ಮತ್ತು ತನ್ನ ನಡುವೆ ಬೆಳೆಯುತ್ತಿದ್ದ ಮಧುರಸಂಬಂಧ ಬಗೆಗೆ ಕೊಟಬಾಗಿಯೆದುರಿಗೆ ಈಗಲೇ ಹೇಳುವುದು ಸರಿಯಲ್ಲವೆಂದು ಸದಾನಂದನಿಗೆನ್ನಿಸಿತು. ಈಗತಾನೆ ಆರಂಭವಾದ ಪ್ರಕರಣ. ಇನ್ನೂ ಬಹಳ ಅಸ್ಪಷ್ಟವಾದುದು. ಅಂಥದನ್ನು ಈಗಲೇ ಬಯಲಿಗೆಳೆಯಬಾರದು.

"ನನ್ನದೇನಿದೆ ಹೇಳುವಂಥಾದ್ದು ಕೊಟಬಾಗಿ ?"

"ಏನೂ ಇಲ್ಲವೆ ? ಇದುವರೆಗೆ ನೀವು ಯಾವ ಹುಡುಗಿಯನ್ನೂ ಪ್ರೀತಿಸಿಲ್ಲವೆ ?"

"ಇಲ್ಲ ಮಾರಾಯಾ."

"ಇದುವರೆಗೆ ವಧು ನೋಡಲಿಕ್ಕೂ ಹೋಗಿಲ್ಲವೇ ನೀವು ?"

ವಧು....ಥಟ್ಟನೆ ಸದಾನಂದನಿಗೆ ಹುಕ್ಕೇರಿಯವರ ವಿಷಯ ಜ್ಞಾಪಕ ಬಂದಿತು. ವಿಜಾಪುರದಲ್ಲಿ ಅಸಿಸ್ಟಂಟ್ ಡೆಪ್ಯುಟಿ ಎಜ್ಯುಕೇಶನಲ್ ಇನಸ್ಪೆಕ್ಟರ್ ಆಗಿದ್ದರವರು. ತಾನು ವಿಜಾಪುರವನ್ನು ಬಿಡುವ ಮುನ್ನ ತನ್ನ ಶಿಕ್ಷಕರೊಬ್ಬರು ಹುಕ್ಕೇರಿಯವರ ಮಾತು ತೆಗೆದು ಅವರ ಎರಡನೆಯ ಮಗಳಿಗೆ ವರ ಹುಡುಕುತ್ತಿರುವರೆಂದೂ ತಾನು ಇಷ್ಟಪಟ್ಟರೆ ವಧುವನ್ನು ನೋಡಲು ಹೋಗಬಹುದೆಂದೂ ಹೇಳಿದ್ದರು. ಎಂ.ಎ. ಮುಗಿಸುವವರೆಗೂ ಮದುವೆಯ ಯೋಚನೆಯಿಲ್ಲವೆಂದು ವಿನಯವಾಗಿ ತಿಳಿಸಿ ತಾನು ಜಾರಿಕೊಂಡುದಾಗಿತ್ತು.

ಆ ಸಂಗತಿಯನ್ನಾತ ತಿಳಿಸುತ್ತಲೂ ಕೊಟಬಾಗಿಯೆಂದ :

“ ಹುಕ್ಕೇರಿಯವರೆಂದಿರಾ ? ಅವರನ್ನು ನಾನು ಬಲ್ಲೆ. ಈ ಊರಲ್ಲೂ ಕೆಲದಿನ ಇದ್ದರು. ಬಹಳ ಸಭ್ಯರು. ವೀರಶೈವರಾದರೂ ಜಾತೀಯತೆ ಸ್ವಲ್ಪವೂ ಇಲ್ಲ. ಎಲ್ಲರನ್ನೂ ಒಂದೇ ದೃಷ್ಟಿಯಿಂದ ನೋಡುವವರು – ಅವರೂ ಅಷ್ಟೆ, ಅವರ ಮನೆಯ ಜನರೂ ಅಷ್ಟೆ. ಎಲ್ಲಾ ಬಹಳ ಒಳ್ಳೆಯ ಜನ. ನಿಜವಾಗಿ ಅಂಥ ಜನರೇ ಬಹಳ ಅಪರೂಪ – ನೀವೇಕೆ ಹಾಗೆ ಮಾಡಿದಿರಿ ? ಹೋಗಿ ನೋಡಿ ಅವರ ಪರಿಚಯ ಮಾಡಿಕೊಳ್ಳಬೇಕಾಗಿತ್ತು. ಆ ಹುಡುಗಿಯನ್ನು ನಾನು ನೋಡಿದ್ದೇನೆ. ತಂದೆ ತಾಯಿಗಳ ಪಡಿಯಚ್ಚು ಇದ್ದ ಹಾಗಿದಾಳೆ. ಕತೆ ಕವಿತೆ ಕಾದಂಬರಿ ಅಂದರೆ ಬಹಳ ಪ್ರೀತಿ. ಹಾಡುತ್ತಾಳೆ, ಪಿಟೀಲು ಬಾರಿಸುತ್ತಾಳೆ. ಇಂಥ ಹೆಂಡತಿ ಸಿಗಬೇಕಾದರೆ ಪುಣ್ಯವಿರಬೇಕು. ಛೆ. ನೀವು ಬಹಳ ತಪ್ಪು ಮಾಡಿದಿರಿ....”

“ ನನ್ನದೇನು ತಪ್ಪು ಕೊಟಬಾಗಿ ? ನನ್ನ ಓದು ಮುಗಿಯಬೇಡವೇನು ?”

“ ಅದಕ್ಕೇನಾಗುತ್ತದೆ ? ತನ್ನ ಪಾಡಿಗೆ ತಾನು ನಡೆದಿರುತ್ತದೆ. ಎಂ.ಎ. ಮುಗಿಸಿದ ಬಳಿಕವೇ ಮದುವೆಯನ್ನು ಹೂಡಬಹುದು, ಅದುವರೆಗೆ ಹೆಣ್ಣು ಗೊತ್ತುಪಡಿಸಿಕೊಂಡು ನಿಶ್ಚಯ ಮಾಡಿಟ್ಟುಕೊಂಡರೂ ಏನು ಹಾನಿ ? ಹುಕ್ಕೇರಿ ಸಾಹೇಬರು ನಿಮ್ಮ ವಿದ್ಯಾಭ್ಯಾಸಕ್ಕೆ ಸಹಾಯವನ್ನೂ ಮಾಡಬಹುದು. ಈ ಸಂಬಂಧವೇನಾದರೂ ಹೊಂದಿದರೆ ಬಹಳ ಒಳ್ಳೆಯದಾಗುವದು. ನೀವು ಒಪ್ಪಿದರೆ ನಾನವರಿಗೆ ಪತ್ರ ಬರೆಯುತ್ತೇನೆ.”

ಸದಾನಂದ ಮಾತನಾಡದೆ ಮಗ್ಗಲು ಹೊರಳಿಸಿ ಮಲಗಿಕೊಂಡ. ಆ ವಿಷಯದಲ್ಲಿ ಅವನಿಗೆ ಕೊಂಚವೂ ಆಸ್ಥೆಯಿರಲಿಲ್ಲ.

“ ಅವರ ಮಗಳ ಹೆಸರೇನು ಗೊತ್ತೇ ನಿಮಗೆ ಸದಾನಂದ ?”

“ ಊಹೂ....”

“ ಹೆಸರೂ ಬಹಳ ಕಾವ್ಯಮಯವಾದದ್ದು. ಮೀನಾಕ್ಷಿ ಅಂತ....ಹಾ, ಏನಂತೀರಿ ? ಚೆಂದಾಗಿದೆಯಲ್ಲವೆ ?”

ನಿದ್ದೆಯ ಆಳಕ್ಕಿಳಿಯುತ್ತಿದ್ದ ಸದಾನಂದನಿಂದ ಉತ್ತರ ಬರಲಿಲ್ಲ.

## ೧೩

“ನಾ ಹೊರಡುತೀನಿ ಲೀಲಾ,” ಎಂದಳು ಶಾಂತಾ.

“ಸ್ವಲ್ಪ ತಡಿಯೇ. ಇದೊಂದು ಆಟ ಮುಗಿಸಿ ಬರ್ತೀನಿ,” ಎಂದಳು ಲೀಲಾ.

ಶಾಂತಳಿಗೆ ಬಲು ಬೇಸರಕ್ಕಿಟ್ಟುಕೊಂಡಿದ್ದಿತು. ಅವಳಿಗೆ ಇಂಥ ಆಟಗಳೆಂದರೆ ಸೇರಿಕೆಯಾಗದು. ಲೀಲ ಮತ್ತು ಕುಮುದರಿಗೆ ಮಾತ್ರ ‘ಟೆನ್ನಿಕ್ವೈಟ್’ ಆಟವೆಂದರೆ ತುಂಬ ಪ್ರೀತಿ. “ಉಂಡದ್ದು ಪಚನವಾಗಬೇಕೋ ಬೇಡವೋ? ಒಂದರ್ಧ ತಾಸು ರಿಂಗ್ಸ್ ಆಡುತ್ತಿದ್ದರೆ ಚೆನ್ನಾಗಿ ಹಸಿವಾಗುತದೆ.” ಎನ್ನುವಳು ಲೀಲಾ. ಒಂದೆರಡು ತಿಂಗಳ ಅವಧಿಯಲ್ಲಿ ಆಕೆ ಆ ಆಟದಲ್ಲಿ ಪ್ರಾವೀಣ್ಯತೆಯನ್ನೂ ಪಡೆದುಕೊಂಡಿದ್ದಳು. ಬ್ಯಾಡ್‌ಮಿಂಟನ್ ಆಟದಲ್ಲೂ ಅವಳಿಗೆ ಅಭಿರುಚಿಯುತ್ಪನ್ನವಾಗಿದ್ದಿತು. ವಿದ್ಯಾರ್ಥಿಗಳೊಂದಿಗೆ ಸಂಕೋಚವಿಲ್ಲವೆ ಬೆರೆತು ಆಟಪಾಟ ಮತ್ತಿತರ ಚಟುವಟಿಕೆಗಳಲ್ಲಿ ಅವಳು ಭಾಗವಹಿಸುತ್ತಿದ್ದಳಾದುದರಿಂದ ಅಲ್ಪಾವಧಿಯಲ್ಲಿಯೆ ಅವಳ ಹೆಸರು ಕಾಲೇಜಿನಲ್ಲೆಲ್ಲ ಪ್ರಸಿದ್ಧವಾಗಿತ್ತು. ಪರೀಕ್ಷೆಯಲ್ಲಿ ಮೊದಲನೆಯ ನಂಬರು ಪಡೆಯುವುದರ ಕಡೆಗೇ ಶಾಂತಳ ಗಮನ. ಅಂತೆಯೆ ಅವಳು ಆಟಪಾಟಗಳಲ್ಲಿ ಭಾಗವಹಿಸುತ್ತಿರಲಿಲ್ಲ. ಆದರೂ ಲೀಲಳ ಬಲವಂತಕ್ಕೊಳಗಾಗಿ ಅವಳೊಡನೆ ಹೋಗಿ ಅವಳ ಆಟ ಮುಗಿಯುವವರೆಗೆ ಅದನ್ನು ನೋಡುತ್ತ ಕುಳಿತಿರಬೇಕಾಗುತಿತ್ತು.

ಆಟ ರಭಸದಿಂದ ಸಾಗಿದ್ದಿತು. ಹಸುರು ಹಾಸಿನ ಮೇಲೆ ಕುಳಿತು ಆಟವನ್ನು ವೀಕ್ಷಿಸುತ್ತಿದ್ದ ವಿದ್ಯಾರ್ಥಿನಿಯರು ಆಟಗಾರರ ಜಾಣ್ಮೆಯನ್ನೂ ತಪ್ಪುಗಳನ್ನೂ ಕುಳಿತು ಚರ್ಚಿಸುತ್ತಿದ್ದರು. ಜಿಗಿದು ನೆಗೆದು ರಬ್ಬರಿನ 'ರಿಂಗ್' ಅನ್ನು ಎಸೆಯುತ್ತಿದ್ದ ಹುಡುಗಿಯರನ್ನು ನೋಡಲೆಂದೇ ಬಂದ ರಸಿಕ ವಿದ್ಯಾರ್ಥಿಗಳು ಕೆಲವರು, ಜಾಳಿಗೆಯ ಕಂಬಗಳಿಗೊರಗಿ ನಿಂತು ಸಿಗರೇಟಿನ ಹೊಗೆ ಬಿಡುತ್ತ ಆಗಾಗ ಆಡುವ ಹುಡುಗಿಯರನ್ನು ಕಂಡು ಅರ್ಥಪೂರ್ಣವಾಗಿ ನಗುತ್ತಲಿದ್ದರು.

ಸಾಯಂಕಾಲವಾದುದರಿಂದ ಆಕಾಶದಲ್ಲಿ ಹಕ್ಕಿಗಳ ಗದ್ದಲ ವಿಶೇಷ ವಾಗಿತ್ತು. ಸಾಲುಸಾಲಾಗಿ ಹಾರುತ್ತ ಹೊರಟ ಬೆಳ್ಳಕ್ಕಿಗಳದೊಂದು ಗುಂಪನ್ನು ನಿರೀಕ್ಷಿಸುತ್ತಿದ್ದ ಹಾಗೆ 'ಟೆನ್ನಿ ಕ್ವೈಟ್' ಆಟದಲ್ಲಿ ತೊಡಗಿದ್ದ ಆ ವಿದ್ಯಾರ್ಥಿ ವಿದ್ಯಾರ್ಥಿನಿಯರೂ ಹಕ್ಕಿಗಳಂತೆಯೆ ಕಾಣಿಸಿದರು ಶಾಂತಾಗೆ. ಎದುರಾಳಿಗಳಾಗಿದ್ದ ವಿದ್ಯಾರ್ಥಿನಿಯರ ತುಂಬಿದ ಎದೆಗಳಿಗೆ ಗುರಿಯಿಟ್ಟು ರಬ್ಬರ್ ರಿಂಗ್ ಎಸೆಯುತ್ತಿದ್ದರು ವಿದ್ಯಾರ್ಥಿಗಳು. ಅದು ಎದೆಗೆ ಬಡಿದೊಡನೆ ಕುಲುಕುಲು ನಗುತ್ತಾ ವಿದ್ಯಾರ್ಥಿಗಳ ಮುಖಕ್ಕೆ ಗುರಿಯಿಟ್ಟು ರಿಂಗ್ ಬಿಡುತ್ತಿದ್ದರು ವಿದ್ಯಾರ್ಥಿನಿಯರು. ರಿಂಗ್ಸ್ ಆಟವೆಂಬುದು ಕೇವಲ ನೆಪಕ್ಕೆ; ನಿಜವಾಗಿ ನಡೆದಿರುವ ಆಟವೊಂದರೆ ಇದು! ಎಂದು ತನಗೆ ತಾನೇ ಹೇಳಿಕೊಂಡು ಮುಗುಳ್ನಕ್ಕಳು ಶಾಂತಾ.

ಅವಳ ಬದಿಯಲ್ಲಿ ಕುಳಿತಿದ್ದ ಮೇರಿ ಕೇಳಿದಳು:

"ಯಾಕ್ರೀ, ನೀವ್ಯಾಕೆ ಆಡುವದಿಲ್ಲ?"

"ನನಗದು ಬರುವದಿಲ್ಲ."

"ಅದರಲ್ಲೇನಿದೆ ಅಂಥಾದ್ದು? ಒಂದೆರಡು ಸಲ ಆಡಿದರಾಯಿತು, ತಾನೇ ತಿಳೀತದೆ."

ಆ ಮಾತು ಕೇಳಿ ಕೋವಾಡಕರ್ ನಳಿನಿ ಅಣಕದ ನಗೆಯೊಡನೆ ನುಡಿದಳು:

"ಅವರಿಗೆ ಇಂಥ ಆಟಗಳು ಸೇರುವದಿಲ್ಲ ಬಿಡಿರೀ."

"ಹಾವೇನ್ರೀ?" ಎಂದಳು ಮೇರಿ.

"ಹಾಗೇನಿಲ್ಲ, ಹಾಗೇನಿಲ್ಲ," ಎಂದು ತಬ್ಬಿಬ್ಬಾಗಿ ನುಡಿದಳು ಶಾಂತಾ.

ಹುಡುಗಿಯರು ನಕ್ಕರು. ಅವರು ನಗುವುದನ್ನು ಕಂಡು ಕಂಬಕ್ಕೊರಗಿ ನಿಂತ ವಿದ್ಯಾರ್ಥಿಗಳೂ ನಕ್ಕರು. ಶಾಂತಳಿಗೆ ಮುಖಭಂಗವಾದಂತಾಯಿತು. ತನ್ನನ್ನು ಕಂಡು ಇವರೆಲ್ಲ ಏಕೆ ನಗಬೇಕು? ತಾನು ಇವರಿಗೊಂದು ತಮಾಷೆಯ ವಸ್ತುವಾದಂತಾಯಿತಲ್ಲ!

ಅಲ್ಲಿ ಕುಳಿತಿರಲಾರದೆ ಅವಳೆದ್ದು ಹೊರಡುತ್ತಲೂ ಲೀಲಾ ಮತ್ತೆ ಕೂಗಿದಳು:

"ಸ್ವಲ್ಪ ಇರೇ. ಬಂದುಬಿಟ್ಟೆ."

"ನನಗೆ ಕೆಲಸವಿದೆಯಮ್ಮ. ನಾ ಹೋಗುತೀನಿ," ಎಂದಿಷ್ಟೆ ನುಡಿದು ಅವಳು ಹೊರಟುಬಿಟ್ಟಳು.

ಕಾಲೇಜಿನ ಉದ್ಯಾನದಲ್ಲಿ ಹಾಯ್ದು ಅವಳು ಮಹಾದ್ವಾರದ ಬಳಿ ಬರುತ್ತಿದ್ದ ಹಾಗೆ ಹಿಂದಿನಿಂದ ಬೈಸಿಕಲ್ಲೊಂದು ಪೂರ್ಣವೇಗದಲ್ಲಿ ಬಂದು ಅವಳ ಹತ್ತಿರ ಥಟ್ಟನೆ ನಿಂತುಕೊಂಡಿತು. ದಿಗಿಲುಗೊಂಡು ಅವಳು ದೂರ ಸರಿದು ಅದರ ಸವಾರನತ್ತ ದೃಷ್ಟಿ ತೂರಿದಳು. ಆತ ವರಸೆಟ್ಟಿಯಾಗಿದ್ದ.

ಬೈಸಿಕಲಿನ ಮೇಲೆ ಕುಳಿತಿದ್ದ ಹಾಗೆಯೆ ಆತ ನೆಲಕ್ಕೊಂದು ಕಾಲನ್ನೂರಿ ಅವಳನ್ನು ತಿಂದುಬಿಡುವಂತೆ ದಿಟ್ಟಿಸುತ್ತಾ ಹಿ ಹಿ ಹಿ ಎಂದು ನಕ್ಕ.

"ಸೈಕಲ್ ಹತ್ತಿತೋ ಏನು? ನೋವಾಯಿತೇ?"

ಅವನನ್ನು ಹೇಗೆ ತೊಲಗಿಸುವುದೆಂದು ಯೋಚಿಸುತ್ತ ಅವಳು ಒಂದು ಕ್ಷಣ ಸುಮ್ಮನೆ ನಿಂತುಕೊಂಡಿದ್ದಳು.

"ಸ್ವಲ್ಪ ತಿರುಗಾಡಿಕೊಂಡು ಬರೋಣ ಬರ್ತೀರಾ?" ಎಂದು ಮತ್ತೆ ಕೇಳಿದ ವರಸೆಟ್ಟಿ.

ಅವನನ್ನು ಗದರಿಸಲು ಅವಳು ದನಿಯೆತ್ತುವಷ್ಟರಲ್ಲಿ ಹಿಂದಿನಿಂದ ಸದಾನಂದನ ದನಿ ಕೇಳಬಂದಿತು. ಅವಳು ಸಂತೋಷದಿಂದ ಅತ್ತ ಹೊರಳುತ್ತಿದ್ದ ಹಾಗೆ ವರಸೆಟ್ಟಿ ಬೈಸಿಕಲ್ ತಿರುಗಿಸಿಕೊಂಡು ಪಲಾಯನ ಹೇಳಿಸಿದ.

ಸದಾನಂದ ಕೊಂಚ ಆವಸರದಿಂದಲೇ ಬಂದು ಅವಳನ್ನು ಕೂಡಿಕೊಂಡ.

"ಏನಾಯ್ತು? ವರಸೆಟ್ಟಿ ಮತ್ತೇನಾದರೂ ಗದ್ದಲ ಮಾಡಿದನೇ?"

ನಡೆದುದನ್ನೆಲ್ಲ ಅವಳು ವರದಿಮಾಡುತ್ತಲೂ ಸದಾನಂದ ಮಗುವಿನಂತೆ ನಗುತ್ತ,

"ನಾ ಕೇಳಬೇಕು ಅಂತ ಇಟ್ಟುಕೊಂಡದ್ದನ್ನೇ ಅವನೂ ಕೇಳಿದನಲ್ಲ!" ಎಂದ.

"ಅಂದರೆ?"

"ಅಂದರೆ....ಸ್ವಲ್ಪ ತಿರುಗಾಡಿಕೊಂಡು ಹೋಗೋಣ ಅಂತ...."

"ಅದಕ್ಕೇನಂತೆ. ನಡೀರಲ್ಲ...." ಎಂದು ಮೃದುವಾಗಿ ನಗುತ್ತ ಅವಳು ಹೇಳಿದಳು.

"ಮನೆಯಲ್ಲಿ ಯಾರೂ ಏನೂ ಅನ್ನುವದಿಲ್ಲ ಹೌದಲ್ಲೋ?"

"ಅಂಥಾದ್ದೇನೂ ಇಲ್ಲ. ಅಂತೂ ಕತ್ತಲಾಗುವಷ್ಟರಲ್ಲಿ ಮನೆ ಸೇರಿಕೊಂಡರಾಯಿತು."

ಬೆಳಗಾವಿ ರಸ್ತೆಯಲ್ಲಿ ತಿರುಗಿಕೊಂಡು ಅವರು ಸಾವಧಾನವಾಗಿ ಹೆಜ್ಜೆ ಹಾಕ ತೊಡಗಿದರು. ಸೂರ್ಯಾಸ್ತವಾಗಲು ಇನ್ನೂ ಬಹಳ ಅವಕಾಶವಿತ್ತು. ಇನ್ನೂ ಕೊಂಚ ಬಿಸಿಯಾಗಿಯೆ ಇದ್ದ ಸೂರ್ಯಕಿರಣಗಳು ಅವರ ಮುಖಗಳನ್ನು ಸುಡ ತೊಡಗಿದುವು. ಗಾಳಿಯೂ ಚಲಿಸುತ್ತಿರಲಿಲ್ಲವಾದುದರಿಂದ ತುಂಬ ಸೆಕೆಯೆನಿಸುತಿತ್ತು.

"ನೀರಡಿಕೆಯಾಗಿದೆ. ಸ್ವಲ್ಪ ಚಹ ತೆಗೆದುಕೊಳ್ಳೋಣವೆ?" ಎಂದ ಸದಾನಂದ.

"ಇಲ್ಲೆಲ್ಲಿ ಸಿಗಬೇಕು ಚಹ?"

"ಇಲ್ಲೊಂದು ಅಂಗಡಿಯಿರಬೇಕು. ಬರ್‍ರಿ."

ಮತ್ತೆ ತುಸುದೂರ ನಡೆದು ಹೋದ ಬಳಿಕ ರಸ್ತೆಯ ಎಡಮಗ್ಗಲಲ್ಲಿ ಪುಟ್ಟ ಚಹದಂಗಡಿಯೊಂದು ಕಾಣಿಸಿತು. ತುಂಬ ಸಂಕೋಚದಿಂದ ಸದಾನಂದನ ಜತೆಗೆ ಅಂಗಡಿಯಲ್ಲಿ ಸೇರಿ ಚಹ ಸೇವಿಸಿದುದಾಯಿತು. ಹಾಗೆ, ಅವಳು ಪರಿಚಿತ ಯುವಕನೊಬ್ಬನ ಸಂಗಡ ಚಹಕ್ಕೆ ಹೋದುದು ಅದೇ ಮೊದಲ ಬಾರಿ. ಯಾರಾದರೂ ತಮ್ಮಿಬ್ಬರನ್ನು ಅಲ್ಲಿ ನೋಡಿದರೆ? ತಮ್ಮನ್ನು ಬಲ್ಲ ಕಾಲೇಜು ವಿದ್ಯಾರ್ಥಿಗಳು ಯಾರಾದರೂ ನೋಡಿದರೆ? ಮುಂದೆ ನಡೆಯಬಹುದಾದ ಸನ್ನಿವೇಶಗಳ ಚಿತ್ರ ಅವಳ ಕಣ್ಣೆದುರು ಕಾಣಿಸಿಕೊಂಡಿತು. ಕಪ್ಪು ಹಲಗೆಯ ಮೇಲೆ, ಮಹಾದ್ವಾರದ ಮೇಲೆ, ಪೋರ್ಚಿನ ಗೋಡೆಗಳ ಮೇಲೆ ತಮ್ಮಿಬ್ಬರ ಹೆಸರೂ ಒಟ್ಟಿಗೆ ಕಾಣಿಸಿಕೊಳ್ಳಬಹುದು. ಶಾಂತಾ + ಸದಾನಂದ....ಶಾಂತಾ +

ಸದಾನಂದ....ಶಾಂತಾ ಪ್ರಿಯಕರ ಸದಾನಂದ....ಸದಾನಂದನ ಪ್ರೇಯಸಿ ಶಾಂತಾ....ಇತ್ಯಾದಿ....

ಅವಳು ಭೀತಳಾದಳು. ಆ ಭೀತಿಯ ಜತೆಗೆ ಒಂದು ಬಗೆಯ ವಿಲಕ್ಷಣ ರೋಮಾಂಚಕಾರಕ ಆನಂದವನ್ನೂ ಅನುಭವಿಸಿದಳು. ಕಾಲೇಜಿನಲ್ಲಿ ನಡೆಯ ಬಹುದಾದ ಪ್ರಸಂಗಗಳನ್ನೆಲ್ಲ ಎದುರಿಸುವ ಧೈರ್ಯ ಅವಳೆದೆಯಲ್ಲಿ ಮೂಡ ತೊಡಗಿತು. ಕೊಂಚ ಸಮಯದ ಹಿಂದೆ ತನ್ನನ್ನು ಹೀಗಳೆದು ನಕ್ಕ ಹುಡುಗಿ ಯರು....ಸದಾನಂದನಂಥ ಪ್ರತಿಭಾಶಾಲಿ ಕವಿಯೊಡನೆ ತನ್ನ ಹೆಸರು ಕಾಣಿಸಿ ಕೊಂಡಾಗ ಆ ಚಿಲ್ಲರೆ ಹುಡುಗಿಯರಿಗೆ ಚೆನ್ನಾಗಿ ಮುಖಭಂಗವಾಗಬಹುದು. "ಶಾಂತಾ ಅಂದರೆ ಏನೋ ಅಂದುಕೊಂಡಿದ್ದೆವು. ಅಷ್ಟಿಯಿಲ್ಲ ಬಿಡಿರಿ. ಅವಳೂ ಸಮರ್ಥಳಾಗಿದ್ದಾಳೆ." ಎಂದು ಅವರು ತಮ್ಮತಮ್ಮಲ್ಲೆ ಹೇಳಿಕೊಳ್ಳುವಂತಾಗ ಬಹುದು....

ಹಾಗೆ ಯೋಚಿಸುತ್ತ ಅವಳು ಕಣ್ಣುಗಳ ಮೂಲೆಗಳಿಂದ ದೃಷ್ಟಿ ಹರಿಸಿ ಸದಾನಂದನನ್ನು ನಿಟ್ಟಿಸತೊಡಗಿದಳು. ಅವನ ಮುಖದ ಮೇಲೆ ಪ್ರಸನ್ನ ಹಾಸ್ಯ ಪಸರಿಸಿತ್ತು. ಬಹಳ ದಿನಗಳಿಂದ ಬಯಸುತ್ತಿದ್ದ ಅಲಭ್ಯ ಆಟಿಕೆಯೊಂದನ್ನು ಪಡೆದ ಎಳೆಮಗುವಿನಂತೆ ಅವನ ಸ್ಥಿತಿಯಾಗಿತ್ತು. ಆತ ಆನಂದಿತನಾಗಿದ್ದ, ಅವಳ ಸಂಗದಲ್ಲಿ ಸುಖಿಯಾಗಿದ್ದ.

ಚಹ ಮುಗಿಸಿ ಹೊರಟುದಾಯಿತು.

ನಗರದ ಕೊನೆಯ ಮನೆಯನ್ನು ಹಿಂದೆ ಬಿಟ್ಟು, ರಸ್ತೆಯನ್ನು ತ್ಯಜಿಸಿ ಬಲಗಡೆಗೆ ತಿರುಗಿಕೊಂಡು ಬತ್ತದ ಗದ್ದೆಗಳ ಕಡೆ ನಡೆಯತೊಡಗಿದರು. ಎಡ ಮಗ್ಗುಲಲ್ಲಿ ದೊಡ್ಡದೊಂದು ಮಾವಿನ ತೋಪು. ಅದರಾಚೆ ಹಸಿರು ಹಳದಿಯ ಸಾಗರದಂತೆ ತೋರುತ್ತಿದ್ದ ಬತ್ತದ ಪಯಿರು. ಅದಕ್ಕೂ ಆಚೆ ಸೂರ್ಯಕಿರಣ ಗಳಲ್ಲಿ ಥಳ ಥಳ ಹೊಳೆಯುತ್ತಲಿದ್ದ ಕೆರೆ–ಅದರಾಚೆ ಗಂಭೀರವಾಗಿ ನಿಂತ ಗುಡ್ಡ. ಅದರ ಮೇಲೆ ನೀಲವರ್ಣದ ಆಕಾರ. ಅವರು ತೋಪಿನ ಬಳಿ ಬರುವ ವೇಳೆಗೆ ಸಂಜೆಯ ಗಾಳಿ ಮೆಲ್ಲಮೆಲ್ಲನೆ ಸುಳಿಯತೊಡಗಿತು.

"ಗಾಳಿಗೂ ಹುರುಪು!" ಎಂದ ಸದಾನಂದ.

"ಇಶ್ಶ್ಯಾ!" ಎಂದು ಅವಳು ನಕ್ಕಳು.

ಮಾವಿನ ಗಿಡಗಳ ಕೆಳಗೆ ಹರಡಿದ್ದ ಹುಲ್ಲು ಹಾಸಿನ ಮೇಲೆ ಅವಳು ಕುಳಿತುಕೊಳ್ಳುವಾಗ,

"ವಸ್ತ್ರ ಹಾಸುತ್ತೇನೆ ತಡೀರಿ," ಎಂದ ಸದಾನಂದ.

"ಏನೂ ಬೇಡ ಬಿಡಿರಿ. ಮತ್ತೆ ಮರೆತುಬಿಡುತ್ತೀರಿ." ಅವಳು ನಗುತ್ತ ನುಡಿದಳು.

"ಮರೆತರೆ ಎಚ್ಚರಿಸಲು ನೀವು ಇದ್ದೇ ಇರುವಿರಲ್ಲ!"

ಫೌಜದಾರ ಮುಧೋಳರ ನೆನಪು ಬಂದು ಅವಳ ಮುಖ ಉದಾಸ ವಾಯಿತು. ಹಾಗೆ ಒಮ್ಮಿಂದೊಮ್ಮೆಲೆ ಅವಳ ಮುಖ ಬಣ್ಣಗೆಟ್ಟುದನ್ನು ಕಂಡು ಸದಾನಂದ ಚಕಿತನಾಗಿ ಕೇಳಿದ:

"ಯಾಕೆ ಶಾಂತಾ, ಏನಾಯಿತು ?"

ಎದುರಿಗೆ ಮಿರುಗುತ್ತಿದ್ದ ಬತ್ತದ ಹಸುರನ್ನು ದಿಟ್ಟಿಸುತ್ತ ಅವಳೆಂದಳು:

"ಏನಿಲ್ಲರೀ. ಏನಿಲ್ಲ."

ಅವಳ ದನಿ ಸೂಕ್ಷ್ಮವಾಗಿ ನಡುಗುತ್ತಿತ್ತು.

ಆತ ವ್ಯಾಕುಲನಾಗಿ ಇನ್ನೂ ಕೊಂಚ ಹತ್ತಿರ ಸರಿದು ಅವಳ ಕೈಯನ್ನು ತನ್ನ ಕೈಯಲ್ಲಿ ಕೆಗೆದುಕೊಂಡು, ಅವಳ ಕಣ್ಣುಗಳಲ್ಲಿನ ಭಾವನೆಗಳನ್ನು ಅರ್ಥ ಮಾಡಿಕೊಳ್ಳಲು ಯತ್ನಿಸುತ್ತ ಮಾತನಾಡಿದ:

"ಏನೋ ಇದೆ. ಏನೋ ಇದೆ. ನನಗೆ ಹೇಳುವದಿಲ್ಲವೇ ಶಾಂತಾ ?"

ಆ ಆತ್ಮೀಯತೆಯ ಕರೆ ಅವಳ ಅಂತರಾಳವನ್ನೆಲ್ಲ ಅಲುಗಾಡಿಸಿತು. ಅವನೆದುರಿಗೆ ಎಲ್ಲವನ್ನೂ ತೋಡಿಕೊಂಡು ಎದೆಯನ್ನು ಬರಿದುಮಾಡಿಕೊಳ್ಳ ಬೇಕೆಂದು ಅವಳಿಗೆನ್ನಿಸಿತು. ತಮ್ಮ ಮನೆಯವರಿಗಿಂತ ಹೆಚ್ಚಾಗಿ, ತನ್ನ ಗೆಳತಿಯರಿಗಿಂತ ಹೆಚ್ಚಾಗಿ ಆತನೇ ತನಗೆ ಹತ್ತಿರದವನೆಂದು ಅವಳ ಮನಸ್ಸು ಹೇಳುತ್ತಿತ್ತು.

"ಶಾಂತಾ," ಎಂದು ಅವನು ಮತ್ತೆ ಮೃದುವಾಗಿ ನುಡಿದು ಅವಳ ಕೈಯನ್ನು ನಿಧಾನವಾಗಿ ಕುಲಕಿಸಿದ. ಆ ಹಸ್ತಾಂದೋಲನದ ಮೂಲಕ ಅವನಲ್ಲಿದ್ದ ಯಾವುದೋ ವಸ್ತು ತನ್ನನ್ನೂ ತನ್ನಲ್ಲಿದ್ದ ಯಾವುದೋ ವಸ್ತು ಅವನನ್ನೂ ಸೇರಿದಂತೆ ಅವಳಗೆನ್ನಿಸಿತು.

ಅವಳು ಪುಲಕಿತ ಹೃದಯದಿಂದ ಅವನ ಕೈಗಳನ್ನೆ ದಿಟ್ಟಿಸುತ್ತಿದ್ದಳು.

ದೊಡ್ಡ ದೊಡ್ಡ ಕೈಗಳು. ನೀಳವಾದ ಬೆರಳುಗಳು. ಆ ಕೈಗಳಿಗೂ ಒಂದು ವಿಶಿಷ್ಟ ಆಕರ್ಷಣೆಯಿತ್ತು.

ಆತ ಮುಗುಳುನಕ್ಕ. ಆತ ಯಾವಾಗಲೂ ನಗುತ್ತಲೇ ಇರುವನೇನೊ ಎನ್ನಿಸಿತು ಅವಳಿಗೆ. ತನ್ನಲ್ಲಿದ್ದ ಯಾವುದೊ ಒಂದು ರಹಸ್ಯವನ್ನು ನೆನೆದು ಆತ ನಗುತ್ತಿರುವನೇನೊ. ಆ ರಹಸ್ಯ ಯಾವುದೊ? ಆತ ಯಾವಾಗಲೂ ಆನಂದದಿಂದಿರುವುದು ಹೇಗೆ ಸಾಧ್ಯವಾಗಿದೆಯೊ?

ಆತ ನಗುತ್ತಾ ಅವಳನ್ನು ದಿಟ್ಟಿಸಿ ನೋಡಿದ. ಅವನ ಕಣ್ಣುಗಳು ಕೊಂಚ ಆಂಕುಚಿತವಾದಂತೆ ಕಾಣಿಸಿತು. ಅವನ ಬಾಯಿಯ ಕೀವಿಯನ್ನೂ ದಂತಪಂಕ್ತಿಯ ಹೊಳಪನ್ನೂ ದಿಟ್ಟಿಸುತ್ತಿದ್ದ ಹಾಗೆ ನೋಡಬಾರದುದೇನನ್ನೊ ನೋಡಿದಂತೆ ಅವಳಿಗೆನ್ನಿಸಿತು. ಅವಳು ಚಕಿತಳಾಗಿ ಲಗುಬಗೆಯಿಂದ ನೆಲದ ಕಡೆ ದೃಷ್ಟಿ ತಿರುಗಿಸಿದಳು.

"ಹೇಳುವದಿಲ್ಲವೇ?" ಆತ ಮತ್ತೆ ಕೇಳಿದ.

"ಏನು ಹೇಳಲಿ?"

"ಯಾವದೋ ಚಿಂತೆ ನಿಮ್ಮನ್ನು ಕಾಡುತ್ತಿದೆ. ಅದೇನು ಹೇಳಲೇ ಬೇಕು."

ಅವಳು ಹೇಳತೊಡಗಿದಳು. ಫೌಜದಾರರ ವಿಷಯವನ್ನೆಲ್ಲ ತಿಳಿಸಿ,

"ನಾಳೆ ಮುಂಜಾನೆ ನನ್ನ ನೋಡಲು ಬರ್ತಾರೆ ಅವರು. ಏನು ಮಾಡ ಬೇಕೋ ತಿಳಿಯದಾಗಿದೆ," ಎಂದಳು.

ಅವಳ ಕೈಯನ್ನು ಬಿಟ್ಟು ಆತ ಒಂದು ನಿಮಿಷ ಮೌನವಾಗಿ ಕುಳಿತು ಕೊಂಡಿದ್ದ. ಶಾಂತಾ ಈಗ ಏನು ಮಾಡಬೇಕು? ಅವನಿಗೂ ಬಗೆಹರಿಯ ಲಾರದ ಸಮಸ್ಯೆ ಅದು.

ಹತ್ತಿರದಲ್ಲಿ ಅಳಿಲುಗಳೆರಡು ಪ್ರಣಯಕೇಳಿಯಲ್ಲಿ ನಿರತವಾಗಿದ್ದುವು. ಒಂದು ಅಳಿಲು ಗಿಡವನ್ನೇರಿದೊಡನೆ ಇನ್ನೊಂದು ಅಳಿಲು ಅದನ್ನು ಹಿಂಬಾಲಿಸಿ ಹೋಗುತ್ತಿತ್ತು. ಮೊದಲನೆಯ ಅಳಿಲು ಮತ್ತೆ ಕೆಳಗಿಳಿದು ಬಂದು ಪೊದೆಗಳ ಕಡೆ ಧಾವಿಸುತ್ತಲೂ ಎರಡನೆಯದೂ ಅದರ ಬೆನ್ನು ಹಿಡಿಯುತ್ತಿತ್ತು. ಆ ಚಿನ್ನಾಟವನ್ನು ನಿರೀಕ್ಷಿಸುತ್ತಿದ್ದ ಹಾಗೆ ಸದಾನಂದನ ಮನಸ್ಸಿನಲ್ಲಿ ತಡೆಯಲ ಸಾಧ್ಯವಾದ ಭಾವವೊಂದು ತುಂಬಿ ಬಂದಿತು.

"ಮುಂದೇನು ಮಾಡಬೇಕೆಂದು ಮಾಡಿದ್ದೀರಿ?" ಎಂದು ಕೇಳಿದನಾತ.

"ಅದೇ ಗೊತ್ತಾಗಲೊಲ್ಲದೂ ಅಂದೆ." ಕ್ಷೀಣವಾದ ನಗೆ ಬೀರುತ್ತ ಅವಳು ನುಡಿದಳು. "ನಿಮಗೇನು ಅನ್ನಿಸುತ್ತದೆ?"

"ನನಗೆ?" ಆತ ತಬ್ಬಿಬ್ಬಾಗಿ ನುಡಿದ: "ಅರ್ಥಾತ್, ಈ ಪ್ರಸಂಗದಿಂದ ನೀವು ಪಾರಾಗಬೇಕು ಅಂತನ್ನಿಸುತ್ತದೆ."

"ಅನ್ನಿಸುವದೇನೊ ಸರಿ. ಹೇಗೆ?"

ಕೂದಲಲ್ಲಿ ಬೆರಳುಗಳನ್ನಾಡಿಸುತ್ತ ಆತ ಯೋಚನಾಮಗ್ನನಾಗಿ ಕುಳಿತುಕೊಂಡ. ಅವನ ಭಂಗಿಯನ್ನು ಕಂಡು ಅವಳಿಗೆ ಬಹಳ ಸ್ವಾರಸ್ಯವೆನ್ನಿಸಿತು. ಅವಳು ಹಠಾತ್ತಾಗಿ ತನ್ನ ಕೊರಳನ್ನು ಒಮ್ಮೆ ಎಡಕ್ಕೂ ಒಮ್ಮೆ ಬಲಕ್ಕೂ ತಿರುಗಿಸಿ ನಸುನಕ್ಕಳು.

ಆತ ಬೆಚ್ಚಿ ಅವಳೆಡೆಗೆ ತಿರುಗಿ ಕೇಳಿದ:

"ಏನು ನಕ್ಕಿರಿ?"

"ನೀವು ಧ್ಯಾನಕ್ಕೆ ತೊಡಗಿದ್ದು ನೋಡಿ ನಗು ಬರದಿರುತ್ತದೇನು? ಇನ್ನೇನು ನೀವು ಜಪ ಮಾಡುವದೊಂದು ಉಳಿದಿದೆ, ಅಷ್ಟೆ."

ಆತನೂ ನಕ್ಕ. "ಎಲ್ಲಿಯ ಜಪ ಬಿಡಿರಿ. ನನಗೆ ಅಂಥಾದ್ದರಲ್ಲೆಲ್ಲ ವಿಶ್ವಾಸವಿಲ್ಲ."

"ನನಗಾದರೂ ಎಲ್ಲಿದೆ?"

ಒಂದು ಕ್ಷಣ ಸುಮ್ಮನಿದ್ದು ಆತ ವಿಷಾದಪೂರ್ಣ ದನಿಯಲ್ಲಿ ಹೇಳಿದ:

"ನಾವಿಬ್ಬರೂ ಬೇರೆ ಬೇರೆ ಜಾತಿಯವರಾಗಿ ಹುಟ್ಟ ಬರದೆ ಒಂದೇ ಜಾತಿಯವರಾಗಿ ಬಂದಿದ್ದರೆಷ್ಟು ಚೆನ್ನಾಗುತಿತ್ತು!"

ಅವಳು ನಿಟ್ಟುಸಿರಿಡುತ್ತ ಮೇಲಕ್ಕೆದ್ದಳು.

"ಹೊತ್ತಾಯಿತಲ್ಲವೆ? ಇನ್ನು ಹೊರಡೋಣ."

ಇಬ್ಬರೂ ಮೌನವಾಗಿ ಹೆಜ್ಜೆ ಹಾಕತೊಡಗಿದರು. ಕಾಲೇಜಿನ ಬಳಿ ಹಾಯ್ದು ವಿಸ್ತರಣದತ್ತ ಹೊರಳುತ್ತಿದ್ದಾಗ ಸದಾನಂದ ಹಠಾತ್ತಾಗಿ ದನಿಯೆತ್ತಿ ಹೇಳಿದ:

"ನಿಮ್ಮನ್ನು ತಿರುಗಾಡಲು ಕರೆದುಕೊಂಡು ಹೋದದ್ದು ಯಾಕೆ ಗೊತ್ತೇ

ಶಾಂತಾ ? ನಿಮಗೊಂದು ವಿಷಯ ಹೇಳುವದಿತ್ತು. ಅದನ್ನೇ ಹೇಳಲಿಲ್ಲ. ಮರೆತುಬಿಟ್ಟೆ."

ಅವಳು ಮೋಜಿನ ನಗೆಯೊಡನೆ ಕೇಳಿದಳು : "ಮರೆತಿರಾ ? ಏನು ?"

"ಯೂ ಸೀ. ನಿನ್ನೆ ರಾತ್ರಿಯೂ ನನಗೊಂದು ಕನಸು ಬಿದ್ದಿತ್ತು."

"ಕನಸುಗಳಿಗೆ ನಿಮ್ಮ ಮೇಲೆ ಬಹಳ ಪ್ರೀತಿಯೋ ಏನೊ...."

ಆತ ಕಿಲಕಿಲನೆ ನಗುತ್ತ ಹೇಳಿದ: "ಇದೆಂಥಾ ಪ್ರೀತಿ ಬಿಡಿರಿ. ಸವಿಗನಸು ಬಿದ್ದರೆ ಅದೊಂದು ರೀತಿ. ಆದರೆ ಇವೋ ಬಹಳ ಭಯಂಕರ. ನಿನ್ನಿನ ಕನಸು ನೆನೆದುಕೊಂಡರೇ ಮೈಮೇಲೆ ಮುಳ್ಳು ಬರುತ್ತದೆ. ಏನಾಯಿತೆಂದಿರಿ....ನಾನೊಬ್ಬನೇ ನಡೆಯುತ್ತಾ ಹೊರಟದ್ದಾಗ ನೀವು ಎಲ್ಲಿಂದಲೋ ಕೂಗುವದು ಕೇಳಿಸಿತು. ನಾನು ಓಡುತ್ತ ಹೋಗಿ ನೋಡಿದರೆ ದೊಡ್ಡ ದೊಡ್ಡ ಕೋರೆದಾಡೆಗಳ ಅಕರಾಳ ವಿಕರಾಳ ಜಂತುವೊಂದು ನಿಮ್ಮ ಮೇಲೆ ಬೀಳಲು ಬರುತ್ತಿದ್ದುದು ಕಾಣಿಸಿತು. ನಿಮ್ಮನ್ನುಳಿಸಿಕೊಳ್ಳಲು ನಾನು ಮುಂದಾದೆ. ಅಷ್ಟರಲ್ಲಿ ಆ ಜಂತು ಥಟ್ಟನೆ ಜಿಗಿದು ನನ್ನನ್ನೇ ಹಿಡಿದುಕೊಂಡಿತು. ನೀವು ಕೂಗಿ ಎಚ್ಚರವಪ್ಪಿ ಬಿದ್ದಿರಿ. ಕನಸು ಅಲ್ಲಿಗೆ ಮುಗಿದು ನಾನು ಎಚ್ಚತ್ತುಕೊಂಡೆ."

# ೧೪

ಮೊದಲೇ ಗೊತ್ತುಪಡಿಸಿದ ಮೇರೆಗೆ ಭಾನುವಾರ ಬೆಳಿಗ್ಗೆ ಸಬ್ ಇನ್ಸಪೆಕ್ಟರ್ ಮುಧೋಳರು ವಧುವನ್ನು ನೋಡಲು ಮಧ್ವರಾಯರಲ್ಲಿಗೆ ಬಂದರು. ವೀರಣ್ಣನೂ ಅವರೊಡನೆ ಬಂದಿದ್ದ.

ಮುಧೋಳರು ದಷ್ಟಪುಷ್ಟ ಮೈಕಟ್ಟಿನ, ಎತ್ತರದ ನಿಲುವಿನ ಆಳು. ಪೋಲೀಸು ಇಲಾಖೆಗೆ ಎಲ್ಲ ರೀತಿಯಿಂದಲೂ ಸರಿಹೋಗುವಂಥ ಆಸಾಮಿ. ದೇಹದಾರ್ಢ್ಯಕ್ಕೆ ಹೊಂದಿಕೆಯಾಗುವಂಥ ಮೀಸೆಯೂ ಇತ್ತು ಮುಖದ ಮೇಲೆ. ಉಕ್ಕಿನ ತೀಕ್ಷ್ಣತೆಯನ್ನು ಪ್ರದರ್ಶಿಸುವ ಉಗ್ರ ದೃಷ್ಟಿ. ದಪ್ಪನೆಯ ಹುಬ್ಬು, ಬಿಗಿದ ತುಟಿ. ಮಧ್ವರಾಯರಿಗೂ ರಾಮಚಂದ್ರನಿಗೂ ನಮಸ್ಕಾರ ಮಾಡುವಾಗ ಅವರು ಮುಗುಳ್ನಗಲು ಯತ್ನಿಸಿದರಾದರೂ ಅದರಲ್ಲಿ ಸ್ವಾಭಾವಿಕತೆ ಮೂಡಲಿಲ್ಲ.

ಮುಧೋಳರಿಗೆ ಬಹಳವಾದರೆ ಮೂವತ್ತೈದು ವರ್ಷ ವಯಸ್ಸಿರ ಬಹುದೆಂದು ವೀರಣ್ಣ ಹೇಳಿದುದರಲ್ಲಿ ಸತ್ಯಾಂಶವಿರಲಿಲ್ಲವೆಂಬುದು ರಾಮ ಚಂದ್ರನಿಗೆ ಒಡನೆಯೆ ಕಂಡುಬಂದಿತು. ಅವರು ನಲವತ್ತೈದರ ಗಡಿಯನ್ನು ದಾಟಿದವರೆಂಬುದನ್ನು ಅವರ ಮುಖಮುದ್ರೆ ಸಾರಿಹೇಳುತ್ತಿತ್ತು. ತಂದೆ ಮಕ್ಕಳಿಬ್ಬರಿಗೂ ಆ ವಿಷಯವಾಗಿ ಅಸಮಾಧಾನವಾಗದಿರಲಿಲ್ಲ.

ತಮ್ಮ ಅಸಮಾಧಾನವನ್ನು ಮುಖದಲ್ಲಿ ವ್ಯಕ್ತಗೊಳಿಸದೆ ಮುಧೋಳರನ್ನು ಆದರದಿಂದ ಬರಮಾಡಿಕೊಂಡು ಕುಳ್ಳಿರಿಸಿದುದಾಯಿತು. ಆಪಾದಿತರ

ವಿಚಾರಣೆ ನಡೆಸುವಾಗಿನ ಠೀವಿಯಲ್ಲೇ ಅವರು ಕುಳಿತುಕೊಂಡು ಪಡಸಾಲೆ ಯಲ್ಲೆಲ್ಲ ದೃಷ್ಟಿ ತೂರಿದರು. ಪೋಲೀಸ್ ಇಲಾಖೆಯಲ್ಲಿ ಪಳಗಿದ ಅವರ ದೃಷ್ಟಿ ಅಲ್ಲಿನ ಪ್ರತಿಯೊಂದು ವ್ಯಕ್ತಿಯನ್ನೂ ವಸ್ತುವನ್ನೂ ತೀಕ್ಷ್ಣವಾಗಿ ಪರೀಕ್ಷಿಸತೊಡಗಿತು.

ಲೋಕಾಭಿರಾಮವಾಗಿ ಆ ಮಾತು ಈ ಮಾತು ನಡೆಯಿತು.

ಗೋಡೆಯ ಮೇಲಿದ್ದ ರಾಯರ ಪಟವನ್ನು ದಿಟ್ಟಿಸುತ್ತಾ ಮುಧೋಳ ರೆಂದರು :

" ನೀವು ಬಹಳ ಧಾರ್ಮಿಕ ಮನೋವೃತ್ತಿಯವರೆಂದು ಕಾಣುತ್ತದಲ್ಲ !"

" ಹೌದು ಸಾಹೇಬರೆ. ನಮ್ಮ ತಂದೆಯವರಿಗೆ ರಾಯರಲ್ಲಿ ಬಹಳ ಭಕ್ತಿ," ಎಂದ ರಾಮಚಂದ್ರ.

" ಗುಡ್. ವೆರಿ ಗುಡ್. ನಾನೂ ಕೂಡಾ ಧಾರ್ಮಿಕ ಮನೋವೃತ್ತಿ ಯವನೇ. ಎರಡು ಹೊತ್ತು ಪೂಜೆ ಮಾಡದಿದ್ದರೆ ಊಟವೇ ರುಚಿಸುವದಿಲ್ಲ ನನಗೆ. ಈಗ ಕಾಲ ಬಹಳ ಕೆಟ್ಟಿತು. ಧರ್ಮ, ಆಚಾರ ಯಾವದೂ ಉಳಿಯ ಲಿಲ್ಲ. ಕಾಲೇಜಿಗೆ ಹೋಗುವ ಹುಡುಗರಂತೂ...."

ಕುರ್ಚಿಯಲ್ಲಿ ಕುಳಿತಿದ್ದ ವೆಂಕಟೇಶ ಅಸ್ವಸ್ಥನಾಗಿ ಮುಖವನ್ನತ್ತ ತಿರುಗಿಸಿದ. ವೀರಣ್ಣನಿಗೂ ವಿಪಂಚನೆಯಾಗದಿರಲಿಲ್ಲ. ಮುಧೋಳರು ನೋಡಲು ಬಂದಿದ್ದ ವಧುವೂ ಕಾಲೇಜು ವಿದ್ಯಾರ್ಥಿನಿಯೇ....

ಕಾಲೇಜು ವಿದ್ಯಾರ್ಥಿಗಳ ಟೀಕೆಯನ್ನು ಮುಂದುವರೆಸದೆ ಮುಧೋಳರು ಮಧ್ವರಾಯರತ್ತ ತಿರುಗಿ ಹೇಳಿದರು :

" ಅಂತೂ ನಿಮ್ಮಂಥ ಒಬ್ಬಿಬ್ಬರಾದರೂ ಇನ್ನೂ ಇರುವದರಿಂದ ಬ್ರಾಹ್ಮಣ್ಯ ಬದುಕಿಕೊಂಡಿದೆ. ಇಲ್ಲವಾದರೆ ದೇಶದಲ್ಲೆಲ್ಲಾ ವರ್ಣಸಂಕರವಾಗಿ ಹೋಗುತ್ತಿತ್ತು."

ಸ್ವಭಾವತಃ ಮಿತಭಾಷಿಯಾದ ಮಧ್ವರಾಯರು ಹೆಚ್ಚು ಮಾತನಾಡದೆ, " ಕಲಿಕಾಲ ಸಾಹೇಬರೆ, ಕಲಿಕಾಲ," ಎಂದಿಷ್ಟೆ ನುಡಿದು ಸುಮ್ಮನಾದರು.

ಒಳಗಡೆ, ಜಾನಕಿಯ ರೇಶಿಮೆ ಸೀರೆಯೊಂದನ್ನುಟ್ಟುಕೊಂಡು ಶಾಂತಾ, ಮುಖತೋರಿಸಲು ಸಿದ್ಧಳಾಗುತ್ತಿದ್ದಳು. ಆ ಸಿದ್ಧತೆಯಲ್ಲಿ ಅವಳಿಗೆ ಕೊಂಚವೂ ಆಸಕ್ತಿಯಿರಲಿಲ್ಲ. ಮನೆಯವರ ಮಾತನ್ನು ವಿರೋಧಿಸಲಿಷ್ಟವಿಲ್ಲದೆ " ತೋರಿ

ಸುವ ನಾಟಕದಲ್ಲಿ" ಭಾಗವಹಿಸಬೇಕಾಗಿದ್ದಿತು. ತನ್ನ ಪಾಲಿಗೆ ಬಂದ ಕೆಲಸವನ್ನು ಯಾಂತ್ರಿಕವಾಗಿ ನೆರವೇರಿಸಲು ಅವಳು ಸಿದ್ಧಳಾಗುತ್ತಿದ್ದಳು.

ಐದಾರು ನಿಮಿಷಗಳ ತರುವಾಯ ರಾಮಣ್ಣ ಒಳಗಡೆ ಬಂದು ತಂಗಿಯನ್ನು ದಿಟ್ಟಿಸುತ್ತ, "ಎಲ್ಲಾ ತಯಾರಾಯಿತೇ?" ಎಂದು ಕೇಳಿದ.

"ಉಪ್ಪಿಟ್ಟು ಆಗಿದೆ. ಇನ್ನು ಚಹಾ ಆಗಬೇಕು."

"ಅಲ್ಲ....ನಿನ್ನ ತಯಾರಿ ಆಯಿತೇ ಅಂದೆ...."

"ನನ್ನದೇನು ತಯಾರಿ? ಆಗಲೇ ಮುಗಿಯಿತು."

"ಉಪ್ಪಿಟ್ಟು ತಗೊಂಡು ಬಾ ಹಾಗಾದರೆ," ಎಂದು ಹೇಳಿ ರಾಮಚಂದ್ರ ಪಡಸಾಲೆಗೆ ಹಿಂದಿರುಗಿದ.

ತಟ್ಟೆಯೊಂದರಲ್ಲಿ ಹಣ್ಣುಗಳನ್ನು ಉಪ್ಪಿಟ್ಟಿನ ಪ್ಲೇಟುಗಳನ್ನು ಇಟ್ಟು ಕೊಂಡು ಅವಳು ಪಡಸಾಲೆಗೆ ಅಡಿಯಿರಿಸುತ್ತಲೂ ಮುಧೋಳರ ತೀಕ್ಷ್ಣದೃಷ್ಟಿ ಮಿಂಚಿನಂತೆ ಅವಳ ಮೇಲೆಲ್ಲ ಹರಿದಾಡಿತು. ತನ್ನ ದೇಹದ ಮೇಲೆ ಸರ್ಪ ವೊಂದು ಸುಳಿದು ಹೋದಂತೆ ಭಾಸವಾಗಿ ಅವಳಿಗೆ ಕೊಂಚ ಭಯವಾಯಿತು. ಮತ್ತೆ ಅವಳು ತನ್ನನ್ನು ಸಾವರಿಸಿಕೊಂಡು ಮೆಲ್ಲಗೆ ಹೆಜ್ಜೆಯಿಡುತ್ತಾ ಮುಂದೆ ಹೋಗಿ ಮೇಜಿನ ಮೇಲೆ ತಟ್ಟೆಯನ್ನಿಟ್ಟು ಕೊಂಚ ದೂರ ಸರಿದು ನಿಂತಳು.

"ಕೂಡ್ರವ್ವಾ ತಂಗಿ," ಎಂದು ವೀರಣ್ಣ ಹೇಳುತ್ತಿದ್ದ ಹಾಗೆಯೆ ಮುಧೋಳರು ಕೃತಕ ನಗೆ ಬೀರುತ್ತ ನುಡಿದರು: "ಕೂಡ್ರಿ, ಕೂಡ್ರಿ. ಅಲ್ಲಿ ಕೂಡ್ರಿ."

ಈ ದಪ್ಪ ಮೀಸೆಯ ಒರಟು ಆಸಾಮಿಯೆದುರಿಗೆ ಕೊಂಚವೂ ಸಂಕೋಚ ವಾಗಲಿಲ್ಲ ಶಾಂತಾಗೆ. ಮನಸ್ಸಿನಲ್ಲಿಯೆ ನಗುತ್ತಾ ಅವಳು ಎದುರಿನ ಕುರ್ಚಿಯಲ್ಲಿ ನೀಟಾಗಿ ಕುಳಿತುಕೊಂಡಳು. ಆ ಮೀಸೆಯನ್ನು ಕಂಡು ಬಲು ಮೋಜೆನ್ನಿಸಿತ್ತು ಅವಳಿಗೆ. ಆಗ ನಡೆದಿದ್ದುದು ನಿಜಕ್ಕೂ ಒಂದು ನಾಟಕವೆಂದೂ ಆ ಮೀಸೆಯ ಆಸಾಮಿ ಆ ನಾಟಕದಲ್ಲಿ ಮುಖ್ಯ ಪಾತ್ರಧಾರಿಯೆಂದೂ ಅವಳಿಗೆನ್ನಿಸಿತು.

"ಹಣ್ಣು ತಗೊಳ್ಳಿರಿ," ಎಂದರು ಮಧ್ವರಾಯರು.

ಬಾಳೆಹಣ್ಣಿನ ಸಿಪ್ಪೆಯನ್ನು ತೆಗೆದೆಸೆದು ಇಡಿಯ ಹಣ್ಣನ್ನೆಲ್ಲ ಒಂದೇಸಲ ಬಾಯಿಗೆ ಬಿಟ್ಟು ನುಂಗಿ ಮುಧೋಳರು ವೀರಣ್ಣನನ್ನು ಕುರಿತು ನುಡಿದರು:

"ಏನಾದರೂ ಪ್ರಶ್ನೆ ಕೇಳುವದಿದ್ದರೆ ಕೇಳಿಬಿಡಿರಿ."

" ನೀವೇ ಕೇಳಿರಲ್ಲ ಸಾಹೇಬರೆ."

ಮುಧೋಳರು ಅಕಾರಣವಾಗಿ ನಗುತ್ತ, " ಛೆ. ನಾವು ಪ್ರಶ್ನೆ ಕೇಳುವದು ಆರೋಪಿಗಳನ್ನು ಮಾತ್ರ. ದಿನಾಲೂ ಅವೇ ಪ್ರಶ್ನೆ ಕೇಳಿ ಕೇಳಿ ರೂಢಿಯಾಗಿದೆ. ಈಗಲೂ ಅವೇ ಬಾಯಲ್ಲಿ ಬರಬಾರದಲ್ಲ!" ಎಂದು ನುಡಿದು ಶಾಂತಳನ್ನು ದಿಟ್ಟಿಸುತ್ತಾ ಮತ್ತೆ ಗಟ್ಟಿಯಾಗಿ ನಕ್ಕರು. ಸೌಜನ್ಯಕ್ಕಾಗಿ ಮಧ್ವರಾಯರೂ ಮುಗುಳ್ನಗೆ ಬೀರಬೇಕಾಯಿತು. ವೆಂಕಟೇಶನೂ ನಕ್ಕ. ಶಾಂತಳಿಗೂ ನಗೆ ಬಂದಿತು. ಆದರದು ಬೇರೆ ಕಾರಣದಿಂದ. ಮುಧೋಳರ ಮೀಸೆಯ ಠೀವಿಯನ್ನು ನಿರುಕಿಸಿದ ಹಾಗೆಲ್ಲ ಅವಳಿಗೆ ಮತ್ತೆ ಮತ್ತೆ ನಗೆಯುಕ್ಕಿಬರುತ್ತಿತ್ತು. ತನ್ನ ಪರೀಕ್ಷೆ ನಡೆದಾಗ ತಾನು ನಗುವುದು ಸರಿಯಲ್ಲವೆಂದು ಅದುವರೆಗೂ ಅದನ್ನು ಹತ್ತಿಕ್ಕಿಕೊಂಡಿದ್ದಳು. ಈಗ ಎಲ್ಲರೂ ನಗುತ್ತಲೂ ತಾನೂ ನಕ್ಕುಬಿಟ್ಟಳು.

ಅವಳು ನಕ್ಕದ್ದನ್ನು ಕಂಡು ಮುಧೋಳರು ತಲೆ ಅಲ್ಲಾಡಿಸಿ ವೀರಣ್ಣನನ್ನು ಕುರಿತು ಹೇಳಿದರು :

" ಅಡ್ಡಿಯಿಲ್ಲಪ್ಪ. ವಧುವಿಗೆ ಸೆನ್ಸ್ ಆಫ್ ಹ್ಯೂಮರ್ ಇದೆ."

" ಹಿ ಹಿ ಹ್ಹಿ," ಎಂದ ವೀರಣ್ಣ.

" ನನ್ನ ತಂಗಿ ಚೆನ್ನಾಗಿ ಓದಿಕೊಂಡಿದ್ದಾಳೆ ಸಾಹೇಬರೆ – ಕವಿತೆಗಳನ್ನು ಬರೆಯುತ್ತಾಳೆ," ಎಂದ ವೆಂಕಟೇಶ.

" ಕವಿತೆ ಬರೆಯುತ್ತಾಳೆ! ಅಬ್ಬಬ್ಬ!" ಎಂದರು ಮುಧೋಳರು.

ವೆಂಕಟೇಶನಾಡಿದ ಮಾತು ರಾಮಚಂದ್ರನಿಗೆ ಸರಿಬರಲಿಲ್ಲ. ಫೌಜದಾರರು ಹಳೆಯ ಮನೋವೃತ್ತಿಯವರು. ಅವರೆದುರಿಗೆ ಇಂಥ ಸಂಗತಿಗಳನ್ನು ತಿಳಿಸಬಾರದಾಗಿತ್ತು – ಎಂದು ಆತ ಮನಸ್ಸಿನಲ್ಲೇ ಹೇಳಿಕೊಂಡು ಅವಸರದಿಂದ ದನಿಯೆತ್ತಿ ನುಡಿದ :

" ಎಲ್ಲಿಯ ಕವಿತೆ ಬಿಡಿ ಸಾಹೇಬರೆ. ಏನೋ ಯಾವಾಗಲೋ ಒಂದೆರಡು ಬರೆದಿದ್ದಳು. ಈಗ ಆ ಹವ್ಯಾಸ ಏನೂ ಇಲ್ಲ."

" ಮನೆಗೆಲಸ ಎಲ್ಲಾ ಬರುತ್ತದೆ ಹೌದಲ್ಲೋ? ಈಗಿನ ಕಾಲದ ಹುಡುಗಿಯರು....ಅದರಲ್ಲೂ ಕಾಲೇಜಿಗೆ ಹೋಗುವವರು....ಅದಕ್ಕೆ ಕೇಳಿದೆ."

" ಕಾಲೇಜಿಗೆ ಹೋದರೇನಾಯಿತು ಸಾಹೇಬರೆ? ನಮ್ಮ ಶಾಂತಿಗೆ

ಚಿಕ್ಕಂದಿನಿಂದಲೂ ಮನೇ ಕೆಲಸ ಅಂದರೆ ಬಹಳ ಪ್ರೀತಿ. ಈಗಲೂ ಎರಡೂ ವೇಳೆ ಅಡಿಗೆಯಲ್ಲಿ ನಮ್ಮ ಕುಟುಂಬಕ್ಕೆ ನೆರವಾಗುತ್ತಾಳೆ," ಎಂದ ರಾಮಚಂದ್ರ.

"ಹಾಗಾದರೆ ಅಡ್ಡಿಯಿಲ್ಲ. ನಮ್ಮ ಮನೆಯಲ್ಲಿ ಎಲ್ಲಾ ಕೆಲಸ ನೋಡಿ ಕೊಳ್ಳಬೇಕಾಗುವದಲ್ಲ. ಬೇರೆ ಹೆಂಗಸರೂ ಇಲ್ಲ ನಮ್ಮಲ್ಲಿ...."

"ಚಹ ತಗೊಂಡು ಬಾರವ್ವಾ ಶಾಂತೀ," ಎಂದರು ಮಧ್ವರಾಯರು.

ಚಹ ಸೇವಿಸುತ್ತಿದ್ದ ಹಾಗೆ ವೀರಣ್ಣನೆಂದ:

"ಹಾಡು ಗೀಡು ಕೇಳುತ್ತೀರಾ ಸಾಹೇಬರೆ?"

"ಹಾಡು ತೆಗೆದುಕೊಂಡು ನಾನೇನು ಮಾಡಲಿ? ಅಂಥದಕ್ಕೆಲ್ಲ ನನಗೆ ಪುರಸತ್ತಾದರೂ ಎಲ್ಲಿರುತ್ತದೆ? ಮುಖ್ಯ ಮನೆಗೆಲಸ ಮಾಡಲು ಬಂದರೆ ಆಯಿತು," ಎಂದರು ಮುಧೋಳರು.

ಎಲ್ಲ ಮುಗಿದು ಅವರು ಹೊರಟುಹೋದ ಬಳಿಕ ರಾಮಣ್ಣ ತಂಗಿಯನ್ನು ಕುರಿತು ಕೇಳಿದ:

"ಏನು ಶಾಂತೀ, ಏನನ್ನುತ್ತೀ? ಸಾಹೇಬರು ಹ್ಯಾಗೆ ಕಾಣಿಸಿದರು?"

ಉಕ್ಕಿ ಬರುತ್ತಿದ್ದ ನಗುವನ್ನು ಬಿಗಿಹಿಡಿಯುತ್ತ ಶಾಂತಳೆಂದಳು:

"ಹ್ಯಾಗಂದರೆ? ಸಾಹೇಬರ ಹಾಗೇ."

ಮಧ್ವರಾಯರು ನಸುನಕ್ಕು ನುಡಿದರು:

"ಪೋಲೀಸ್ ಖಾತೆಯಲ್ಲಿರುವರೆಂದ ಮೇಲೆ ಸ್ವಲ್ಪ ಒರಟಾಗಿ ಕಾಣುವದು ಸ್ವಾಭಾವಿಕ ಶಾಂತೂ. ಆ ಖಾತೆಯಲ್ಲಿ ಕೆಲಸ ಮಾಡಿದ್ದರೆ ನಾನೂ ಅವರಂತೇ ಆಗುತ್ತಿದ್ದೆ."

"ವಯಸ್ಸು ಬಹಳವಾಗಿದೆ," ಎಂದ ವೆಂಕಟೇಶ.

ರಾಮಣ್ಣ ಆ ಮಾತನ್ನು ಅಲ್ಲಗಳೆಯಲಿಲ್ಲವಾದರೂ,

"ಸ್ವಲ್ಪ ಹೆಚ್ಚು ಅನ್ನುವದೇನೋ ನಿಜವೇ. ಆದರೂ ಇನ್ನೂ ಗಟ್ಟಿ ಮುಟ್ಟಾಗೇ ಇದಾರಲ್ಲ!" ಎಂದು ನುಡಿದು ತಂದೆಯ ಅಭಿಪ್ರಾಯವನ್ನರಿತು ಕೊಳ್ಳಲೆಂದು ಅವರತ್ತ ದೃಷ್ಟಿ ತಿರುಗಿಸಿದ.

ಮುಧೋಳರ ವಯಸ್ಸಿನ ವಿಚಾರವಾಗಿ ಮಧ್ವರಾಯರು ಯಾವ ಅಭಿ ಪ್ರಾಯವನ್ನೂ ವ್ಯಕ್ತಗೊಳಿಸಲಿಲ್ಲ. ಅವರ ದೃಷ್ಟಿಯಲ್ಲಿ ಮಗಳ ಮನೋಗತವೇ ಮಹತ್ವದ್ದಾಗಿತ್ತು. ಅವಳ ಇಚ್ಛೆಗೆ ವ್ಯತಿರಿಕ್ತವಾಗಿ ವರ್ತಿಸುವ ಅಪೇಕ್ಷೆ ಅವರಿ

ಗಿರಲಿಲ್ಲ. ಫೌಜದಾರರಿಗೆ ವಯಸ್ಸು ಹೆಚ್ಚು, ಶಾಂತಿಗೆ ಅವರು ಅನುರೂಪ ವರ ನಾಗಲಾರರು ಎಂದು ಮಧ್ವರಾಯರಿಗೆ ಕಂಡು ಬಂದಿದ್ದಿತಾದರೂ ಶಾಂತಿಯ ಪ್ರತಿಕ್ರಿಯೆಯೇನೆಂಬುದನ್ನರಿತುಕೊಳ್ಳದೆ ಅವರು ಬಾಯಿ ಬಿಡುವಂತಿರಲಿಲ್ಲ. ಫೌಜದಾರರನ್ನು ಕಂಡು ರಾಮಣ್ಣನಿಗೂ ಪೂರ್ಣವಾಗಿ ತೃಪ್ತಿಯಾಗಿರಲಿಲ್ಲ ವಾದರೂ ವರಗಳನ್ನು ಹುಡುಕಿ ನಿರಾಶನಾಗಿದ್ದ ಅವನಿಗೆ ಈ ಸಂಬಂಧ ಇದ್ದುದರಲ್ಲೇ ಒಳ್ಳೆಯದೆಂದು ತೋರುತ್ತಿತ್ತು. ಲಿಂಗಪ್ಪ ಮತ್ತು ಗುರುಬಸಪ್ಪರ ಗುಲಾಮಗಿರಿಯಲ್ಲಿ ಸಂತ್ರಸ್ತಗೊಂಡಿದ್ದ ಅವನ ಮನಸ್ಸು ಫೌಜದಾರರ ಸಂಬಂಧದಲ್ಲಿ ಸಮಾಧಾನ ಪಡೆಯಲಾಶಿಸುತ್ತಿತ್ತು.

"ಇಂಥಾ ಚಲೋ ಸ್ಥಳ ಇನ್ನೆಲ್ಲೂ ಸಿಕ್ಕಲಿಕ್ಕಿಲ್ಲ. ನಾವು ಅನುಮಾನ ಮಾಡದೆ ಒಪ್ಪಿಕೊಂಡು ಬಿಡಬೇಕು," ಎಂದ ರಾಮಚಂದ್ರ. "ಏನನ್ನುತ್ತೀ ಶಾಂತಾ? ಬಾಯಿಬಿಟ್ಟು ಹೇಳು."

ಒಂದೆರಡು ನಿಮಿಷ ಮೌನವಾಗಿ ಕುಳಿತಿದ್ದು ಅನಂತರ ಮೆಲ್ಲನೆ ಎದ್ದು ತನ್ನ ಕೊಟಡಿಯ ಕಡೆ ಹೋಗುತ್ತ ಅವಳು ಹೇಳಿದಳು:

"ಇಷರನ್ನು ಮದುವೆಯಾಗಲು ನನಗಂತೂ ಮನಸ್ಸಿಲ್ಲ ಅಣ್ಣಾ. ನನ್ನ ಮದುವೆಯ ಅವಸರವನ್ನೂ ಮಾಡಬೇಡಿರಿ. ಈ ಸಲದ ಪರೀಕ್ಷೆಯಾದರೂ ಮುಗಿಯಲಿ."

ತಂಗಿಯ ಮುಖದಿಂದ ಇಂಥ ಮಾತು ಬಂದೀತೆಂದು ರಾಮಚಂದ್ರ ನಿರೀಕ್ಷಿಸಿಕೊಂಡಿರಲಿಲ್ಲ. ನಸುಕೋಪ ಬೆರೆತ ದನಿಯಲ್ಲಿ ಅವನೆಂದ:

"ಕಾಲೇಜಿಗೆ ಹೋಗಹತ್ತಿದಂದಿನಿಂದ ನೀ ಬಹಳ ದಿಟ್ಟೆಯಾಗಿ ಬಿಟ್ಟಿ ಶಾಂತೀ. ನಮ್ಮ ಮಾತೆಂದರೆ ನಿನಗೆ ಲಕ್ಷ್ಯವಿಲ್ಲದಂತಾಯ್ತು. ವಯಸ್ಸು ಸ್ವಲ್ಪ ಹೆಚ್ಚು ಅನ್ನುವದನ್ನು ಬಿಟ್ಟರೆ ಫೌಜದಾರರಲ್ಲಿ ಮತ್ತೇನು ಕುಂದು ಕಂಡೆ?"

ಶಾಂತಾ ಮರು ಮಾತನಾಡದೆ ತನ್ನ ಕೊಟಡಿಗೆ ಹೊರಟು ನಡೆದಳು. ಮುಂದೆ ಆ ವಿಚಾರ ಚರ್ಚಿಸಲು ಮಧ್ವರಾಯರಿಗೂ ಇಷ್ಟವಿರಲಿಲ್ಲ. ಅವರು ಭಗವದ್ಗೀತೆಯನ್ನು ಕೈಗೆತ್ತಿಕೊಂಡು ಕುಳಿತುಬಿಟ್ಟರು. ರಾಮಚಂದ್ರ ಚಡಪಡಿಸುತ್ತ ಹೊರಗಡೆ ಹೊರಟುಹೋದ.

ಜಾನಕಿ, ನಾದಿನಿಯ ಬಳಿ ಬಂದು ವಾತ್ಸಲ್ಯದಿಂದ ಆವಳ ತಲೆಯನ್ನು ನೇವರಿಸುತ್ತ ಹೇಳಿದಳು:

"ಹೀಗ್ಯಾಕೆ ಮಾಡುತೀಯವ್ವಾ ಶಾಂತೀ? ಈ ಸಂಬಂಧ ಬಹಳ ಚಲೋದಿದ್ದ ಹಾಗೆ ಕಾಣುತದೆ. ಒಪ್ಪಿಕೊಂಡು ಬಿಡವ್ವಾ –"

ಶಾಂತಾಗೆ ಅಳುವ ಹಾಗಾಯಿತು. ಅತ್ತಿಗೆಯೆದುರಿಗೆ ತನ್ನ ಅಂತರಂಗವನ್ನೆಲ್ಲ ಬಿಚ್ಚಿ, ಅವಳನ್ನು ತಬ್ಬಿಕೊಂಡು ಅಳುವ ಹಾಗಾಯಿತು. ಆದರೂ ಅವಳು ದುಃಖವನ್ನು ಹತ್ತಿಕ್ಕಿಕೊಂಡು ಗಂಭೀರವಾಗಿಯೆ ಹೇಳಿದಳು :

"ಆ ಸಾಹೇಬರನ್ನು ನಾನು ಒಪ್ಪಬೇಕು ಅಂತೀಯಾ ಅತ್ತಿಗೇ?"

"ಒಪ್ಪಬೇಕವ್ವಾ. ಒಪ್ಪಬೇಕು. ಅಂಥವರ ಸಂಬಂಧ ಎಲ್ಲಾರಿಗೂ ಸಿಗುತ್ತದೇನೇ?"

"ನಿನಗೆ ತಿಳಿಯುವದಿಲ್ಲ ಅತ್ತಿಗೇ. ಏನೇನೂ ತಿಳಿಯುವದಿಲ್ಲ," ಎಂದಿಷ್ಟೆ ನುಡಿದು ಲೀಲಳ ಮನೆಗೆ ಹೊರಟಳು ಶಾಂತಾ.

ಕುಮುದಳ ಜೊತೆಗೆ ರೇಡಿಯೊ ಸಂಗೀತವನ್ನಾಲಿಸುತ್ತ ಕುಳಿತಿದ್ದಳು ಲೀಲಾ. ಶಾಂತಳ ಇಳಿದ ಮುಖವನ್ನು ಕಂಡು ಅವಳು ಕಸಿಕರದಿಂದ ಕೇಳಿದಳು :

"ಮುಗಿಯಿತೇನೇ?"

"ಮುಗಿಯಿತು," ಎಂದಳು ಶಾಂತಾ.

ಲೀಲಾ ಮತ್ತೆ ಪ್ರಶ್ನೆ ಕೇಳಲಿಲ್ಲ. ಶಾಂತಳನ್ನು ತನ್ನ ಪಕ್ಕದಲ್ಲಿ ಕೂಡಿಸಿಕೊಂಡು ಸ್ನೇಹದಿಂದ ಅವಳ ಭುಜದ ಮೇಲೆ ಕೈಹಾಕಿ ಸಂತೈಸುವ ಸ್ವರದಲ್ಲಿ ನುಡಿದಳು :

"ಅಂತೂ ಒಮ್ಮೆ ನೋಡುವ ಶಾಸ್ತ್ರ ಮುಗಿದುಹೋಯಿತು ಬಿಡು. ಆ ಫೌಜದಾರರನ್ನ ನಾನೂ ನೋಡಿದ್ದೇನೆ. ಒಮ್ಮೆ ನಮ್ಮ ತಂದೆಯ ಹತ್ತಿರ ಬಂದಿದ್ದರು. ನಿನಗೂ ಅವರಿಗೂ ಯಾವವರಲ್ಲೂ ಹೊಂದಿಕೆಯಾಗುವಂತಿಲ್ಲ."

ಕುಮುದಾ ಕುತೂಹಲದಿಂದ ಕೇಳಿದಳು :

"ಹ್ಯಾಗಿದ್ದಾರೇ ಲೀಲಾ, ಅವರು?"

"ಇದ್ದಾರೆ ಫೌಜದಾರರ ಹಾಗೇ. ಶಾಂತಿಯಂಥ ಹುಡುಗಿಯ ತಂದೆಯಾಗುವ ವಯಸ್ಸಿನವರು."

"ಇಂಥವರು ತಮ್ಮ ವಯಸ್ಸಿನ ಒಬ್ಬ ವಿಧವೆಯನ್ನೇಕೆ ಮಾಡಿಕೊಳ್ಳಬಾರದೋ?" ಎಂದಳು ಕುಮುದ.

"ಎಲ್ಲಿದ್ದೀ ಕುಮುದಾ ನೀನು? ಯಾವ ಸಮಾಜದ ಮಾತಾಡುತ್ತೀ? ನಮ್ಮ ಜನರಲ್ಲಿ ವಿಧವಾವಿವಾಹ ಇನ್ನೂ ಐವತ್ತು ವರ್ಷ ಸಾಧ್ಯವಾಗದೆಂದು ನನಗನ್ನಿಸುತ್ತದೆ."

"ವಿಧವೆಯರನ್ನು ಮದುವೆಯಾಗುವ ಮನಸ್ಸಿಲ್ಲವಾದರೆ ಸುಮ್ಮನಾದರೂ ಇರಬೇಕು ಈ ಜನರು. ಹದಿನೇಳು ವರ್ಷದ ಕುಮಾರಿಯರ ಹವ್ಯಾಸ ಯಾಕೆ ಇವರಿಗೆ?"

"ಯಾಕೆ ಅಂದರೇನು ಹೇಳಬೇಕು? ಬೇಕು ಅನ್ನಿಸುತವೆ ಅದಕ್ಕೆ," ಎಂದಳು ಲೀಲಾ. "ನಿಮ್ಮ ತಂದೆಯವರೇನನ್ನುತಾರೆ ಶಾಂತೀ?"

"ಅವರೇನು ಅನ್ನಲಿಲ್ಲ. ರಾಮಣ್ಣ ಮಾತ್ರ ನನ್ನನ್ನು ಅವರಿಗೇ ಕೊಡಬೇಕೆಂತ ನಿಶ್ಚಯ ಮಾಡಿದಂತೆ ಕಾಣುತದೆ – ಅತ್ತಿಗೆಗೂ ಒಪ್ಪಿಗೆಯಾಗಿದೆ. ನಿನಗೆ ಗೊತ್ತಲ್ಲಾ, ನಮ್ಮ ತಂದೆ ನನ್ನ ಮನಸ್ಸಿನ ವಿರುದ್ಧ ಏನೂ ಮಾಡುವದಿಲ್ಲ. ಆದರೆ...."

"ಮುಂದೆ ನೀನೇನು ಮಾಡಬೇಕೆನ್ನುತ್ತೀ?"

"ಏನು ಮಾಡಬೇಕೋ ಯಾವದೂ ತಿಳಿಯದಂತಾಗಿದೆ ಕುಮುದಾ. ಇವರನ್ನು ಆಗಲು ಮನಸ್ಸಿಲ್ಲ ಅಂತ ರಾಮಣ್ಣನಿಗೇನೋ ಸ್ಪಷ್ಟವಾಗಿ ಹೇಳಿಬಿಟ್ಟೆ. ಆದರೆ ಅವನೇನೂ ಇಷ್ಟಕ್ಕೆ ಬಿಡುವವನಲ್ಲ. ಅಂತೂ ಒಳ್ಳೆ ಪೀಕಲಾಟವೇ ಬಂತು."

"ಇಂಥ ಪ್ರಸಂಗ ಎಲ್ಲರಿಗೂ ಬರುತ್ತವೆ ಶಾಂತಾ. ಧೈರ್ಯವಿದ್ದವರು ತಮ್ಮ ಮನಸ್ಸಿನಂತೆ ನಡೆಯುತ್ತಾರೆ. ಧೈರ್ಯವಿಲ್ಲದವರು ಪಣೆಬರಹ ಅಂದುಕೊಂಡು ಹಿರಿಯರ ಇಚ್ಛೆಗೆ ತಲೆಬಾಗುತ್ತಾರೆ."

"ನನಗೆ ಧೈರ್ಯವಿಲ್ಲ ಅಂತ ನಿನ್ನ ಕಲ್ಪನೆ ಅಲ್ಲವೇ?"

"ನೀನೇ ನಿನ್ನನ್ನು ಕೇಳಿಕೋ."

ಕುಮುದಳ ಮಾತೂ ನಿಜ, ಎನ್ನಿಸದಿರಲಿಲ್ಲ ಶಾಂತಾಗೆ. ತನಗೆ ಧೈರ್ಯ ಕಡಮೆ. ಆ ಮಾತನ್ನು ನಿರಾಕರಿಸುವಂತಿಲ್ಲ. ಲೀಲಾ ಕುಮುದರಲ್ಲಿರುವ ದಿಟ್ಟತನ ತನ್ನಲ್ಲಿಲ್ಲ. ಅಂತೆಯೆ, ಕಾಲೇಜು ಜೀವನದ ಮೋಜನ್ನು ಸವಿಯುವುದಕ್ಕೂ ತಾನು ಅಸಮರ್ಥಳಾಗಿರುವುದು. ಸದಾನಂದನ ಬಗೆಗೆ ತನಗೆ ಪ್ರೀತಿ

ಯಿರುವುದು ನಿಜವಾದರೂ ಆ ಸಂಬಂಧವನ್ನು ಮದುವೆಯಲ್ಲಿ ಮುಗಿಸುವ ನಿರ್ಧಾರವೂ ತನಗಿಲ್ಲ. ಪ್ರಸಂಗಗಳ ಪ್ರವಾಹದಲ್ಲಿ ತೇಲುತ್ತ ಹೋಗುವುದೇ ತನ್ನ ಸ್ವಭಾವವೆಂದು ತೋರುತ್ತದೆ.

ಹಠಾತ್ತಾಗಿ ಲೀಲಾ ಹೇಳಿದಳು :

"ನಮ್ಮ ಶಾಂತಿ ಯಾರನ್ನು ಲವ್ ಮಾಡುತ್ತಾಳೆನ್ನುವದು ನಿನಗೆ ಗೊತ್ತೇ ಕುಮುದಾ ?"

"ಕಾಲೇಜಿನಲ್ಲಿ ಸುದ್ದಿ ಹರಡುತ್ತಿದೆಯಲ್ಲ ಈಗಾಗಲೆ !"

ಶಾಂತಳ ಎದೆ ಧಗಧಗನೆ ಹೊಡೆದುಕೊಳ್ಳತೊಡಗಿತು. ಅವಳು ಅರ್ಧ ಆನಂದದಿಂದಲೂ ಅರ್ಧ ಗಾಬರಿಯಿಂದಲೂ ಕೇಳಿದಳು :

"ಏನು ಸುದ್ದಿಯೇ ಅದು ?"

"ಏನೆಂದರೆ ! ನಿನ್ನದು ಇಂಟರ್‌ಕ್ಯಾಸ್ಟ್ ಮ್ಯಾರೇಜ್ ಆಗುವದೂ ಅಂತ...."

"ಮೊನ್ನೆ ಮೇರಿ ನನ್ನ ಕೇಳುತಿದ್ದಳು – ಇದು ನಿಜವೇ ಅಂತ...." ಎಂದಳು ಲೀಲಾ.

"ಅದಕ್ಕೂ ಬಹಳ ಧೈರ್ಯ ಬೇಕಲ್ಲವೇನೇ ?" ಎಂದಳು ಕುಮುದಾ.

"ಶಾಂತಿಯಲ್ಲಿ ಮುಖ್ಯವಾಗಿ ಅದೇ ಇಲ್ಲವಲ್ಲ...."

ಅವರು ಹಾಗೆ ಮಾತನಾಡಿದಂತೆ ಶಾಂತಳ ಮನಸ್ಸಿನಲ್ಲಿ ವಿಚಿತ್ರವಾದ ಛಲವೊಂದು ರೂಪುಗೊಳ್ಳತೊಡಗಿತು. ಇವರ ಹಾಗೆ ತಾನೂ ಧೈರ್ಯಸ್ಥಳಾಗ ಬೇಕು, ದಿಟ್ಟೆಯಾಗಬೇಕು, ಬಿಕ್ಕಟ್ಟಿನ ಪ್ರಸಂಗಗಳನ್ನು ಗಟ್ಟಿಗತನದಿಂದ ಎದುರಿಸಿ ಮುನ್ನಡೆಯಬೇಕು, ತನ್ನ ಬಾಳು ತನ್ನ ಕೈಯಲ್ಲಿದೆ, ತಾನೇ ಅದನ್ನು ತನ್ನ ಒಲವಿಗನುಸಾರವಾಗಿ ರೂಪಿಸಿಕೊಳ್ಳಬೇಕು – ಎಂದು ಅವಳಿಗೆನ್ನಿಸಿತು.

"ನನ್ನಲ್ಲಿ ಧೈರ್ಯ ಇದೆಯೋ ಇಲ್ಲವೋ ನೋಡೋಣ," ಎಂದಳಾಕೆ.

ಗೆಳತಿಯರು ವಿಸ್ಮಿತರಾಗಿ ಉದ್ಗಾರ ತೆಗೆದರು :

"ಓಹ್ಹೊ !"

ನಿಶ್ಚಲ ಸ್ವರದಲ್ಲಿ ಶಾಂತಾ ಹೇಳಿದಳು :

"ಇಂಟರ್ ಕ್ಯಾಸ್ಟ್ ಮ್ಯಾರೇಜ್ ಆಂದರಾದರೂ ಏನು ಮಹಾ ! ನನ್ನ ಮನಸ್ಸಿಗೆ ಬಂದರೆ ಹಾಗೇ ಮಾಡುತ್ತೇನೆ."

ಲೀಲಾ ಚಪ್ಪಾಳೆ ತಟ್ಟುತ್ತ ನುಡಿದಳು :

“ಶಾಬ್ಬಾಸ್! ಈಗ ನೀನು ಮಾಡರ್ನ್ ಆದಂತಾಯಿತು. ಇದ ಕ್ಕಂತಾರೆ ಸ್ಪಿರಿಟ್ ಅಂತ!”

ಅಂದು ಸಾಯಂಕಾಲ ರಾಮಚಂದ್ರ ಮತ್ತೆ ಫೌಜದಾರರ ಮಾತು ತೆಗೆದಾಗ ಶಾಂತಾ ನಿಶ್ಚಯದ ದನಿಯಲ್ಲಿ ಹೇಳಿದಳು :

“ಅವರ ಸುದ್ದಿಯನ್ನು ಇನ್ನೊಮ್ಮೆ ಎತ್ತಬ್ಯಾಡ ರಾಮಣ್ಣಾ. ನಾನು ಅವರನ್ನ ಮದುವೆಯಾಗುವದು ಸಾಧ್ಯವೇ ಇಲ್ಲ.”

ರಾಮಣ್ಣನ ಎದೆಗೆ ಬಲವಾದ ಆಘಾತವಾದಂತಾಯಿತು. ಈ ಮೊದಲು ಎಂದೂ ಅವಳು ಅವನೆದುರಿಗೆ ಈ ರೀತಿ ಮಾತನಾಡಿದವಳಲ್ಲ.

“ಶಾಂತಾ....ಶಾಂತಾ...” ಕ್ರೋಧ, ವಿಸ್ಮಯ ಬೆರೆತ ಸ್ವರದಲ್ಲಿ ಆತನೆಂದ

“ನಾನೇನು ಸಣ್ಣ ಹುಡುಗಿಯಲ್ಲ ರಾಮಣ್ಣಾ. ನನ್ನ ಮನಸಿಗೆ ವಿರುದ್ಧವಾಗಿ ನಾನು ಯಾರನ್ನೂ ಮದುವೆಯಾಗುವದಿಲ್ಲ. ತಿಳಿದುಕೊಂಡು ಬಿಡು.”

ಕೋಪದಿಂದಾಗಿ ರಾಮಚಂದ್ರನ ಬುದ್ಧಿ ಅವನ ಸ್ವಾಧೀನದಲ್ಲುಳಿಯಲಿಲ್ಲ. ಆತ ಕೂಗಿಕೊಂಡ :

“ಬೀದಿಯ ಬಸವಿ ಬೆಳೆದ ಹಾಗೆ ಬೆಳೆದು ನಿಂತಿದ್ದೀ....ಮದುವೆ ಯಾಗುವದಿಲ್ಲವಂತೆ. ಯಾರನ್ನಾದರೂ ನೋಡಿಕೊಂಡಿದ್ದೀಯೇನು ?”

ಮಧ್ವರಾಯರು ಕಿವಿಗಳ ಮೇಲೆ ಕೈಗಳನ್ನಿಟ್ಟುಕೊಂಡು “ಹರಿ ಹರೀ.... ಶಾಂತಂ....ಪಾಪಂ...ರಾಮಣ್ಣಾ, ಎಂಥ ಮಾತು...ಎಂಥ ಮಾತು!” ಎಂದರು.

“ಬಸವಿಯೇ ಆಗುತ್ತೇನೆ ಹಾಗಾದರೆ. ನೋಡಿಕೊಂಡೇ ಬಿಡುತ್ತೇನೆ ಯಾರನ್ನಾದರೂ!” ಎಂದು ಹೇಳಿಕೊಳ್ಳುತ್ತ ಕೋಟಡಿಗೆ ಹೋಗಿ ಹಾಸಿಗೆ ಯನ್ನುರುಳಿಸಿ ಬಿದ್ದುಕೊಂಡಳು ಶಾಂತಾ.

ದುಃಖ ಉಕ್ಕಿ ಉಕ್ಕಿ ಬರುತ್ತಿತ್ತು. ಕಂಬನಿಗಳ ಕಾರಂಜಿ ಪುಟ ನೆಗೆಯಲು ಕಾದಿತ್ತು. ಅದನ್ನು ಮರ್ದಿಸಿ ಅವಳು ತನ್ನಷ್ಟಕ್ಕೆ ತಾನೇ ಹೇಳಿ ಕೊಂಡಳು :

“ಇಲ್ಲ. ನಾನಿನ್ನು ಅಳುವದಿಲ್ಲ – ಎದೆಯನ್ನು ಗಟ್ಟಿ ಮಾಡುತ್ತೇನೆ. ಕಲ್ಲಿನಂತಾಗುತ್ತೇನೆ.”

## ೧೫

ಸದಾನಂದನ ಕೊಟಡಿಯಲ್ಲಿ "ಕಾವ್ಯಕೂಟ" ಸ್ಥಾಪಿತವಾಗಿ ಭಾನುವಾರಕ್ಕೊಮ್ಮೆ ತಪ್ಪದೆ ಸಭೆ ಸೇರಲಾರಂಭವಾಗಿದ್ದಿತು. ಕಾಲೇಜಿನ ಪ್ರಿನ್ಸಿಪಾಲರ ಅಧ್ಯಕ್ಷತೆಯಲ್ಲಿ ಆರಂಭೋತ್ಸವ ಬಲು ವಿಜೃಂಭಣೆಯಿಂದ ಜರಗಿದ್ದಿತು. ನಗರದಲ್ಲಿನ ತರುಣ ಕವಿಗಳೂ ಲೇಖಕರೂ ಪತ್ರಿಕೋದ್ಯಮಿಗಳೂ ಸೇರಿ ಇಪ್ಪತ್ತು ಇಪ್ಪತ್ತೈದು ಜನರು ಸದಸ್ಯರಾಗಿ ಲಭಿಸಿದ್ದರು. ಸಭೆಯ ಕಾರ್ಯಕಲಾಪಗಳ ವರ್ಣರಂಜಿತ ವರದಿಯೂ ಪತ್ರಿಕೆಗಳಲ್ಲಿ ಪ್ರಕಟವಾಗಿ ಕೂಟಕ್ಕೆ ಸಾಕಷ್ಟು ಪ್ರಸಿದ್ಧಿ ದೊರೆತಿತ್ತು. ಕಾರ್ಯದರ್ಶಿಯಾಗಿ ಚುನಾಯಿತನಾಗಿದ್ದ ನರಗುಂದ ತುಂಬ ಚಾಕಚಕ್ಯತೆಯಿಂದ ದುಡಿಯುತ್ತ ಕೂಟವನ್ನು ಜನಪ್ರಿಯಗೊಳಿಸಲು ಯತ್ನಿಸುತ್ತಿದ್ದ. ಪ್ರತಿ ವಾರವೂ ಯುವಕ ಕವಿಗಳು ಒಟ್ಟುಗೂಡಿ ತಮ್ಮ ತಮ್ಮ ಹೊಸ ರಚನೆಗಳನ್ನು ಓದುತ್ತಿದ್ದರು. ಕಾವ್ಯ ಮತ್ತು ಕಲೆಗಳ ವಿಚಾರವಾಗಿ ವಿದ್ವಾಂಸರ ಉಪನ್ಯಾಸಗಳನ್ನು ಏರ್ಪಡಿಸಲಾಗುತ್ತಿತ್ತು. ಶಾಂತಾ ಕುಮುದ ಮೊದಲಾದ ಯುವತಿಯರು ಬೇಂದ್ರೆ, ಕುವೆಂಪು ಇತ್ಯಾದಿ ಖ್ಯಾತನಾಮರ ಕವಿತೆಗಳನ್ನು ಹಾಡಿ ತೋರಿಸುತ್ತಿದ್ದರು. ದಿನಗಳು ಕಳೆದ ಹಾಗೆಲ್ಲ 'ಕಾವ್ಯಕೂಟ' ಆ ನಗರದ ಅತ್ಯುತ್ತಮ ಸಾಂಸ್ಕೃತಿಕ ಸಂಸ್ಥೆಯೆಂದು ಹೆಸರಾಯಿತು. ಕೂಟದ ಪ್ರಾಣದಂತಿದ್ದ ಸದಾನಂದನ ಹೆಸರೂ ಕಾವ್ಯಪ್ರೇಮಿಗಳ ಬಾಯಲ್ಲಿ ಕೇಳಿಸತೊಡಗಿತು. ಕಾರ್ಯನಿಮಿತ್ತವಾಗಿ ಆ ನಗರಕ್ಕೆ ಆಗಮಿಸುತಿದ್ದ ಕವಿಗಳೂ ಲೇಖಕರೂ ಪತ್ರಿಕೋದ್ಯಮಿಗಳೂ ಅವನನ್ನು ಕಾಣಲೆಂದು ಅವನ

ಕೊಟಡಿಗೆ ಬಂದು ಅವನ ಆದರಾತಿಥ್ಯದಿಂದ ಸಂತೋಷಿತರಾಗಿ ಹೋಗತೊಡಗಿದರು. ಅವನ ಕವಿತೆಗಳನ್ನೋದಿ ಮೆಚ್ಚಿಕೊಂಡಿದ್ದ ಹುಬ್ಬಳ್ಳಿಯ ಪ್ರಕಾಶಕರೊಬ್ಬರು ಅವನ ಪ್ರಥಮ ಕವನಸಂಕಲನವನ್ನು ಪ್ರಕಟಿಸುವ ಹೊಣೆ ವಹಿಸಿಕೊಂಡರು. ಪತ್ರಿಕೆಗಳಲ್ಲಿ ಆ ಪುಸ್ತಕದ ಜಾಹಿರಾತುಗಳು ಕಾಣಿಸಿಕೊಂಡಾಗ ಕೊಟಬಾಗಿ ಅಸಹನೆ ತುಂಬಿದ ದನಿಯಲ್ಲಿ ನುಡಿದ:

"ಅಡ್ಡಿಯಿಲ್ಲಪ್ಪಾ. ಇನ್ನೇನು ನೀವು ಪ್ರಸಿದ್ಧ ಕವಿಯಾದಂತಾಯ್ತು."

ಆ ಮಾತಿನಿಂದಾಗಿ ಸದಾನಂದನ ಮನಸ್ಸಿಗೆ ಬಹಳ ನೋವಾಗದಿರಲಿಲ್ಲ. "ಒಂದು ಪುಸ್ತಕ ಪ್ರಕಟವಾದಷ್ಟಕ್ಕೆ ಎಂಥ ಪ್ರಸಿದ್ಧಿ ಕೊಟಬಾಗಿ?"

"ಮೊದಲನೆಯದು ಪ್ರಕಟವಾಗುವದೇ ಕಷ್ಟದ ಕೆಲಸ. ಒಂದು ಬಂತು ಅಂದರೆ ಮುಂದೆ ಸುಲಭ. ನೀವೇ ಭಾಗ್ಯಶಾಲಿಗಳಪ್ಪ. ಗೆದ್ದುಬಿಟ್ಟಿರಿ."

ಕಾವ್ಯಕೂಟದ ಚಟುವಟಿಕೆಗಳಿಗಾರಂಭವಾದಂದಿನಿಂದಲೂ ಕೊಟಬಾಗಿಗೆ ಮನಃಸ್ವಾಸ್ಥ್ಯವಿರಲಿಲ್ಲ. ಕೂಟದ ಸಭೆಗಳಿಗೆ ಬರುತ್ತಿದ್ದವರೆಲ್ಲ ಸದಾನಂದನನ್ನೆ ಮೆಚ್ಚಿ ಪ್ರಶಂಸಿಸುತ್ತಿದ್ದರು, ಅವನ ಕವಿತೆಗಳ ಸೌಂದರ್ಯವನ್ನು ಬಣ್ಣಿಸುತ್ತಿದ್ದರು. ಕೊಟಬಾಗಿಯ ಕವಿತೆಗಳ ಬಗೆಗೆ ಯಾರೂ ಆಸ್ಥೆ ವ್ಯಕ್ತಗೊಳಿಸುತ್ತಿರಲಿಲ್ಲ. ಆತ ಕಾವ್ಯವಾಚನಕ್ಕೆಂದು ಎದ್ದು ನಿಲ್ಲುತ್ತಲೂ ಅನೇಕರು ಉಪಹಾಸದ ನಗೆ ಬೀರುತ್ತಿದ್ದರು. ಖಂಡಿತವಾದಿಯೆಂದು ಹೆಸರಾದ ನರಗುಂದ ಒಂದು ಸಲ ಕೊಟಬಾಗಿಯ ಕವಿತೆಗಳ ಬಗೆಗೆ ಅಭಿಪ್ರಾಯ ವ್ಯಕ್ತಗೊಳಿಸುತ್ತ, "ನೀವಿನ್ನೂ ಹೈಸ್ಕೂಲ್ ಹುಡುಗರು ಬರೆದಂತೆ ಬರೆಯುತ್ತೀರಿ ಕೊಟಬಾಗಿ. ಎಲ್ಲಾ ಅಪಕ್ವ. ಏನೇನೂ ಸ್ವಾರಸ್ಯವಿಲ್ಲ," ಎಂದು ನುಡಿದುಬಿಟ್ಟಿದ್ದ. ಆ ದಿನ ಕೊಟಬಾಗಿಗೆ ಊಟ ತಿಂಡಿ ಯಾವುದೂ ರುಚಿಸಿರಲಿಲ್ಲ. ನರಗುಂದನೊಡನೆ ಮಾತನಾಡುವುದನ್ನೂ ಆತ ನಿಲ್ಲಿಸಿಬಿಟ್ಟಿದ್ದ. ಕೊಟಡಿಗೆ ಬರುತ್ತಿದ್ದ ಪತ್ರಿಕೋದ್ಯಮಿಗಳು ಸದಾನಂದನ ಹೊಸ ಕವಿತೆಗಳನ್ನು ಪ್ರಕಟನೆಗಾಗಿ ತೆಗೆದುಕೊಂಡು ಹೋಗುವ ಸಂದರ್ಭಗಳಲ್ಲೆಲ್ಲ ಕೊಟಬಾಗಿ ಜ್ವರವೇರಿದವರಂತೆ ಒಳಗೊಳಗೇ ನರಳುತ್ತಿದ್ದ. ಸದಾನಂದನ ಕವಿತೆಗಳನ್ನು ತುಂಬ ಪ್ರೀತಿಯಿಂದ ಕೇಳುತ್ತಿದ್ದ ಆ ಪತ್ರಿಕೋದ್ಯಮಿಗಳು ಕೊಟಬಾಗಿಯ ಕವಿತೆಗಳನ್ನು ಒಂದು ಸಲವೂ ಕೇಳಿರಲಿಲ್ಲ. ನಾಡಿನ ಪ್ರಮುಖ ಪತ್ರಿಕೆಗಳಲ್ಲೆಲ್ಲ ಸದಾನಂದನ ಕವಿತೆಗಳು ಕಾಣಿಸಿಕೊಳ್ಳತೊಡಗಿದಾಗ ಕೊಟಬಾಗಿಯ ಮನಸ್ಸು ಮತ್ಸರದ

ಉರಿಯಲ್ಲಿ ಬೇಯತೊಡಗಿತ್ತು. ಸದಾನಂದನಿಗೆ ತಾನು ಯಾವ ಅಂಶದಲ್ಲೂ ಕಡಿಮೆಯವನಾಗಿರದಿದ್ದರೂ ಅವನಿಗೆ ಲಭಿಸುತ್ತಿರುವ ಯಶಸ್ಸು ತನಗೇಕೆ ದೊರೆಯುತ್ತಿಲ್ಲವೆಂಬುದೇ ಅವನಿಗೊಂದು ಸಮಸ್ಯೆಯಾಗಿತ್ತು. ಹೈಸ್ಕೂಲಿನಲ್ಲಿ ನಡೆಯುತ್ತಿದ್ದ ಕಿರುಕುಳಗಳಿಂದಾಗಿ ಮೊದಲೇ ಬೇಸರಗೊಂಡಿದ್ದ ಅವನ ಮನಸ್ಸು ಕಾವ್ಯರಂಗದಲ್ಲಿನ ಸೋಲಿನಿಂದಾಗಿ ಕಹಿಯಾಗಿ ಕಟುವಾಗಿ ವಿಕೃತ ವಾಯಿತು. ಸದಾನಂದನ ವಿಷಯವಾಗಿ ಮೊದಲು ಅವನಲ್ಲಿದ್ದ ಮೆಚ್ಚುಗೆಗೆ ಪ್ರತಿಯಾಗಿ ಈರ್ಷಾಸೂಯೆಗಳು ಅವನ ಎದೆಯಲ್ಲಿ ಮನೆಮಾಡಿದುವು. ತಾನು ಪ್ರೀತಿಸುತ್ತಿದ್ದ ಶಾಂತಾ ಸಹ ಸದಾನಂದನ ಸುತ್ತಮುತ್ತ ಪಾತರಗಿತ್ತಿಯಂತೆ ಸುಳಿಯುವುದನ್ನು ನಿರೀಕ್ಷಿಸಿದ ಹಾಗೆಲ್ಲ ಕೊಟಬಾಗಿಯ ಮನಸ್ಸು ಅಗ್ನಿಕುಂಡ ದಂತೆ ಜ್ವಲಿಸತೊಡಗಿತು. ಅಸೂಯೆ ದ್ವೇಷವಾಗಿ ಪರಿವರ್ತನಗೊಂಡು ಸದಾ ನಂದನ ಸಹವಾಸವೂ ಕೂಡ ಅವನಿಗೆ ದುಸ್ಸಹವಾಗತೊಡಗಿತು.

ಸದಾನಂದನ ಅಭಿವೃದ್ಧಿಯನ್ನೂ ಖ್ಯಾತಿಯನ್ನೂ ಕಂಡು ತಳಮಳಿ ಸುತ್ತಿದ್ದ ಇನ್ನೊಬ್ಬ 'ಮರಿಕವಿ' ದೇಶಪಾಂಡೆಯೊಂದಿಗೆ ಕೊಟಬಾಗಿಗೆ ಗಾಢ ಸ್ನೇಹ ಬೆಳೆದು ಬಂದಿತು. 'ಕಾವ್ಯಕೂಟ'ದಲ್ಲಿ ಅವರಿಬ್ಬರದೇ ಒಂದು ಉಪ ಕೂಟವಾಯಿತು. ದಿನಗಳುರುಳಿದಂತೆ ಅವರು ಬಗೆ ಬಗೆಯ ತಂತ್ರಗಳನ್ನು ಪ್ರಯೋಗಿಸಿ ತಮ್ಮ ಬೆಂಬಲಿಗರ ಸಂಖ್ಯೆಯನ್ನು ಹೆಚ್ಚಿಸಿಕೊಳ್ಳತೊಡಗಿದರು.

ದೇಶಪಾಂಡೆಯೂ ಬಿ.ಎ. ವರ್ಗದ ವಿದ್ಯಾರ್ಥಿಯೆ. ಸದಾನಂದ, ವೆಂಕಟೇಶ, ನರಗುಂದ ಮೊದಲಾದವರು ಪುರೋಗಾಮಿ ಮನೋವೃತ್ತಿಯವ ರಾದರೆ ದೇಶಪಾಂಡೆ ಸನಾತನ ಮನೋವೃತ್ತಿಯವನು. ರಾಷ್ಟ್ರೀಯ ಸ್ವಯಂ ಸೇವಕ ಸಂಘದೊಡನೆಯೂ ಅವನಿಗೆ ಸಂಬಂಧವಿತ್ತು. ಕಾಲೇಜು ವಿದ್ಯಾರ್ಥಿ ಗಳನ್ನು ಆ ಸಂಘದ ಸದಸ್ಯರನ್ನಾಗಿ ಮಾಡಲು ಆತ ಬಗೆ ಬಗೆಯಾಗಿ ಯತ್ನಿಸು ತ್ತಿದ್ದನಾದರೂ ಸಾಮಾನ್ಯವಾಗಿ ಪ್ರಗತಿಪ್ರಿಯರಾದ ಕಾಲೇಜು ಕುಮಾರರು ದೇಶಪಾಂಡೆಯ ಗಾಳಕ್ಕೆ ಸಿಕ್ಕಿಬೀಳುತ್ತಿರಲಿಲ್ಲ. ದೇಶಪಾಂಡೆ ಅದರಿಂದ ನಿರಾಶ ನಾಗದೆ, 'ಕಾವ್ಯಕೂಟ'ಕ್ಕೆ ಸೇರಿಕೊಂಡು ಅಲ್ಲಿಯೂ ತನ್ನ ಬಲೆ ಬೀಸುತ್ತ ಬಂದಿದ್ದ. ಅವನ ಬಲೆಗೆ ತೀರ ಸಲಭವಾಗಿ ಸಿಕ್ಕಿಬಿದ್ದ ಮೊದಲನೆಯ ಆಸಾಮಿ ಕೊಟಬಾಗಿ.

"ಆ ಸದಾನಂದ ಪಕ್ಕಾ ಕಮ್ಯೂನಿಸ್ಟ್ ಇದ್ದ ಹಾಗಿದಾನೆ ಕೊಟಬಾಗಿ.

ನರಗುಂದನಂತೂ ಸೋಶಲಿಸ್ಟ್ ಪಾರ್ಟಿ ಸದಸ್ಯ. ನಮ್ಮ ದೇಶದ ಉಚ್ಚ ಸಂಸ್ಕೃತಿಯನ್ನು ನಿರ್ಮೂಲಗೊಳಿಸುವ ಪಾರ್ಟಿಗಳೆಂದರೆ ಇವು. ತಮ್ಮ ಪಾರ್ಟಿ ಪ್ರಚಾರಕ್ಕಾಗಿ ಕವಿತೆ, ಕತೆ, ಕಾದಂಬರಿಗಳನ್ನು ಉಪಯೋಗಿಸಿಕೊಳ್ಳುವ ಹೊಂಚು ಇವರದು. ನಿಮ್ಮಂಥ ನಿಜವಾದ ಕವಿಗಳೂ ದೇಶಪ್ರಿಯರೂ ಈ ಕಿಡಿಗೇಡಿಗಳ ಬಲೆಗೆ ಬೀಳಬಾರದು," ಎನ್ನುತ್ತಿದ್ದ ದೇಶಪಾಂಡೆ.

ಕೊಟಬಾಗಿಗೆ ಪರಮಸಂತೋಷವಾಗುತ್ತಿತ್ತು. ಹದಿನೈದು ವರ್ಷಗಳಿಂದಲೂ ಆತ ಕವಿತೆ ಬರೆಯುತ್ತ ಬಂದಿದ್ದನಾದರೂ ಅವನನ್ನು ಕವಿಯೆಂದು ಅದುವರೆಗೆ ಯಾರೂ ಕರೆದಿರಲಿಲ್ಲ. "ದೇಶಪಾಂಡೆ ನಿಜವಾಗಿಯೂ ನಿಷ್ಪಕ್ಷಪಾತಿ, ಪ್ರತಿಭೆಯನ್ನು ಕಂಡಲ್ಲಿ ಒಪ್ಪಿಕೊಳ್ಳುವ ವ್ಯಕ್ತಿ. ನಾನು 'ನಿಜವಾದ ಕವಿ' ಯೆಂದು ಆತ ಹೇಳುತ್ತಾನೆ! ಗುಣಗ್ರಾಹಿಯಾದ ಒಬ್ಬ ಮನುಷ್ಯನಾದರೂ ಇರುವನಲ್ಲ ಈ ಜಗತ್ತಿನಲ್ಲಿ!"

ಕೊಟಬಾಗಿಯ ಹೃದಯ ಸಹಜವಾಗಿಯೆ ದೇಶಪಾಂಡೆಯತ್ತ ಒಲಿದಿತ್ತು. ಕೊಟಡಿಯಲ್ಲಿ ಗಂಟೆಗಟ್ಟಲೆ ಕಾಲ ಅವನನ್ನು ಕೂಡಿಸಿಕೊಂಡು ತನ್ನ ಕವಿತೆಗಳನ್ನು ಮತ್ತೆ ಮತ್ತೆ ಓದಿ ತೋರಿಸುತ್ತಿದ್ದ. ಆ ನೀರಸ ಕವಿತೆಗಳನ್ನು ಕೇಳಿ ತುಂಬ ಬೇಸರವಾದರೂ ದೇಶಪಾಂಡೆ ಅವನ್ನು ಸಹಿಸಿಕೊಂಡು ಕೊಟಬಾಗಿಯ ಕಾವ್ಯ ಶಕ್ತಿಯನ್ನು ಮುಕ್ತಕಂಠದಿಂದ ಹೊಗಳುತ್ತಿದ್ದ.

"ಕುಮಾರವ್ಯಾಸ ಮಹಾಕವಿಯ ತರುವಾಯ ಕನ್ನಡದಲ್ಲಿ ನಿಮ್ಮ ಹಾಗೆ ಬರೆಯುವವರು ಇನ್ನೊಬ್ಬರು ಹುಟ್ಟಿರಲಿಲ್ಲ ಕೊಟಬಾಗಿ. ಕವಿತೆ ನಿಮಗೆ ದೇವದತ್ತವಾಗಿ ಲಭಿಸಿದೆ," ಎನ್ನುತ್ತಿದ್ದ ದೇಶಪಾಂಡೆ.

ಅಂಥ ಮೆಚ್ಚಿಗೆಯ ನುಡಿಗಳಿಗಾಗಿ ಹಲವು ವರ್ಷಗಳಿಂದ ಪರಿತಪಿಸುತ್ತಿದ್ದ ಕೊಟಬಾಗಿ ದೇಶಪಾಂಡೆಯ ಮಾತುಗಳೆಲ್ಲ ನಿಜವೆಂದೇ ನಂಬಿ ಹರ್ಷದಿಂದ ಬೀಗುತ್ತಿದ್ದ.

ಸಾಯಂಕಾಲ ಅವರಿಬ್ಬರೂ ವಾಯುವಿಹಾರಕ್ಕೆ ಹೋಗುವುದು ರೂಢಿಯಾಗುತ್ತ ಬಂದಿತ್ತು. ಸಾಲೆ ಬಿಟ್ಟೊಡನೆ ಕೊಟಬಾಗಿ ದೇಶಪಾಂಡೆಯನ್ನು ಹುಡುಕಿಕೊಂಡು ಅವರ ಮನೆಗೆ ಹೋಗುತ್ತಿದ್ದ. ದೇಶಪಾಂಡೆಯ ತಂದೆ ದೊಡ್ಡ ಜಮೀನ್ದಾರರಾದುದರಿಂದ ಮನೆಯಲ್ಲಿ ಯಾವುದಕ್ಕೂ ಕೊರತೆಯಿರಲಿಲ್ಲ. ಕೊಟಬಾಗಿಗೆ ಪ್ರತಿನಿತ್ಯವೂ ಉಂಡೆ, ಶ್ರೀಖಂಡಪುರಿ, ಕೇಸರಿಭಾತುಗಳ

ಸಮಾರಾಧನೆ ನಡೆಯುತ್ತಿತ್ತು. ದೇಶಪಾಂಡೆ ಚಹವನ್ನು ಮಾತ್ರ ಮುಟ್ಟು ತ್ತಿರಲಿಲ್ಲ. "ನಮ್ಮ ನೀತಿ ಕೆಡಲು ಮೊದಲನೆಯ ಕಾರಣ ಈ ಚಹಾ!" ಎಂದು ಅವನು ಹೇಳುತ್ತಿದ್ದ. ಕೊಟಬಾಗಿಯ ಸಿಗರೇಟು ವ್ಯಾಮೋಹ ಕಂಡು ದೇಶಪಾಂಡೆಗೆ ರೋಸಿಹೋಗುತ್ತಿತ್ತು.

"ಶುದ್ಧ ಜೀವನ ನಡಸಲಿಕ್ಕೆ ಈ ಸಿಗರೇಟು ದೊಡ್ಡ ಆತಂಕ. ಈ ಕೆಟ್ಟ ಚಟ ಅಂಟಿಸಿಕೊಂಡೇ ನಮ್ಮ ಹುಡುಗರು ಹಾಳಾದರು," ಎಂದು ಮತ್ತೆ ಮತ್ತೆ ಹೇಳುತ್ತಿದ್ದ ದೇಶಪಾಂಡೆ.

ಕೊಟಬಾಗಿ ನಗುತ್ತ ನುಡಿಯುತ್ತಿದ್ದ :

"ಸ್ಫೂರ್ತಿ ಬರಬೇಕಾದರೆ ಸಿಗರೇಟು ಬೇಕೇಬೇಕು ದೇಶಪಾಂಡೆ. ನಿಮ ಗಿದರ ಅನುಭವವಿಲ್ಲ."

ದೇಶಪಾಂಡೆ ಮರ್ಮಭೇದಕ ನಗೆ ನಕ್ಕು ಹೇಳುತ್ತಿದ್ದ :

"ಇದೆಲ್ಲ ವಿದೇಶಿಯರಿಂದ ಕಲಿತ ಪಾಠ. ನಾನೂ ಕವಿತೆ ಬರೆಯುವ ದಿಲ್ಲವೆ? ನನಗೂ ಸ್ಫೂರ್ತಿ ಬರುವದಿಲ್ಲವೆ? ಇಂಥ ಚಟಗಳ ಅಗತ್ಯ ನನಗೆಂದೂ ಕಂಡುಬಂದಿಲ್ಲವಲ್ಲ? ಪಂಪ ರನ್ನ ಜನ್ನ ಕುಮಾರವ್ಯಾಸ ಯಾರೂ ಸಿಗರೇಟು ಸೇದುತ್ತಿರಲಿಲ್ಲ."

"ಅವರ ಕಾಲಕ್ಕೆ ಸಿಗರೇಟು ಇರಲಿಲ್ಲವಲ್ಲ?"

"ಇದ್ದರೂ ಅವರು ಮುಟ್ಟುತ್ತಿರಲಿಲ್ಲ. ಈಗಲೂ ಕೂಡ ನಮ್ಮ ದೊಡ್ಡ ದೊಡ್ಡ ಕವಿಗಳಾರೂ ಸಿಗರೇಟು ಸೇದುವದಿಲ್ಲ. ಕುವೆಂಪು, ಬೇಂದ್ರೆ....ಕೇಶವ ರಾಯರು...."

"ಕೇಶವರಾಯರು ನಸ್ಯ ಸೇದುತ್ತಾರೆ."

"ಹೌದು. ನಾನು ಇಲ್ಲವೆನ್ನುವದಿಲ್ಲ. ಅದೊಂದು ಸಣ್ಣ ಚಟವಿದೆಯಷ್ಟೆ. ಆದರೆ, ಸಿಗರೇಟು ಮಾತ್ರ ಅವರೆಂದೂ ಮುಟ್ಟಿಲ್ಲ. ನಮ್ಮ ಸಂಸ್ಕೃತಿಯೆಂದರೆ ಬಹಳ ಅಭಿಮಾನ ಕೇಶವರಾಯರಿಗೆ."

ಆ ನಗರದಲ್ಲಿ ಪ್ರಕಟವಾಗುತ್ತಿದ್ದ ಏಕಮಾತ್ರ ಮಾಸಪತ್ರಿಕೆ 'ಪ್ರಕಾಶ' ದ ಸಂಪಾದಕರು ಕೇಶವರಾಯರು. ಐವತ್ತನ್ನು ದಾಟಿದ ವಯಸ್ಸು ಅವರದು. ಪತ್ರಿಕೋದ್ಯಮಿಯಾಗಿದ್ದುದರ ಜತೆಗೆ ಅವರು ಕವಿ, ಕತೆಗಾರ, ಕಾದಂಬರಿಕಾರ, ಚರಿತ್ರಕಾರರೂ ಆಗಿದ್ದರು. ಎರಡು ಕವನಸಂಗ್ರಹ, ಮೂರು ಕಥಾಸಂಗ್ರಹ,

ಮೂರು ಕಾದಂಬರಿ, ಮೂರು ಚರಿತ್ರೆಗಳನ್ನು ಪ್ರಕಟಿಸಿದ್ದರು. ಉತ್ತರ ಕರ್ನಾಟಕದಲ್ಲೆಲ್ಲ ತಾನೇ ಹಿರಿಯ ಲೇಖಕ, ಹಿರಿಯ ಪತ್ರಿಕೋದ್ಯಮಿ ಎಂದು ಬಲವಾಗಿ ನಂಬಿಕೊಂಡವರು ಕೇಶವರಾಯರು. ತಮ್ಮ ಕೃತಿಗಳನ್ನು ಅಚ್ಚಿನಲ್ಲಿ ಕಾಣಲು ಹಾತೊರೆಯುತ್ತಿದ್ದ ದೇಶಪಾಂಡೆಯಂಥ ಹಲವು ಕಿರಿಯ ಬರೆಹಗಾರರನ್ನು ಕಿಸೆಗೆ ಸೇರಿಸಿ ಅವರ ಸಹಾಯದಿಂದ ಚಂದಾದಾರರನ್ನು ಸಂಪಾದಿಸುತ್ತ ಪತ್ರಿಕೆ ನಡಸುತ್ತ ಬಂದಿದ್ದರು. ತಮ್ಮ ಜಾತಿಯ ಬಗೆಗೆ ಅವರಲ್ಲಿದ್ದ ಅಭಿಮಾನವೂ ಪ್ರಖರವಾದುದಾಗಿತ್ತು. ಇತರ ಜಾತಿಗಳ ಲೇಖಕರ ಬಗೆಗೆ ಅವರೆಂದೂ ಒಂದು ಒಳ್ಳೆಯ ಶಬ್ದವನ್ನೂ ಆಡಿರಲಿಲ್ಲ. ಸದಾನಂದ ಮುಂದೆ ಬರುತ್ತಿದ್ದುದನ್ನು ನಿರೀಕ್ಷಿಸಿದ ಹಾಗೆ ಅವರಿಗೂ ತಳಮಳವಾಗತೊಡಗಿದ್ದಿತು. "ಅವನ ಕವಿತೆಗಳಲ್ಲಿ ಏನಿದೆ ಅಂತ ಈ ಜನರೆಲ್ಲ ಹೊಗಳುತ್ತಿದ್ದಾರೋ! ಉಳ್ಳಾಗಡ್ಡಿ ಖಾರ ತಿಂದು ಬೆಳೆದ ಈ ಹುಂಬರು ಕವಿತೆ ಏನು ಬರೆದಾರು!" ಎಂದು ಹೀಯಾಳಿಸಿ ನುಡಿಯುತ್ತಿದ್ದರು ರಾಯರು.

ಯಾವುದೋ ಒಂದು ಸಭೆಯ ಸಂದರ್ಭದಲ್ಲಿ ಸದಾನಂದ ಕೇಶವರಾಯರನ್ನು ಕಂಡಿದ್ದನಾದರೂ ತಾನಾಗಿಯೇ ತನ್ನ ಕವಿತೆಗಳನ್ನು ಅವರ ಪತ್ರಿಕೆಗೆ ಕೊಡಲು ಹೋಗಿರಲಿಲ್ಲ. 'ಮರಿಕವಿ'ಗಳೆಲ್ಲ ತಮ್ಮ ಕಚೇರಿಗೆ ಬಂದು ತಮಗೆ ನಮಸ್ಕಾರ ಹಾಕಿ, ಕವಿತೆಗಳನ್ನು ಕೊಟ್ಟು ಪ್ರಕಟಿಸಲು ಬಿನ್ನವಿಸಿಕೊಳ್ಳುತ್ತಿರುವಾಗ ಈ ಸದಾನಂದನೊಬ್ಬ ಮಾತ್ರ ಒಂದು ಸಲವೂ ತಮ್ಮ ಹತ್ತಿರ ಬರದೆ, ಪರಸ್ಥಳಗಳಲ್ಲಿ ಪ್ರಕಟವಾಗುವ ಪತ್ರಿಕೆಗಳ ಮುಖಾಂತರ ಕೀರ್ತಿಶಾಲಿಯಾಗುತ್ತಿರುವನಲ್ಲಾ ಎಂದು ರಾಯರು ಒಳಗೊಳಗೇ ಚಡಪಡಿಸುತ್ತಿದ್ದರು. ಉತ್ತರ ಕರ್ನಾಟಕದ 'ಮರಿಕವಿ'ಗಳನ್ನೆಲ್ಲ ತಾನೇ ಮುಂದೆ ತಂದವರೆಂದು ಹೆಗ್ಗಳಿಕೆ ಕೊಚ್ಚಿಕೊಂಡು ಸಂತೋಷಿಸುವುದೊಂದು ಅಭ್ಯಾಸವೆ ಆದಂತಾಗಿತ್ತು ರಾಯರಿಗೆ. ತಮ್ಮ ಕೃಪೆಗೆ ಪಾತ್ರನಾಗಲು ಸದಾನಂದ ಯತ್ನಿಸದಿದ್ದುದನ್ನು ಕಂಡು ಅವರ ಅಹಂಭಾವಕ್ಕೆ ಪೆಟ್ಟು ಬಿದ್ದಿತ್ತು. ಅಂತೆಯೆ ಅವರು ತಮ್ಮನ್ನು ತಾವೆ ಸಮಾಧಾನ ಮಾಡಿಕೊಳ್ಳಲೆಂದು, ತಮ್ಮನ್ನು ಕಾಣಲು ಬಂದವರೆಲ್ಲರ ಎದುರಿಗೂ ಸದಾನಂದನನ್ನು ಮನಸ್ವಿಯಾಗಿ ಹೀಯಾಳಿಸುತ್ತಿದ್ದರು.

ದೇಶಪಾಂಡೆಯೊಡನೆ ಸ್ನೇಹ ಬೆಳೆದ ತರುವಾಯ ಕೊಟಬಾಗಿಯೂ ಕೇಶವರಾಯರಲ್ಲಿಗೆ ಹೋಗಿಬರುವುದಕ್ಕಾರಂಭಿಸಿದ್ದ. ಅದಕ್ಕೆ ಮುನ್ನ ರಾಯರ

ಬಗೆಗೆ ಅವನಲ್ಲಿ ಸದಭಿಪ್ರಾಯವೇನೂ ಇರಲಿಲ್ಲ. ಎರಡು ವರ್ಷಗಳ ಹಿಂದೆ ಅವನು 'ಪ್ರಕಾಶ'ಕ್ಕೆ ಕಳುಹಿಸಿದ್ದ ಕವಿತೆಗಳನ್ನು ಅವರು ಪ್ರಕಟಿಸಿರಲಿಲ್ಲ ವಾದುದರಿಂದ ಅವರ ಬಗೆಗೆ ಅಸಮಾಧಾನವೇ ಬೆಳೆದುಬಂದಿತ್ತು ಕೊಟಬಾಗಿಯ ಮನಸ್ಸಿನಲ್ಲಿ. ಅಂತೆಯೆ ಆತ ತಾನಾಗಿಯೆ ಅವರನ್ನು ಕಾಣಲು ಹೋಗಿರಲಿಲ್ಲ. ದೇಶಪಾಂಡೆ ಒತ್ತಾಯದಿಂದ ಅವನನ್ನು ಕರೆದೊಯ್ದು ರಾಯರಿಗೆ ಭೇಟಿ ಮಾಡಿಸಿದ್ದ. ಅವರಿಬ್ಬರ ಮುಖದಿಂದ 'ಕಾವ್ಯಕೂಟ'ದ ಆಂತರಿಕ ವಿಷಯ ಗಳನ್ನೆಲ್ಲ ತಿಳಿದುಕೊಂಡ ರಾಯರು ಆ ಕಿರಿಯ ಕವಿಗಳ ಒಡಕನ್ನು ತಮ್ಮ ಲಾಭಕ್ಕಾಗಿ ಉಪಯೋಗಿಸಿಕೊಳ್ಳಲು ನಿರ್ಧರಿಸಿ, ಕೊಟಬಾಗಿಯನ್ನು ಪ್ರೋತ್ಸಾ ಹಿಸುವುದಕ್ಕಾರಂಭಿಸಿದರು. 'ಪ್ರಕಾಶ'ದ ಪ್ರತಿ ಸಂಚಿಕೆಯಲ್ಲೂ ಅವನದೊಂದು ಕವಿತೆ ಪ್ರಕಟವಾಗಲಾರಂಭಿಸಿತು. ಹದಿನೈದು ವರ್ಷಗಳಿಂದ ತಾತ್ಸಾರದ ನುಡಿಗಳನ್ನೇ ಕೇಳುತ್ತ ಬಂದಿದ್ದ ಆ ಬಡಪಾಯಿಗೆ ಕೇಶವರಾಯರ ಸವಿ ನುಡಿಗಳೂ ಪ್ರೋತ್ಸಾಹವೂ ಉತ್ಸಾಹದಾಯಕವಾಗಿ ಪರಿಣಮಿಸಿದವು. ಮೊದಲು ಕೇಶವರಾಯರ ಹೆಸರು ಕೇಳುತ್ತಲೂ ಮೂಗು ಮುರಿಯುತ್ತಿದ್ದ ಕೊಟ ಬಾಗಿಯೆ ಈಗ ಅವರನ್ನು ಮನಸೋಕ್ತವಾಗಿ ಸ್ತುತಿಸತೊಡಗಿದ್ದ. ಪತ್ರಿಕೆಯ ಆರ್ಥಿಕ ದುಸ್ಥಿತಿಯನ್ನು ಪ್ರತಿದಿನವೂ ಅವನೆದುರು ತೋಡಿಕೊಂಡು ಅವನ ಮನಸ್ಸು ಕರಗುವಂತೆ ಮಾಡಿ, ಅವನಿಂದ ಇಪ್ಪತ್ತೈದು ರೂಪಾಯಿಗಳ ಸಹಾಯ ಧನವನ್ನೂ ದೋಚಿಕೊಂಡರು ರಾಯರು.

"ಈ ಲಿಂಗಾಯತರ ಹಾವಳಿ ಬಹಳವಾಯ್ತು. ಎಲ್ಲಾ ಕ್ಷೇತ್ರಗಳಲ್ಲೂ ಮೂಗು ಮೇಲೆ ಮಾಡಿಕೊಂಡು ನುಗ್ಗುತ್ತಿದ್ದಾರೆ. ಇದುವರೆಗೆ ಸಾಹಿತ್ಯ ಕ್ಷೇತ್ರದಲ್ಲಿ ಸೇರಿರಲಿಲ್ಲ. ಈಗ ಅದರಲ್ಲೂ ತಾಂಡವನೃತ್ಯ ನಡೆಸುತ್ತಾ ಸಾಹಿತ್ಯದ ಪಾವಿತ್ರ್ಯವನ್ನೆಲ್ಲಾ ನಷ್ಟಗೊಳಿಸುತ್ತಿದ್ದಾರೆ," ಎನ್ನುವರು ಕೇಶವರಾಯರು.

"ರಾಯರು ಹೇಳುವದು ನೂರಕ್ಕೆ ನೂರರಷ್ಟು ನಿಜ, ಪ್ರಗತಿಶೀಲ ಚಳವಳಿ ಅಂತ ಎದ್ದಿದೆಯಲ್ಲಾ ಈಚೆಗೆ - ಅದರಲ್ಲೂ ಈ ಶಿವದಾರದ ಮಂದಿಯೇ ಬಹಳ. ಒಟ್ಟು ಇವರ ಉದ್ದೇಶವೇನೆಂದರೆ ಹಿಂದೂ ಧರ್ಮದ ಶ್ರೇಷ್ಠ ಆಚಾರ ವಿಚಾರಗಳನ್ನೆಲ್ಲಾ ಹಾಳುಮಾಡಿ ವರ್ಣಸಂಕರ ಮಾಡುವದು," ಎನ್ನುವನು ದೇಶಪಾಂಡೆ.

"ಅಂದು ಆ ಬಸವ ವಚನ ಅಂತ ಬರೆದು ಕನ್ನಡ ಕವಿತೆಯ ಕಟ್ಟನ್ನೇ

ಕೆಡಿಸಿ ಹಾಕಿದ. ಇಂದು ಈ ಬಸವಮತೀಯರು ಮಾಡುತ್ತಿರುವದೂ ಅದೇ ಕಿಡಿಗೇಡಿತನವನ್ನೇ. ಸೂಜ್ಞರಾದವರೆಲ್ಲಾ ಈ ಪುಂಡತನವನ್ನೆದುರಿಸಲೇಬೇಕು," ಎನ್ನುವರು ಕೇಶವರಾಯರು.

"ಕಾವ್ಯ ಕಲೆ ಅಂತ ಸೋಗು ಹಾಕಿ ನಮ್ಮ ಹುಡುಗಿಯರನ್ನೂ ಅಡ್ಡ ಹಾದಿಗೆಳೆಯುತ್ತಿದ್ದಾರೆ ಇವರು," ಎನ್ನುವನು ದೇಶಪಾಂಡೆ.

ಕೇಶವರಾಯರು ಬೆಚ್ಚಿಬಿದ್ದು ಪ್ರಶ್ನಿಸುವರು: "ಹಾ? ಅಂಥದೂ ನಡೆದಿದೆಯೆ?"

"ಎಷ್ಟೋ ದಿನದಿಂದ ನಡೆದಿದೆ. ಯಾರೂ ಅತ್ತ ಲಕ್ಷ್ಯಕೊಡುತ್ತಿಲ್ಲ. 'ಕಾವ್ಯಕೂಟ'ದ ಕಾರ್ಯದರ್ಶಿ ಯಾವ ಜಾತಿಯವ ಗೊತ್ತಿಲ್ಲವೇ ನಿಮಗೆ ರಾಯರೆ?"

"ಅವ ಯಾರು ಅನ್ನುವದೇ ಗೊತ್ತಿಲ್ಲವಂತೆ. ಇನ್ನು ಅವನ ಜಾತಿ ಹ್ಯಾಗೆ ಗೊತ್ತಾಗಬೇಕಪ್ಪ?"

"ಅವನ ಹೆಸರು ನರಗುಂದ ಅಂತ. ಮುಸಲರನ. ಅಂಥವನನ್ನು ಕಾರ್ಯದರ್ಶಿ ಮಾಡುವರೇನ್ರೀ ಯಾರಾದರೂ? ಕೂಟದ ನೆಪದಿಂದ ಅವನು ಹುಡುಗಿಯರ ದೋಸ್ತಿ ಮಾಡಿಕೊಂಡಿದ್ದಾನೆ. ಎಲ್ಲಾ ಬ್ರಾಹ್ಮಣ ಹುಡುಗಿಯರು...."

'ಕಾವ್ಯಕೂಟ'ದ ಸಭೆಗಳಲ್ಲಿ ಕಾಲೇಜು ವಿದ್ಯಾರ್ಥಿನಿಯರೂ ಭಾಗ ವಹಿಸುವ ಸಂಗತಿ ಕೇಶವರಾಯರಿಗೆ ಆ ಮೊದಲೇ ತಿಳಿದಿದ್ದಿತು. ಮನಸಾ ಸನಾತನಿಗಳಾಗಿದ್ದ ಅವರಿಗೆ ಆ ವಿಷಯ ಒಪ್ಪಿಗೆಯಾಗುವುದು ಸಾಧ್ಯವೇ ಇರಲಿಲ್ಲ. ಸ್ತ್ರೀ ಸ್ವಾತಂತ್ರ್ಯ, ಸಮಾನತೆಗಳ ಹೆಸರಿನಲ್ಲಿ ಯುವತಿಯರು ದಾರಿ ತಪ್ಪಿ ನಡೆದಿರುವರೆಂದೇ ಅವರು ನಂಬಿಕೊಂಡಿದ್ದರು.

"ಲಿಂಗಾಯತನೊಬ್ಬ ಅಧ್ಯಕ್ಷ, ಮುಸಲ್ಮಾನನೊಬ್ಬ ಕಾರ್ಯದರ್ಶಿ. ಸರಿ ಹೋಯಿತಲ್ಲ ದೇಶಪಾಂಡೆ. ಬೆಂಕಿಗೆ ಗಾಳಿ ಕೂಡಿದಂತಾಯ್ತು. ಈ ಸದಾನಂದ ಈ ನರಗುಂದ ಇವರಿಬ್ಬರೂ ನೈತಿಕವಾಗಿ ಹ್ಯಾಗಿದ್ದಾರೆ?"

"ಯಾವ ಹುತ್ತದಲ್ಲಿ ಯಾವ ಹಾವಿದೆಯೆಂದು ಹ್ಯಾಗೆ ಹೇಳಲಿಕ್ಕೆ ಬರುತ್ತದೆ ರಾಯರೇ? ಅವರಿಬ್ಬರೂ ಬಹಳ ಧೂರ್ತರಿದ್ದಾರೆ. ಸವಿಸವಿಯಾಗಿ

ಮಾತಾಡಿ ಹುಡುಗಿಯರನ್ನು ಬಲೆಗೆ ಹಾಕಿಕೊಂಡಿದ್ದಾರೆ. ಆ ಮಧ್ವರಾಯರ ಮಗಳು ಶಾಂತಾ ಅಂತೂ ಸದಾನಂದ ಅಂದರೆ ಬಿದ್ದು ಸಾಯುತ್ತಾಳೆ."

"ಇಷ್ಟು ದೂರ ಹೋಗಿದೆಯೇ ಪ್ರಕರಣ?"

"ಹುಡುಗಿಯರಿಗೆ ಸ್ವಾತಂತ್ರ್ಯ ಕೊಟ್ಟರೆ ಆಗುವದೇ ಹೀಗೆ. ಸದಾನಂದನಿಗೆ ಶಾಂತಾ. ನರಗುಂದನಿಗೆ ಕುಮುದಾ."

"ಕುಮುದಾ?"

"ಪೋಸ್ಟ್ ಮಾಸ್ತರರ ಮಗಳು...."

"ಓ, ಅವರೇ? ಸರಿ. ಗೊತ್ತಾಯ್ತು."

ಮತ್ತೊಂದು ದಿನ ಕೇಶವರಾಯರು ನಗುನಗುತ್ತಾ ಕೇಳಿದರು:

"ಇಬ್ಬರು ಕವಿಗಳಿಗೆ ಇಬ್ಬರು ಹುಡುಗಿಯರ ಜತೆಯಾಯ್ತು. ನಿಮಗೆ ಯಾರೂ ಸಿಗಲಿಲ್ಲವೇ ಕೊಟಬಾಗಿ?"

ಕೊಟಬಾಗಿ ಹೆಣ್ಣಿನಂತೆ ಲಜ್ಜಿತನಾಗಿ ತಲೆ ತಗ್ಗಿಸಿದ.

"ಸದಾನಂದ ನರಗುಂದರ ಹಾಗೆ ಇವರೇನು ಉಡಾಳರಲ್ಲ ರಾಯರೆ. ಹಾಗೆಲ್ಲ ಹುಡುಗಿಯರ ಮೇಲೆ ಬಲೆ ಬೀಸುತ್ತಾ ತಿರುಗುವವರಲ್ಲ ಇವರು. ಬಹಳ ಆದರ್ಶವಾದಿಗಳು," ಎಂದ ದೇಶಪಾಂಡೆ.

ಅಂದು ಸಂಜೆ ವಾಯುವಿಹಾರಕ್ಕೆ ಹೋಗಿದ್ದಾಗ ಅದೇ ವಿಷಯ ಪ್ರಸ್ತಾಪಿಸಿ ದೇಶಪಾಂಡೆ ಹೇಳಿದ:

"ಇಷ್ಟು ದಿವಸ ಸುಮ್ಮನಿದ್ದದ್ದಾಯ್ತು. ಇನ್ನು ಮೇಲೆ ಮಾತ್ರ ನಾವು ಹುಷಾರಾಗಿರಬೇಕು ಕೊಟಬಾಗಿ."

"ಹೌದು ಹೌದು," ಎಂದ ಕೊಟಬಾಗಿ.

"ನಾವು ಹೀಗೇ ಇದ್ದುಬಿಟ್ಟರೆ ಇಂದಿಲ್ಲ ನಾಳೆ ಆ ಸದಾನಂದ ಶಾಂತಳನ್ನು ಹಾರಿಸಿಕೊಂಡು ಹೋಗುತ್ತಾನೆ. ಆ ಮುಸಲ ಕುಮುದಳನ್ನು ಹೊತ್ತುಕೊಂಡು ಹೋಗುತ್ತಾನೆ."

"ಹೌದು ಹೌದು," ಎಂದ ಕೊಟಬಾಗಿ.

"ಏನಾದರೂ ಮಾಡಿ ಅದನ್ನು ತಪ್ಪಿಸುವದು ನಮ್ಮ ಕರ್ತವ್ಯ. ಆ ಹುಡುಗಿಯರ ಮನೆಯವರಿಗಂತೂ ಬುದ್ಧಿಯಿಲ್ಲ. ಆ ವೆಂಕಟೇಶನೊಬ್ಬ ಮೂರ್ಖ. ಸ್ವಲ್ಪ ಕೂಡಾ ವ್ಯವಹಾರ ಜ್ಞಾನವಿಲ್ಲ. ಮದುವೆಗೆ ಬೆಳೆದ ತಂಗಿ

ಯನ್ನು ಆ ಲಿಂಗಾಯತನ ಜತೆಗೆ ಕಳಿಸುತ್ತಾನೆ. ಅವರಿಬ್ಬರೂ ತಿರುಗಾಡಲೂ ಹೋಗುವರಂತೆ. ಹೌದೇ ಕೊಟಬಾಗಿ?"

"ಹೌದು."

"ನೀವು ಅಲ್ಲೇ ಇದ್ದು ಬಾಯಿ ಮುಚ್ಚಿಕೊಂಡು ಸುಮ್ಮನಿದ್ದೀರಲ್ಲಾ!"

"ಮತ್ತೇನು ಮಾಡಲಿ?" ಎಂದು ಬೇಸರದ ದನಿಯಲ್ಲಿ ನುಡಿದ ಕೊಟಬಾಗಿ.

"ವೆಂಕಟೇಶನಿಗೆ ತಿಳಿಹೇಳಿ ಇದನ್ನೆಲ್ಲ ನಿಲ್ಲಿಸಲು ಬರುವದಿಲ್ಲವೇ?"

"ಅವನು ನನ್ನ ಮಾತು ಕೇಳಿಯಾನೆಂಬ ಭರವಸೆಯಿಲ್ಲ. ಸದಾನಂದ ಅಂದರೆ ಅವನೂ ಬಿದ್ದು ಸಾಯುತ್ತಾನೆ."

"ಅವರ ಅಣ್ಣ? ತಂದೆ?"

"ಅವರೊಡನೆ ನನಗೆ ವಿಶೇಷ ಪರಿಚಯವಿಲ್ಲ. ಇಂಥದನ್ನೆಲ್ಲ ಹ್ಯಾಗೆ ಹೇಳುವದು?"

"ಏನಾದರೂ ಮಾಡಲೇಬೇಕು. ಇಲ್ಲವಾದರೆ ಬ್ರಾಹ್ಮಣ್ಯವೇ ಹಾಳಾಗಿ ಹೋದೀತು," ಎಂದ ದೇಶಪಾಂಡೆ.

ಕೆಲ ನಿಮಿಷ ಯೋಚಿಸುತ್ತಿದ್ದು ಅನಂತರ ಆತ ಹೇಳಿದ:

"ಆ ಶಾಂತಿಯ ದೊಡ್ಡಣ್ಣನಿಗೊಂದು ಪತ್ರ ಬರೆದು ಅವಳ ವಿಷಯವನ್ನೆಲ್ಲ ತಿಳಿಸಬೇಕು."

"ಅವನ ಮಾತನ್ನಾದರೂ ಎಲ್ಲಿ ಕೇಳುತ್ತಾಳಪ್ಪಾ ಆ ಹುಡುಗಿ!"

"ಆ? ಅಷ್ಟು ಗಂಡುಬೀರಿಯೆ?"

"ಈಚೆಗೆ ಬಹಳ ದಿಟ್ಟೆಯಾಗುತ್ತಿದ್ದಾಳಪ್ಪ. ಮೊನ್ನೆ ಮೊನ್ನೆ ಫೌಜದಾರ ಮುಧೋಳರಿಗೆ ಅವಳನ್ನು ಕೊಡುವ ಮಾತು ನಡೆದಿತ್ತಲ್ಲ? ಅವಳ ಅಣ್ಣನಿಗೂ ತಂದೆಗೂ ಕೊಡುವ ಮನಸ್ಸಿದ್ದಿತಂತೆ. ಆಗುವ ಮನಸ್ಸಿಲ್ಲ ಅಂತ ಹೇಳಿ ಇವಳೇ ಅದನ್ನು ಮುರಿದುಬಿಟ್ಟಳಂತೆ."

"ಫೌಜದಾರರು ಸುಮ್ಮನಾದರೇ?"

"ಮತ್ತೇನು ಮಾಡಿಯಾರು? ಈ ಸಲದ ಪರೀಕ್ಷೆ ಮುಗಿಯುವವರೆಗೆ ತಡೆಯೋಣ ಅಂತ ಅವಳ ದೊಡ್ಡಣ್ಣ ಹೇಳಿದ್ದಾನಂತೆ."

"ಹಾಗಿದ್ದರೆ ಅವನಿಗೊಂದು ಪತ್ರ ಬರೆಯುವದೇ ಒಳ್ಳೆಯ ಉಪಾಯ,"

ಎಂದ ದೇಶಪಾಂಡೆ. "ಫೌಜದಾರರಿಂದಲೂ ನಾವು ಸಹಾಯ ಪಡೆಯ ಬಹುದು....ಅವರು ನನಗೆ ಚೆನ್ನಾಗಿ ಗೊತ್ತು."

ಸಂಘದ ಹುಡುಗನೊಬ್ಬನನ್ನು ಹಿಡಿದು ಅವನಿಂದ ಪತ್ರವೊಂದನ್ನು ಬರೆಸಿ ಅಂಚೆಗೆ ಹಾಕಿದುದಾಯಿತು. ದೇಶಪಾಂಡೆ ಕೊಟಬಾಗಿ ಇಬ್ಬರೂ ಉತ್ಸುಕರಾಗಿ ಆ ಪತ್ರದ ಪ್ರತಿಕ್ರಿಯೆಗಾಗಿ ಕಾಯತೊಡಗಿದರು.

ಒಂದು ದಿನ ಮುಧೋಳರ ಮನೆಗೆ ಹೋಗಿ ಅವರನ್ನು ಕಂಡು ಬಂದ ದೇಶಪಾಂಡೆ.

"ಏನು ಬಂದಿರಿ? ಅಭ್ಯಾಸ ನೆಟ್ಟಗೆ ನಡೆದಿದೆಯೆ?"

"ಏನೋ ತನ್ನ ಪಾಡಿಗೆ ತಾನು ನಡೆದಿದೆ."

"ಸಂಘದ ಚಟುವಟಿಕೆ?"

"ಅದರಲ್ಲಿ ನಾನು ಹೆಚ್ಚಾಗಿ ಭಾಗವಹಿಸುವದಿಲ್ಲ ಸಾಹೇಬರೆ. ಸಾಂಸ್ಕೃತಿಕ ಕ್ಷೇತ್ರದಲ್ಲೇ ನನಗೆ ಮನಸ್ಸು."

"ಸರಿ. ಸರಿ. ಯಾವ ಕ್ಷೇತ್ರದಲ್ಲಿದ್ದರೂ ಹಿಂಸೆ ಗಿಂಸೆಗೆ ಮನಸ್ಸು ಮಾಡದಿದ್ದರಾಯ್ತು. ನಿಮ್ಮ ಸಂಘದ ಮೇಲೆ ನಮ್ಮದೊಂದು ಕಣ್ಣು ಯಾವಾಗಲೂ ಇದ್ದೇ ಇದೆ," ಎಂದು ಹೇಳಿ ಮುಧೋಳರು ಗಟ್ಟಿಯಾಗಿ ನಕ್ಕರು.

ದೇಶಪಾಂಡೆಗೆ ನಗೆ ಬರಲಿಲ್ಲ. ಅವನು ಗಂಭೀರ ಸ್ವರದಲ್ಲಿ ಹೇಳಿದ:

"ನಿಮಗೆ ಬರೀ ನಮ್ಮಂಥ ಧರ್ಮಾಭಿಮಾನಿಗಳ ಮೇಲೇ ಕಣ್ಣು. ಧರ್ಮ ಜಾತಿ ಸಂಸ್ಕೃತಿಗಳನ್ನೆಲ್ಲಾ ಹಾಳುಮಾಡುವ ಕಿಡಿಗೇಡಿಗಳ ಕಡೆಗೆ ಮಾತ್ರ ಸ್ವಲ್ಪವೂ ಲಕ್ಷ್ಯವಿಲ್ಲ."

ಮುಧೋಳರ ಧರ್ಮಾಭಿಮಾನಕ್ಕೆ ಆಘಾತವಾದಂತಾಯಿತು. ಅವರಲ್ಲಿನ ಪೋಲೀಸುತನ ಮರೆಯಾಗಿ ಒಳಗಡೆ ಅವಿತಿದ್ದ ಬ್ರಾಹ್ಮಣ್ಯ ಮುಖವೆತ್ತಿ ನಿಂತಿತು.

"ಏನ್ರೀ, ಹೀಗನ್ನುತ್ತೀರಿ? ಏನಾಗಿದೆ ಅಂಥದು ಇಲ್ಲಿ, ಈ ಊರಲ್ಲಿ?"

'ಕಾವ್ಯಕೂಟ'ದ ಕಥೆಯನ್ನೆಲ್ಲ ಸಾದ್ಯಂತವಾಗಿ ವಿವರಿಸಿ ಹೇಳಿ ದೇಶಪಾಂಡೆಯೆಂದ:

"ಆ ಹುಡುಗಿಯನ್ನು ನಿಮಗೆ ಕೊಡಬೇಕೆಂಬ ಮಾತು ನಡೆದಿದ್ದಿತಂತಲ್ಲ ಸಾಹೇಬರೆ?"

ಖಾಸಗಿ ವಿಷಯವನ್ನು ಕುರಿತು ಅನ್ಯರೊಡನೆ ಚರ್ಚಿಸುವ ಸ್ವಭಾವ ಮುಧೋಳರದಾಗಿರಲಿಲ್ಲ. ಅಂತೆಯೆ ಅವರು ದೇಶಪಾಂಡೆಯ ಪ್ರಶ್ನೆಯನ್ನು ಕಡೆಗಣಿಸಿ ಆ ವಿಷಯವನ್ನೆ ಬಿಟ್ಟು ಬೇರೆ ಮಾತೆತ್ತಿದರು :

" ಆ ಸದಾನಂದನೂ ಕಮ್ಯೂನಿಸ್ಟನೇನು ದೇಶಪಾಂಡೆ ?"

" ಪಾರ್ಟಿಯ ಸದಸ್ಯನೇನೂ ಅಲ್ಲ. ಆದರೂ ಕಮ್ಯೂನಿಸ್ಟರ ಬಗ್ಗೆ ಬಹಳ ಸಹಾನುಭೂತಿ ಅವನಿಗೆ. ಅನೇಕ ಕಮ್ಯೂನಿಸ್ಟರು ಅವನ ಗೆಳೆಯರು. ಅವರ ಪತ್ರಿಕೆಗಳಲ್ಲಿ ಇವನ ಕವಿತೆಗಳೂ ಪ್ರಕಟವಾಗುತ್ತವೆ. ಅವರು ಇಲ್ಲಿಗೆ ಬಂದಾಗ ಅವನ ರೂಮಿಗೆ ತಪ್ಪದೆ ಹೋಗುತ್ತಾರೆ."

" ಫೆಲೋ ಟ್ರ್ಯಾವಲರ್ ಅಲ್ಲವೇ ?"

" ಹೂಂ. ಹಾಗೆ ಹೇಳಬಹುದು. ಕಮ್ಯೂನಿಸ್ಟರು ಬಹಳ ಜೆರಿಕಿ ಮಂದಿ. ಎಲ್ಲಾ ಕಡೆಗೂ ತಮ್ಮ ಹಿಂಬಾಲಕರನ್ನು ಬೆಳಸಿಕೊಳ್ಳುವದು ಅವರ ತಂತ್ರ. ಇತ್ತೀಚೆಗೆ ಕತೆ ಕವಿತೆ ಕಾದಂಬರಿಗಳಲ್ಲೂ ಕೂಡಾ ಕಮ್ಯೂನಿಸ್ಟ್ ಪ್ರಚಾರ ನಡೆದಿದೆ, ನಿಮಗೆ ಗೊತ್ತಿಲ್ಲವೆ ?"

" ಇಲ್ಲ ಮಾರಾಯಾ. ನಮಗೂ ಕವಿತೆ ಕತೆಗಳಿಗೂ ಎಲ್ಲಿಯ ಸಂಬಂಧ ? ಅವುಗಳನ್ನೆಲ್ಲ ಓದಲು ನಮಗೆ ಪುರಸತ್ತಾದರೂ ಎಲ್ಲಿಂದ ಸಿಗಬೇಕು ?"

" ನೀವು ಹೀಗೇ ಅಲಕ್ಷ್ಯ ಮಾಡಿದಿರೆಂದರೆ ಕಮ್ಯೂನಿಸ್ಟರು ಕಡಿವಾಣ ವಿಲ್ಲದ ಕುದುರೆಯಂತಾಗುತ್ತಾರೆ. ಇಂದಿಲ್ಲ ನಾಳೆ ನಮ್ಮ ದೇಶ ನಮ್ಮ ಧರ್ಮ ನಮ್ಮ ಸಂಸ್ಕೃತಿ ಎಲ್ಲಾ ನಾಶವಾಗುವದು ನಿಶ್ಚಿತ."

ಮತ್ತೆ ಮುಧೋಳರ ಧರ್ಮಾಭಿಮಾನ ಕೆರಳಿ ನಿಂತಿತು. " ಹೌದು. ಇದಕ್ಕೇನಾದರೂ ಉಪಾಯ ಮಾಡಬೇಕು," ಎಂದು ಅವರು ಮನಸ್ಸಿನಲ್ಲೇ ಹೇಳಿಕೊಂಡರು. ಕಮ್ಯುನಿಸ್ಟರ ಚಲನವಲನಗಳನ್ನು ನಿರೀಕ್ಷಿಸುವುದು ತಮ್ಮ ಅನೇಕ ಕರ್ತವ್ಯಗಳಲ್ಲೊಂದು. ತಾವು ಈ ನಗರದಲ್ಲಿ ಅಧಿಕಾರದಲ್ಲಿರುವವರೆಗಂತೂ ಇಲ್ಲಿ ಕಾಪ್ರೇಡುಗಳು ತಲೆಯೆತ್ತದಂತೆ ನೋಡಿಕೊಳ್ಳಬೇಕು....

ಹಾಗೆ ಯೋಚಿಸಿ ಅವರು ದೇಶಪಾಂಡೆಯನ್ನು ಕುರಿತು ಹೇಳಿದರು :

" ನೀವು ನಿಶ್ಚಿಂತರಾಗಿರಿ. ನಾನೆಲ್ಲ ವ್ಯವಸ್ಥೆ ಮಾಡುತ್ತೇನೆ."

ಅಂದು ಸಂಜೆ ಕೊಟಬಾಗಿ ಬರುತ್ತಲೂ ಅವನ ಮುಂದೆ ಪೇಢೆಗಳ ತಟ್ಟೆಯನ್ನಿಟ್ಟು ದೇಶಪಾಂಡೆಯೆಂದ :

"ತಗೊಳ್ಳಿರಿ ಪೇಢೆ. ಕೆಲಸ ಸಾಧಿಸಿಕೊಂಡು ಬಂದಿದೇನೆ."

"ಏನೇನಾಯ್ತು?"

ದೇಶಪಾಂಡೆ ಎಲ್ಲವನ್ನೂ ವರದಿಯೊಪ್ಪಿಸುತ್ತಲೂ ಕೊಟಬಾಗಿ ಸಮಾಧಾನದಿಂದ ಹೇಳಿದ:

"ಚಲೋದಾಯ್ತು. ಅಕ್ಕಸಾಲಿಗನೇ ಕಿವಿ ಚುಚ್ಚಿದರೆ ನೆಟ್ಟಗೆ."

ಒಂದೆರಡು ಪೇಢೆಗಳನ್ನು ತಿಂದು ನೀರು ಕುಡಿಯುತ್ತಾ ಕೊಟಬಾಗಿ ಮತ್ತೆ ಹೇಳಿದ:

"ಅಕ್ಕಸಾಲಿಗ ನಿಮ್ಮ ಕಿವಿಯನ್ನೂ ಚುಚ್ಚಲಿಕ್ಕೆ ಬಂದಾನಪ್ಪ. ಹುಷಾರಿ!"

"ನನ್ನ ಕಿವಿಯನ್ಯಾಕೆ?"

"ಆರ್. ಎಸ್. ಎಸ್. ಮೇಲೂ ಸರಕಾರದ ವಕ್ರದೃಷ್ಟಿಯಿದೆ. ಮರೆತೇ ಬಿಟ್ಟರೋ ಏನು?"

"ಸದ್ಯಕ್ಕಂತೂ ಏನೂ ಇಲ್ಲ. ಅಲ್ಲದೆ ಮುಧೋಳರೂ ನಮ್ಮವರೇ. ನನ್ನ ವಿರುದ್ಧವಾಗಿ ಅವರೇನನ್ನೂ ಮಾಡುವದಿಲ್ಲ."

"ಈ ಪೋಲೀಸ್ ಖಾತೆಯವರಿಗೆ ಜಾತಿ ಅನ್ನುವದೇ ಇಲ್ಲ ದೇಶಪಾಂಡೆ. ಅವರನ್ನು ನಂಬಿದವರು ಬದುಕುವದಿಲ್ಲ. ಹುಷಾರಿ."

ದೇಶಪಾಂಡೆ ನಗುನಗುತ್ತಾ ನುಡಿದ:

"ಬ್ರಿಟಿಷ ಸರಕಾರವಿದ್ದಾಗ ಹಾಗಿತ್ತು. ಈಗ ಬಿಳೀ ಟೊಪ್ಪಿಯವರ ರಾಜ್ಯ ಬಂದ ಮೇಲೆ ಪೋಲೀಸ್ ಖಾತೆಯೂ ಸಡಿಲವಾಗಿ ಕೆಟ್ಟು ಹೋಗಿದೆ ಕೊಟಬಾಗಿ. ಎಲ್ಲಾ ಆಫೀಸರುಗಳೂ ತಮ್ಮ ತಮ್ಮ ಜಾತಿಯವರನ್ನ ಒಳಗಿಂದೊಳಗೇ ಎತ್ತಿ ಹಿಡಿಯುತ್ತಿದ್ದಾರೆ. ಅದರಲ್ಲೂ ನಮ್ಮ ಮುಧೋಳರಂತೂ ಪಕ್ಕಾ ಜಾತ್ಯಾಭಿಮಾನಿಗಳು...."

"ಐ ಸೀ!" ಎಂದಿಷ್ಟೆ ನುಡಿದು ಮತ್ತೆ ಪೇಢೆ ನುಂಗತೊಡಗಿದ ಕೊಟಬಾಗಿ. ಮುಧೋಳರ ವಿಚಾರವಾಗಿ ಅವನಿಗೆ ಅಂಥ ಆದರವೇನೂ ಇರಲಿಲ್ಲ. ತನ್ನ ಪ್ರೇಮಪಾತ್ರಳಾದ ಶಾಂತಳನ್ನು ಮದುವೆಯಾಗಲು ಯತ್ನಿಸುವ ಆ ಆಸಾಮಿಯ ಬಗ್ಗೆ ಕೊಟಬಾಗಿಯ ಮನಸ್ಸಿನಲ್ಲಿ ಅವನಿಗರಿವಾಗದಂತೆಯೆ

ವಿರೋಧಭಾವ ಬೆಳೆದು ಬಂದಿದ್ದಿತು. ಶಾಂತಳ ಆಸೆಯನ್ನು ಆತನಿನ್ನೂ ತ್ಯಜಿಸಿರಲಿಲ್ಲ. ಸದಾನಂದನೊಬ್ಬ ದೂರವಾದಲ್ಲಿ ವಿಶ್ವಪ್ರಯತ್ನಪಟ್ಟು ತಾನು ಅವಳನ್ನು ಒಲಿಸಿಕೊಳ್ಳಬಹುದೆಂದೇ ಆತ ನಂಬಿಕೊಂಡಿದ್ದ. ಸದಾನಂದನ ಮಡಿಲಿನಿಂದ ಅವಳು ಫೌಜುದಾರರ ಕೈಗೆ ಬೀಳುವ ಚಿತ್ರವನ್ನು ಕಣ್ಮುಂದೆ ಕಲ್ಪಿಸಿಕೊಂಡಾಗಲೆಲ್ಲ ಅವನ ಎದೆ ಉರಿಯುತ್ತಿತ್ತು.

# ೧೬

ಆ ದಿನ ಹನ್ನೊಂದು ಗಂಟೆಗೆ ಸರಿಯಾಗಿ ರಾಮಚಂದ್ರ ಕಚೇರಿಯಲ್ಲಿ ಅಡಿಯಿರಿಸುತ್ತಲೂ ಮ್ಯಾನೇಜರ್ ಗುರುಬಸಪ್ಪ ಅವನನ್ನು ಕರೆದು ವಿಚಿತ್ರವಾಗಿ ನಗುತ್ತಾ, ಒಂದು ಕಾಗದವನ್ನು ಅವನ ಕೈಗಿತ್ತು ಹೇಳಿದ:

"ಕವರಿನ ಮೇಲೆ ಅಡ್ರೆಸ್ ನೆಟ್ಟಗೆ ಬರೆದಿರಲಿಲ್ಲ. ನಿಮ್ಮದೆಂದು ಗೊತ್ತಾಗದೆ ಒಡೆದು ಬಿಟ್ಟೆ. ಓದಿದ ಮೇಲೆ ಗೊತ್ತಾಯಿತು. ಏನೂ ತಿಳಿದುಕೋಬೇಡಿರಪ್ಪ."

ರಾಮಚಂದ್ರ ಮಱುಮಾತನಾಡದೆ ಕಾಗದ ತೆಗೆದುಕೊಂಡು ಮೆಟ್ಟಲು ಹತ್ತಿ ಕಾರಕೂನರ ಕೊಟಡಿಗೆ ಬಂದು ತನ್ನ ಕುರ್ಚಿಯ ಮೇಲೆ ಕುಳಿತು ನಿಧಾನವಾಗಿ ಕಾಗದದ ಮೇಲೆ ದೃಷ್ಟಿಯೋಡಿಸಿದ. ನಾಲ್ಕು ಸಾಲು ಓದುವಷ್ಟರಲ್ಲಿ ಅವನ ಕಣ್ಣಿಗೆ ಕತ್ತಲೆ ಕವಿದಂತಾಯಿತು. ಬುದ್ಧಿಗೆ ಮಂಕು ಬಡೆದಂತಾಯಿತು. ಕೈಗೆ ಹಣೆಯಿಟ್ಟು ಮೂಢನಂತೆ ಕುಳಿತುಬಿಟ್ಟ ರಾಮಚಂದ್ರನನ್ನು ಕಂಡು ವೀರಣ್ಣ ಕಳವಳದ ದನಿಯಲ್ಲಿ ಕೇಳಿದ:

"ಯಾಕ್ರೀ, ಏನಾಯ್ತು ?"

ರಾಮಚಂದ್ರ ಉತ್ತರವೀಯದೆ ನಿಟ್ಟುಸಿರುಬಿಟ್ಟು ಮತ್ತೆ ಕಾಗದವನ್ನೋದಿಕೊಳ್ಳತೊಡಗಿದ.

"ಶ್ರೀ ರಾಮಚಂದ್ರರಾಯರಿಗೆ –

ನಿಮ್ಮ ಅಪರಿಚಿತ ಮಿತ್ರರೊಬ್ಬರ ನಮಸ್ಕಾರಗಳು.

ತರುವಾಯ, ಈ ಪತ್ರ ಬರೆಯಲು ಕಾರಣವೇನೆಂದರೆ: ನೀವೂ ನಮ್ಮ ಜಾತಿಗೆ ಸೇರಿದವರು. ಆದ್ದರಿಂದ ಒಂದು ಸಂಗತಿಯ ಬಗ್ಗೆ ನಾವು ನಿಮ್ಮನ್ನು ಎಚ್ಚರಿಸಲೇ ಬೇಕಾಗಿದೆ. ನಿಮ್ಮ ತಂಗಿ ಶಾಂತಾ ಅವರ ಮದುವೆಯನ್ನು ಇಲ್ಲಿಯವರೆಗೂ ಮಾಡದೆ ಅವರನ್ನು ಕಾಲೇಜಿಗೆ ಕಳಿಸಿ ನೀವು ದೊಡ್ಡ ತಪ್ಪು ಮಾಡಿದ್ದೀರಿ. ಏನಾದರೂ ಪ್ರಯತ್ನಪಟ್ಟು ಯಾರಿಗಾದರೂ ಕೊಟ್ಟು ತಂಗಿಯ ಮದುವೆ ತೀರಿಸಿಬಿಡುವುದು ನಿಮ್ಮ ಕರ್ತವ್ಯವಾಗಿತ್ತು. ನೀವು ಅದನ್ನು ಮಾಡಲಿಲ್ಲ. ಅಲ್ಲದೆ, ಕಾಲೇಜಿಗೆ ಹೋಗುತ್ತಿರುವ ಬೆಳೆದ ಹುಡುಗಿಯ ನೀತಿ ನಡತೆಗಳ ಕಡೆಗೂ ನಿಮ್ಮ ಲಕ್ಷ್ಯವಿಲ್ಲ. ಆಕೆಗೆ ನೀವು ಪೂರ್ಣ ಸ್ವಾತಂತ್ರ್ಯ ಕೊಟ್ಟಿರುವಂತೆ ಕಾಣುತ್ತದೆ. ಆ ಸ್ವಾತಂತ್ರ್ಯವನ್ನು ಅವಳು ಯಾವ ರೀತಿ ಉಪಯೋಗಿಸಿಕೊಳ್ಳುತ್ತಿರುವಳೆಂಬುದನ್ನು ಕುರಿತು ನೀವು ಒಮ್ಮೆಯಾದರೂ ವಿಚಾರಿಸಿದ್ದೀರಾ? ನನಗೆ ಗೊತ್ತಿದ್ದ ಹಾಗೆ ನಿಮ್ಮ ತಂಗಿ, ನಿಮ್ಮ ಮನೆಯ ಹತ್ತಿರದ ಕೊಟಡಿಯಲ್ಲಿರುವ ಸದಾನಂದ ಎಂಬ ಲಿಂಗಾಯತ ಯುವಕನೊಡನೆ ಬಹಳ ಸಲಿಗೆಯಿಂದ ವರ್ತಿಸುತ್ತಿದ್ದಾಳೆ. ಅವನ ಕೊಟಡಿಗೆ ಹೋಗಿ ಹರಟೆ ಹೊಡೆಯುವದು, ಕಾವ್ಯಗಾಯನ ಮಾಡುವದು, ಅವನೊಡನೆ ಏಕಾಂತ ಸ್ಥಳಗಳತ್ತ ತಿರುಗಾಡಲು ಹೋಗುವದು ಇಂಥದನ್ನೆಲ್ಲ ಮಾಡುತ್ತಿದ್ದಾಳೆ. ಇದಾವುದರ ಗಂಧವೂ ನಿಮಗಿದ್ದಂತೆ ತೋರುವದಿಲ್ಲ. ಕಾಲೇಜಿನಲ್ಲೆಲ್ಲ ನಿಮ್ಮ ತಂಗಿಯ ಸ್ವೇಚ್ಛಾಚಾರದ ಚರ್ಚೆ ನಡೆದಿದೆ. ಅದನ್ನೆಲ್ಲ ಅವಳು ನಿರ್ಲಕ್ಷಿಸಿ ಸದಾನಂದನ ಸ್ನೇಹವನ್ನು ಹಟದಿಂದ ಮುಂದುವರೆಸುತ್ತಿರುವಂತಿದೆ. ಇದರ ಪರಿಣಾಮ ನೆಟ್ಟಗಾಗುವದಿಲ್ಲವೆಂದು ನಾವು ನಿಮಗೆ ತಿಳಿಸಬೇಕಾಗಿಲ್ಲವಷ್ಟೆ. ವಯಸ್ಸಿಗೆ ಬಂದ ಹುಡುಗಿ ಅಡ್ಡಹಾದಿ ಹಿಡಿದರೆ, ಒಂದು ವೇಳೆ ಆ ಸದಾನಂದ ನೊಡನೆ ಓಡಿಹೋಗಿಬಿಟ್ಟರೆ ನಿಮಗೂ ನಿಮ್ಮ ಮನೆತನಕ್ಕೂ ಮಾತ್ರವಲ್ಲ, ನಮ್ಮ ಸಮಾಜಕ್ಕೇ ದೊಡ್ಡ ಕಲಂಕ ತಗಲುವುದು. ಅದಕ್ಕೆಂದೇ ನಾವು ನಿಮಗೆ ಪತ್ರ ಬರೆದು ಎಚ್ಚರಿಸುತ್ತಿದ್ದೇವೆ. ನಿಮ್ಮ ತಂಗಿಯನ್ನು ಕೂಡಲೆ ಹಿಡಿತದಲ್ಲಿಟ್ಟುಕೊಂಡು ಅನ್ಯ ಜಾತಿಯ ಯುವಕರ ಸಹವಾಸವನ್ನು ತಪ್ಪಿಸ ಬೇಕು....ಆದಷ್ಟು ಬೇಗ ಅವಳಿಗೆ ಮದುವೆ ಮಾಡಿಬಿಟ್ಟರಂತೂ ಬಹಳ ಉತ್ತಮ.

ಇಂತು ನಿಮ್ಮ ಅಪರಿಚಿತ ಮಿತ್ರ."

ಕಾಗದವನ್ನೋದಿ ಮುಗಿಸಿ ಮತ್ತೆ ಕೈಗೆ ಹಣೆಯಿಟ್ಟು ಕುಳಿತುಕೊಂಡ ರಾಮಚಂದ್ರ. ವೀರಣ್ಣ ಪುನಃ ಕೇಳಿದ:

“ಏನಾಯಿತು ರಾಮಣ್ಣಾ? ಯಾರ ಪತ್ರ ಅದು? ಯಾರಿಗಾದರೂ ಜಡ್ಡೋ ಏನು?”

“ಇಲ್ಲ. ಅಂಥಾದ್ದೇನೂ ಇಲ್ಲ.”

“ಮತ್ತೆ?”

ಕಾಗದವನ್ನು ಕೋಟಿನ ಕಿಸೆಗೆ ತುರುಕುತ್ತ ರಾಮಚಂದ್ರ ಹೇಳಿದ:

“ಕಾಡುವ ಕಾಲ ವೀರಣ್ಣಾ. ಒಂದರ ಹಿಂದೊಂದರಂತೆ ಆಪತ್ತು ಬರುತ್ತಾ ಇವೆ.”

ಆ ಕಾಗದದಲ್ಲಿನ ವಿಷಯವನ್ನು ರಾಮಚಂದ್ರ ಹೇಳದಿದ್ದರೂ ಸಿಪಾಯಿ ಬಸಪ್ಪನ ಮೂಲಕ ಅದೇ ದಿನವೆ ಎಲ್ಲವೂ ತಿಳಿದುಬಂತು ವೀರಣ್ಣನಿಗೆ. ಆ ಪತ್ರ ವನ್ನೋದಿಕೊಂಡಿದ್ದ ಗುರುಬಸಪ್ಪ ಅಂದು ಮಧ್ಯಾಹ್ನ ಲಿಂಗಪ್ಪನವರೆದುರಿಗೆ ಆ ವಿಷಯವನ್ನು ಕುರಿತು ರಸವತ್ತಾಗಿ ವರ್ಣನೆ ಮಾಡುತ್ತಿದ್ದಾಗ ಕೊಟಡಿಯ ಹೊರಗಡೆ ನಿಂತುಕೊಂಡಿದ್ದ ಬಸಪ್ಪನಿಗೂ ಅದೆಲ್ಲವೂ ಗೊತ್ತಾಗಿದ್ದಿತು. ಬಸಪ್ಪ ಅಶಿಕ್ಷಿತನೂ ಅಸಂಸ್ಕೃತನೂ ಆದ ವ್ಯಕ್ತಿ. ರಾಮಚಂದ್ರನ ಬಗೆಗೆ ಅವನಲ್ಲಿ ಸಹಾನುಭೂತಿಯಿದ್ದಿತಾದರೂ ಹೆಣ್ಣಿಗೆ ಸಂಬಂಧಪಟ್ಟ ಇಂಥ ವಿಷಯವನ್ನು ಮನಸ್ಸಿನಲ್ಲಿಯೆ ಇಟ್ಟುಕೊಳ್ಳುವುದು ಅವನಿಂದಾಗಲಿಲ್ಲ. ಸಾಹೇಬರೇ ಆ ವಿಚಾರ ಚರ್ಚಿಸುತ್ತಿದ್ದಾಗ ತನ್ನಂಥವನು ಮಾತನಾಡಿದರೆ ಏನು ಹಾನಿ? ಎಂದುಕೊಂಡು ಆತ ಕಚೇರಿಯ ಎಲ್ಲ ಕೆಲಸಗಾರರೆದುರಿಗೂ ಆ ಪತ್ರದ ಕತೆಯನ್ನು ಬಣ್ಣಿಸಿ ಹೇಳಿದ. ರಾಮಚಂದ್ರನ ಬಗೆಗೆ ಎಲ್ಲರಿಗೂ ಮರುಕವಿದ್ದರೂ ಕೂಡ ಈ ಸಂದರ್ಭದಲ್ಲಿ ಅವರು ಅದನ್ನು ಮರೆತು ಅವನ ತಂಗಿಯ ಪ್ರೇಮ ಲೀಲೆಯನ್ನು ಹಾಸ್ಯಮಾಡಿ ನಕ್ಕರು. ನಗೆಯನ್ನೇ ಅರಿಯದಿದ್ದ ಆ ಅಲ್ಪ ಸಂಬಳದ ಬಡಪಾಯಿಗಳಿಗೆ ಅದೊಂದು ತಮಾಷೆಯ ವಿಷಯ ಸಿಕ್ಕಿದಂತಾಗಿತ್ತು. ಚಹದಂಗಡಿಯಲ್ಲಿ ಕುಳಿತುಕೊಂಡು, ಆ ಪ್ರಕರಣ ಹೇಗೆ ಕೊನೆಗೊಳ್ಳಬಹು ದೆಂಬುದರ ಬಗೆಗೆ ಅವರು ಚರ್ಚಿಸಿದರು. ವೀರಣ್ಣನೊಬ್ಬ ಮಾತ್ರ ಆ ಮಾತು ಕತೆಗಳಲ್ಲಿ ಭಾಗವಹಿಸಲಿಲ್ಲ; ಬೀಡಿಯ ಹೊಗೆಯನ್ನೆಳೆಯುತ್ತ ನಡುನಡುವೆ

ಚಹವನ್ನು ಗುಟುಕರಿಸುತ್ತ ಆತ ಮೌನವಾಗಿ ಕುಳಿತುಕೊಂಡಿದ್ದ. ರಾಮಚಂದ್ರ ನಂತೂ ಅಂದು ಕಚೇರಿಯನ್ನು ಬಿಟ್ಟು ಬಂದಿರಲಿಲ್ಲ.

ಅತ್ತ, ಲಿಂಗಪ್ಪನವರ ಕೊಟಡಿಯಲ್ಲಿಯೂ ಅದೇ ವಿಚಾರವಾಗಿ ಚರ್ಚೆ ನಡೆದಿತ್ತು. ಅರ್ಧ ಗಂಟೆಯವರೆಗೆ ಅದೇ ವಿಷಯ ನಡೆದಿದ್ದಿತಾದರೂ ಅವರಿಗೆ ಬೇಸರು ಬಂದಿರಲಿಲ್ಲ.

"ಈ ಜನಿವಾರದ ಜನರಿಗೆ ಹೀಗೇ ಆಗಬೇಕು ನೋಡಿರಿ ರಾವ್ ಸಾಹೇಬರೆ. ಇಂಥಾ ಹೊಡೆತ ಬಿದ್ದಾಗಲೇ ಇವರ ಸೊಕ್ಕು ಇಳಿಯುವದು," ಎನ್ನುತ್ತಿದ್ದ ಗುರುಬಸಪ್ಪ.

"ಕ್ವೈಟ್ ರೈಟ್. ನಮ್ಮ ಹುಡುಗ ಸದಾನಂದ ಬಂಗಾರದಂಥಾ ಕೆಲಸ ಮಾಡಿದ್ದಾನೆ. ತಾವು ಉಚ್ಚ ವರ್ಣದವರು, ಎಲ್ಲರಿಗಿಂತ ಹೆಚ್ಚಿನವರು ಅಂತ ಸೊಕ್ಕಿನಿಂದ ಮೆರೆಯುತ್ತಿರುವ ಬ್ರಾಹ್ಮಣರನ್ನು ಮೆತ್ತಗೆ ಮಾಡಲು ಸದಾನಂದ ನಂಥಾ ಸಾವಿರ ಸಾವಿರ ಯುವಕರು ಬೇಕು ಗುರುಬಸಪ್ಪಾ!"

"ಅಂದರೇನು, ಇವರಿಬ್ಬರ ಮದುವೆಗೆ ನೀವು ಒಪ್ಪುವಿರೆಂದ ಹಾಗಾಯಿತಲ್ಲ?"

"ಒಪ್ಪದೆ ಬಿಡುವರೇನೋ ಹುಚ್ಚಾ! ಇಂಥಾ ಉತ್ತಮ ಸಂಧಿ ಯಾವಾಗಲೂ ಬರುತ್ತವೇನು?"

"ಅಲ್ಲ ರಾವ್‌ಸಾಹೇಬರೆ, ಅವಳು....ಹಾರುವರ ಹುಡುಗಿ."

"ಹಾರುವರ ಹುಡುಗಿಯನ್ನು ಲಿಂಗಾಯತರ ಹುಡುಗಿಯನ್ನಾಗಿ ಮಾಡುವದು ಎಷ್ಟು ಹೊತ್ತಿನ ಕೆಲಸ ಗುರುಬಸಪ್ಪಾ?"

"ಅಂದರೆ....ಅವಳಿಗೆ ಲಿಂಗ ಕಟ್ಟುವದು?"

"ಹೌದು ಮತ್ತೆ! ಲಿಂಗಗಳು ಇರುವದಾದರೂ ಯಾತಕ್ಕೆ? ಇಂಥವರಿಗೆ ಕಟ್ಟಲಿಕ್ಕೇ ಅಲ್ಲವೇನು? ನಿಜಗುಣಸ್ವಾಮಿಗಳಿಂದ ದೀಕ್ಷೆ ಕೊಡಿಸಿಬಿಟ್ಟ ರಾಯಿತು...."

"ಆದರೂ ಅವಳು ಬ್ರಾಹ್ಮಣರಾಕೆ...."

"ಬಸವಣ್ಣನವರೂ ಬ್ರಾಹ್ಮಣರಲ್ಲೇ ಹುಟ್ಟಿದವರೆಂಬುದನ್ನು ಮರೆಯ ಬಾರದು ಗುರುಬಸಪ್ಪಾ."

"ಹೌದು ಹೌದು," ಎಂದ ಗುರುಬಸಪ್ಪ.

ಸಂಜೆ, ಕಚೇರಿ ಮುಚ್ಚಿದ ಬಳಿಕ ವೀರಣ್ಣ ರಾಮಚಂದ್ರ ಇಬ್ಬರೂ ಜತೆಯಾಗಿಯೆ ಮನೆಗೆ ಹೊರಟರು. ಸ್ವಲ್ಪ ಹೊತ್ತು ಇಬ್ಬರೂ ಮೌನವಾಗಿದ್ದರು. ಅನಂತರ ವೀರಣ್ಣನೇ ಮಾತಿಗಾರಂಭಿಸಿದ.

"ಈಗ ನಡೆದದ್ದು ಕೇಳಿ ಬಹಳ ಕೆಟ್ಟೆನ್ನಿಸಿತು ನನಗೆ ರಾಮಣ್ಣಾ."

ರಾಮಚಂದ್ರ ಮಾತನಾಡದೆ ರಸ್ತೆಯನ್ನು ದಿಟ್ಟಿಸುತ್ತ ನಿಧಾನವಾಗಿ ಕಾಲೆಳೆದುಕೊಂಡು ನಡೆಯುತ್ತಿದ್ದ. ವೀರಣ್ಣನೇ ಮತ್ತೆ ಹೇಳಿದ:

"ಆ ಪತ್ರದ ವಿಷಯ ಆಫೀಸಿನಲ್ಲಿ ಎಲ್ಲರಿಗೂ ಗೊತ್ತಾಗಿ ಹೋಗಿದೆ ರಾಮಣ್ಣಾ. ಗುರುಬಸಪ್ಪ ನೋಡಿದ್ದನಂತಲ್ಲ?"

"ಹೌದು," ಎಂದ ರಾಮಚಂದ್ರ. "ನನ್ನ ಹಣೆಬರಹವೇ ಕೆಟ್ಟದು. ಯಾರೇನು ಮಾಡಬೇಕು?"

ಮತ್ತೆ ಐದಾರು ನಿಮಿಷ ಮೌನ.

"ಆ ಪತ್ರದ ಸಂಗತಿಯೆಲ್ಲಾ ನಿಜವೇ ಅಂತ ನಂಬುವದಾದರೂ ಹ್ಯಾಗೆ ರಾಮಣ್ಣಾ?"

ರಾಮಣ್ಣ ಮತ್ತೆ ಮೌನ.

"ಎಲ್ಲಾ ನಂಬುವದಕ್ಕಾಗದಿದ್ದರೂ ಇದರ ಬಗ್ಗೆ ವಿಚಾರಣೆ ಮಾಡಿ ತಂಗಿಯಲ್ಲಿ ತಪ್ಪಿದ್ದರೆ ಒಳ್ಳೆಯ ಮಾತಿನಿಂದ ಬುದ್ಧಿ ಹೇಳಿರಿ ರಾಮಣ್ಣಾ. ಫೌಜದಾರರೊಡನೆ ಆಗಲೆ ಮದುವೆಯಾಗಿ ಹೋಗಿದ್ದರೆ ಈ ಪ್ರಸಂಗವೇ ಬರುತಿರಲಿಲ್ಲ."

"ಹೌದು," ಎಂದ ರಾಮಚಂದ್ರ.

"ಈಗಲಾದರೂ ಏನಂತೆ. ನೀವೂ ಹಿರಿಯರೂ ಕೂಡಿ ಹುಡುಗಿಗೆ ಬುದ್ಧಿ ಹೇಳಿ ಕೂಡಲೆ ಮದುವೆಗೆ ಒಪ್ಪಿಸಿಬಿಡಿರಿ. ಫೌಜದಾರರಂತೂ ತಯಾರಾಗಿದ್ದೇ ಇದ್ದಾರೆ."

"ಈ ಪತ್ರ ಬರೆದವರು ಫೌಜದಾರರಿಗೂ ಈ ವಿಷಯ ಬರೆದಿರಬಹುದೇ ವೀರಣ್ಣಾ?"

"ಯಾರಿಗೆ ಗೊತ್ತು? ಹಾಗೂ ಆಗಬಹುದು. ಸಮಾಜದಲ್ಲಿ ಕೆಟ್ಟ ಜನರೇ ಬಹಳ ರಾಮಣ್ಣಾ. ಒಬ್ಬರಿಗೆ ಚಲೋದಾಗಲಿ ಅಂತ ಬಯಸುವವರು

ಕಡಿಮೆ. ಯಾರದಾದರೂ ಕಲ್ಯಾಣವಾಗುತ್ತಿದ್ದರೆ ಅದಕ್ಕೆ ಕಲ್ಲುಹಾಕಿ ಮೋಜು ನೋಡುವ ಮಂದಿಯೇ ಬಹಳ."

"ಹೌದು, ಹೌದು," ಎಂದ ರಾಮಚಂದ್ರ.

"ಎಲ್ಲಾ ಕೆಲಸ ಬಿಟ್ಟು ಮೊದಲು ತಂಗಿಯನ್ನು ಮದುವೆಗೆ ತಯಾರು ಮಾಡಿರಿ ರಾಮಣ್ಣಾ."

"ಹೂಂ," ಎಂದ ರಾಮಚಂದ್ರ.

ಅವನು ಮನೆಗೆ ಬಂದಾಗ ಶಾಂತಾ ವೆಂಕಟೇಶ ಇಬ್ಬರೂ ಕಾಣಿಸಲಿಲ್ಲ.

"ಶಾಂತಿ ಇನ್ನೂ ಬಂದಿಲ್ಲವೇ?" ಎಂದು ಹೆಂಡತಿಯನ್ನು ಕೇಳಿದ.

"ಇಲ್ಲ. ಇವತ್ತೇನೋ ಸಭೆಯಿದೆಯಂತೆ. ಬರುವದಕ್ಕೆ ರಾತ್ರಿಯಾಗುವದೆಂತ ಹೇಳಿ ಹೋಗಿದ್ದಾಳೆ."

"ಇವರ ಸಭೆ....ಇವರ ಭಾಷಣ....ಇವರ ಚಕ್ಕಂದ....ನನಗಿಲ್ಲಿ ಕುತ್ತಿಗೆಗೆ ಸಂಕಟ," ಎಂದು ಗೊಣಗಿಕೊಳ್ಳುತ್ತ ರಾಮಚಂದ್ರ ತಂದೆಯ ಹತ್ತಿರ ಕುಕ್ಕರಿಸಿದ.

'ಮಧ್ವವಿಜಯ'ವನ್ನೋದುತ್ತ ಕುಳಿತಿದ್ದ ರಾಯರು ಕತ್ತೆತ್ತಿ, ಮಗನ ಚಿಂತಾಗ್ರಸ್ತ ಮುದ್ರೆಯನ್ನು ಕಂಡು,

"ಯಾಕೆ ರಾಮಣ್ಣಾ? ಮತ್ತೇನಾಯಿತು?" ಎಂದರು.

"ಆಗುವದೇನೂ ಉಳಿಯಲಿಲ್ಲ. ನಮ್ಮ ಮಾನ ಮರ್ಯಾದೆ ಎಲ್ಲಾ ಹೋಗುವ ಪ್ರಸಂಗ ಬಂತು."

"ಹಾ! ಆದದ್ದಾದರೂ ಏನು?" ರಾಯರು ಕೊಂಚ ಉದ್ವಿಗ್ನರಾಗಿ ಕೇಳಿದರು.

ರಾಮಣ್ಣ ಮಾತನಾಡದೆ ಪತ್ರವನ್ನು ತೆಗೆದು ತಂದೆಯ ಕೈಗಿತ್ತು, ಮುಖವನ್ನು ಗೋಡೆಯತ್ತ ತಿರುಗಿಸಿ ಕುಳಿತುಕೊಂಡ. ಪುಸ್ತಕವನ್ನು ಬದಿಗಿರಿಸಿ ರಾಯರು ನಿಧಾನವಾಗಿ ಪತ್ರವನ್ನೋದಿಕೊಂಡರು. ಅದರಲ್ಲಿನ ಒಕ್ಕಣೆಯಿಂದಾಗಿ ಮನಸ್ಸಿನಲ್ಲಿ ತಲೆದೋರಿದ ಅಶಾಂತಿಯನ್ನು ಮುಖದಲ್ಲಿ ವ್ಯಕ್ತಗೊಳಿಸದೆ ಅವರು ಗಂಭೀರಸ್ವರದಲ್ಲಿಯೆ ಹೇಳಿದರು:

"ಈ ಪತ್ರದ ಕೆಳಗೆ ಸಹಿಯೇ ಇಲ್ಲವಲ್ಲ ರಾಮಣ್ಣಾ?"

"ಇಂಥ ಪತ್ರಕ್ಕೆ ಯಾರೂ ಸಹಿ ಮಾಡುವದಿಲ್ಲ."

" ಅಂದಬಳಿಕ ಇಂಥ ಪತ್ರದಿಂದ ನೀನು ತಲೆಕೆಡಿಸಿಕೊಳ್ಳುವ ಕಾರಣವೂ ಇಲ್ಲ. ಇವರು ನಿಜವಾಗಿಯೂ ನಮ್ಮ ಅಭಿಮಾನಿಗಳಾಗಿದ್ದರೆ ಸಮಕ್ಷಮ ಬಂದು ನಮ್ಮೆದುರಿಗೇ ಈ ಮಾತು ಹೇಳಬಹುದಾಗಿತ್ತು. ಅದನ್ನು ಬಿಟ್ಟು ಹೆಸರು ಹಾಕದೆ ಪತ್ರ ಬರೆದಿದ್ದಾರೆಂದ ಮೇಲೆ ಇದರಲ್ಲೇನೋ ದುರುದ್ದೇಶವಿರಬೇಕೆಂದು ನನಗನ್ನಿಸುತದೆ."

" ಇಂಥ ಮಾತುಗಳನ್ನು ಎದುರಾ ಎದುರು ಹೇಳಲು ಯಾರಿಗೂ ಧೈರ್ಯ ವಾಗುವದಿಲ್ಲಣ್ಣಾ."

" ಯಾಕೆ ಆಗುವದಿಲ್ಲ? ನಾವೇನು ತಿಂದು ಬಿಡುತ್ತೇವೆಯೇ ಅವರನ್ನು? ಛೆ....ಛೆ....ನಾನಿದನ್ನೆಲ್ಲ ನಂಬುವದಿಲ್ಲ ರಾಮಣ್ಣಾ – ಶಾಂತಿ ಬರಲಿ. ಸಮಾ ಧಾನದಿಂದ ಅವಳನ್ನು ಕೇಳೋಣ. ಅವಳು ದೊಡ್ಡವಳಾಗಿದ್ದಾಳೆ. ಅವಳಿಗೂ ತಿಳಿವಳಿಕೆಯಿದೆ. ಜವಾಬ್ದಾರಿ ಗೊತ್ತಿದೆ. ನಮ್ಮ ಶಾಂತಿ ಅಡ್ಡಹಾದಿ ಹಿಡಿ ಯುವದು ಸಾಧ್ಯವೇ ಇಲ್ಲ," ಎಂದರು ಮಧ್ವರಾಯರು.

ಅಂದು ನಗರಸಭಾ ಭವನದಲ್ಲಿ ಬೆಂಗಳೂರಿನ ಸಾಹಿತಿಗಳೊಬ್ಬರ ಉಪನ್ಯಾಸವಿತ್ತು. ಅದನ್ನು ಕೇಳಲು ಹೋಗಿದ್ದ ಶಾಂತಾ, ವೆಂಕಟೇಶ, ಲೀಲಾ ಮೂವರೂ ಕೂಡಿಯೆ ಮನೆಗೆ ಹಿಂದಿರುಗಿದರು.

ರಾತ್ರೆ, ತಂದೆ ಮಕ್ಕಳೆಲ್ಲರೂ ಒಂದೇ ಪಂಗ್ತಿಗೆ ಊಟಕ್ಕೆ ಕುಳಿತರು. ಜಾನಕಿ ಬಡಿಸಲು ನಿಂತುಕೊಂಡಳು.

ಊಟ ನಡೆದಿದ್ದ ಹಾಗೆ ಮಧ್ವರಾಯರು ಮೆಲ್ಲಗಿನ ದನಿಯಲ್ಲಿ ಹೇಳಿದರು :

" ಇವತ್ತು ರಾಮಣ್ಣನಿಗೆ ಯಾರಿಂದಲೋ ಒಂದು ಪತ್ರ ಬಂದಿದೆ ಶಾಂತೂ."

" ಪತ್ರ ?"

" ನಿನ್ನ ಬಗ್ಗೆ ಬರೆದಿದ್ದಾರೆ. ಅದರಲ್ಲಿ ಬರೆದದ್ದನ್ನು ತಂಗಿಗೆ ಹೇಳು ರಾಮಣ್ಣ."

ರಾಮಚಂದ್ರ ಕತ್ತೆತ್ತದೆ ಪತ್ರದ ಒಕ್ಕಣೆಯನ್ನು ವಿವರಿಸಿದ. ತನ್ನನ್ನು ಕಂಡು ಮರುಳಾಗಿರುವ ಕಾಲೇಜು ವಿದ್ಯಾರ್ಥಿಗಳಾರೋ ಕಿಡಿಗೇಡಿತನದಿಂದ ಇಂಥ ಪತ್ರ ಬರೆದಿರಬಹುದು, ಎಂದುಕೊಂಡು ಅದರ ವಿಚಾರ ಹೆಚ್ಚು ಚಿಂತಿಸದೆ ಮೌನವಾಗಿ ಊಟ ಮುಂದುವರೆಸಿದಳು ಶಾಂತಾ. ಅದು ವರ

ಸೆಟ್ಟಿಯ ಕೆಲಸವಾಗಿದ್ದರೂ ಆಗಿರಬಹುದು ಎಂದು ಅವಳಿಗೆನ್ನಿಸಿತು. ಇತ್ತೀಚೆಗೆ ವರಸೆಟ್ಟಿ ಮತ್ತು ಅವನಂಥ ಇತರ ಪೋಲಿಗಳ ಕೃತ್ಯಗಳಿಗೆ ಅವಳು ಮಹತ್ವ ಕೊಡುವುದನ್ನೆ ನಿಲ್ಲಿಸಿಬಿಟ್ಟಿದ್ದಳು. ಅವರ ಕೋತಿಯಾಟಗಳಿಗೆ ತಾತ್ಸಾರವೇ ತಕ್ಕ ಮದ್ದು ಎಂದು ಭಾವಿಸಿದ್ದ ಅವಳು ಈ ಪತ್ರವನ್ನೂ ಗಮನಕ್ಕೆ ತಂದು ಕೊಳ್ಳಲಿಲ್ಲ.

ಊಟ ಮುಗಿಸಿ ಎಲ್ಲರೂ ಪಡಸಾಲೆಗೆ ಬಂದ ಬಳಿಕ ಮಧ್ವರಾಯರು ಎಲೆಯಡಿಕೆ ಹಾಕಿಕೊಳ್ಳುತ್ತ ಮತ್ತೆ ಕೇಳಿದರು :

"ಆ ಪತ್ರದಲ್ಲಿ ಬರೆದದ್ದನ್ನು ನಾನೇನು ನಂಬುವದಿಲ್ಲ ಶಾಂತೂ. ರಾಮಣ್ಣಗೆ ಮಾತ್ರ ಬಹಳ ದುಃಖವಾಗಿದೆ. ಅದಕ್ಕಾಗಿ ಕೇಳುತ್ತೇನೆ. ಸಿಟ್ಟಾಗ ಬೇಡವ್ವಾ. ಸದಾನಂದರೊಡನೆ ನೀನು ವಾಕಿಂಗ್ ಹೋಗುವದು ನಿಜವಲ್ಲವಷ್ಟೆ ?"

ಅದೆಲ್ಲ ನಿಜವೆಂದು ತಾನು ಹೇಳಿದಲ್ಲಿ ಅಣ್ಣ ತಂದೆ ಇಬ್ಬರಿಗೂ ಬಹಳ ವ್ಯಸನವಾಗುವದೆಂದು ಅವಳಿಗೆ ಗೊತ್ತಿದ್ದಿತಾದರೂ ಆಗ ಸುಳ್ಳಾಡಲು ಅವಳಿಗೆ ಮನಸ್ಸಾಗಲಿಲ್ಲ. ವ್ಯಸನವಾದರಾಯಿತು, ಒಂದಿಲ್ಲೊಂದು ದಿನ ಆಗಲೇ ಬೇಕಾಗಿದ್ದುದು ಇಂದೇ ಆಗುತ್ತದಷ್ಟೆ....

"ಹೌದಣ್ಣಾ. ವಾಕಿಂಗ್ ಹೋಗುವದು ನಿಜ."

ಕಣ್ಣೆವೆಗಳನ್ನು ಮುಚ್ಚಿ ಒಂದೆರಡು ನಿಮಿಷ ಶಿಲಾಮೂರ್ತಿಯಂತೆ ಅಲುಗಾಡದೆ ಕುಳಿತುಕೊಂಡಿದ್ದರು ಮಧ್ವರಾಯರು. ಅನಂತರ ನಿಧಾನವಾಗಿ ದನಿಯೆತ್ತಿ,

"ಹಾಗಾದರೆ ಈ ಪತ್ರದಲ್ಲಿರುವದೆಲ್ಲಾ ನಿಜ ಅನ್ನುವಿಯಾ ?" ಎಂದರು.

"ವಾಕಿಂಗ್ ಹೋಗುವದು, ಮಾತಾಡುವದು ನಿಜ. ಆದರೆ, ಇವರು ಸೂಚಿಸಿದ ಹಾಗೆ ನಾವು ಅಡ್ಡ ಹಾದಿಯನ್ನೇನೂ ಹಿಡಿದು ಹೊರಟಿಲ್ಲ ಅಣ್ಣಾ."

"ಯಾರೋ ನೀಚರು ಬರೆದಿದ್ದಾರು. ಅಂಥವರ ಮಾತನ್ನೆಲ್ಲಾ ನಾವು ಲಕ್ಷಿಸಬಾರದು ಅಣ್ಣಾ. ಸದಾನಂದ ಒಳ್ಳೆಯವರು," ಎಂದ ವೆಂಕಟೇಶ.

ರಾಮಚಂದ್ರನಿಗೆ ಸಹನೆ ತಪ್ಪಿತು. ಆತ ತಮ್ಮನನ್ನು ಮೂದಲಿಸುತ್ತ ಮಾತನಾಡಿದ :

"ಒಳ್ಳೆಯವರು ಅಂತ ತಂಗಿಯನ್ನೇ ಅವರಿಗರ್ಪಿಸಿ ನಮ್ಮನ್ನೆಲ್ಲ ಉದ್ಧಾರ

ಮಾಡಿಬಿಡು! ನಿನಗೆ ಸ್ವಲ್ಪವಾದರೂ ವ್ಯವಹಾರಜ್ಞಾನ ಬೇಡವೇನು? ವಯಸ್ಸಿಗೆ ಬಂದ ಹುಡುಗಿಯನ್ನು ಹರಯದವರ ಸಂಗಡ ಜನರಿರದ ಜಾಗಕ್ಕೆ ವಾಕಿಂಗ್ ಹೋಗಲು ಬಿಡ್ತಾರೆಯೇ ಯಾರಾದರೂ? ನಿನಗಿದು ಗೊತ್ತಿದ್ದರೂ ಸುಮ್ಮನಿದ್ದೀಯಲ್ಲಾ!"

ವೆಂಕಟೇಶನಿಗೂ ತಾಳ್ಮೆ ತಪ್ಪಿತು. ಕೆರಳಿದ ದನಿಯಲ್ಲಿ ಅವನು ಹೇಳಿದ:

"ವಾಕಿಂಗ್ ಹೋದಷ್ಟಕ್ಕೆ ಏನು ಅಂಥಾ ಅನಾಹುತವಾಯಿತು? ಹಳೇಕಾಲದ ಮಂದಿ, ನಿಮಗೆ ಏನೂ ತಿಳಿಯುವದಿಲ್ಲ. ನಾವು ಕಾಲೇಜಿನಲ್ಲಿ ಓದುವವರೆಂಬುದೂ ನಿಮ್ಮ ನೆನಪಿನಲ್ಲಿಲ್ಲ. ವಾಕಿಂಗಿಗೇನು, ನಾನೂ ಹೋಗುತ್ತೇನೆ, ಸುಭೇದಾರರ ಸರಲೆಯೊಂದಿಗೆ. ನಮ್ಮನ್ನು ಕಂಡರಾಗದ ತುಂಟರಾರೋ ಒಂದು ಪತ್ರ ಬರೆದಷ್ಟಕ್ಕೆ ನೀನು ಬಾಯಿಗೆ ಬಂದಂತೆ ಮಾತಾಡುತ್ತೀಯಲ್ಲ!"

"ಮನೆತನದ ಜವಾಬ್ದಾರಿ ಹೊತ್ತಿದ್ದರೆ ನಿನಗೆ ತಿಳೀತಿತ್ತು," ಎಂದ ರಾಮಚಂದ್ರ.

"ಮಹಾ ಜವಾಬ್ದಾರಿ!" ಎಂದು ಅಣಕವಾಡಿ ವೆಂಕಟೇಶ ಎದ್ದು ಹೋದ. ಶಾಂತಾ ಯಾವಾಗಲೋ ತನ್ನ ಕೊಟಡಿಯನ್ನು ಸೇರಿಕೊಂಡಿದ್ದಳು.

೧೭

ನಿತ್ಯವೂ ಬೆಳಿಗ್ಗೆ ಒಂಭತ್ತು ಗಂಟೆಗೆ ಪಾಠ ಹೇಳಿಸಿಕೊಳ್ಳಲು ಬರುತ್ತಿದ್ದ ಶಿವಲಿಂಗ ಅಂದು ಒಂಭತ್ತೂವರೆಯಾದರೂ ಬಂದಿರಲಿಲ್ಲ. ಅವನ ಬರವನ್ನು ಕಾದು ಕಾದು ಬಲು ಬೇಸರಗೊಂಡಿದ್ದ ಸದಾನಂದ ಕೊಟಡಿಯಲ್ಲಿ ಶತಪಥ ಹಾಕತೊಡಗಿದ್ದ.

"ನಿಮ್ಮ ಈ ಶಿಷ್ಯ ಇವತ್ತು ಚಕ್ಕರ್ ಕೊಡುವ ಹಾಗೇ ಕಾಣಿಸುತ್ತದೆ. ಎಲ್ಲಾದರೂ ಇಸ್ಪೀಟು ಕುಟ್ಟುತ್ತ ಕೂತಿದ್ದಾನು," ಎಂದ ಕೊಟಬಾಗಿ. ಶಿವಲಿಂಗನಿಗೆ ವಿದ್ಯಾಭ್ಯಾಸಕ್ಕಿಂತ ಹೆಚ್ಚಾಗಿ ಇಸ್ಪೀಟಿನಲ್ಲಿಯೆ ಒಲವು. ಅವರ ಭೋಜನಾಲಯದ ಹತ್ತಿರವಿದ್ದ ಚಹದಂಗಡಿಯೊಂದರ ಅಟ್ಟದ ಮೇಲೆ ಅವನಂಥ ಹುಡುಗರು ಹಲವರು ಸೇರಿ ಹಗಲಿರುಳೂ ಇಸ್ಪೀಟಾಟದಲ್ಲಿ ತಲ್ಲೀನರಾಗಿರುತ್ತಿದ್ದರು. ಗಂಟೆಗೊಮ್ಮೆ ಚಹ ಸೇವಿಸುವುದು, ಬೀಡಿ ಎಳೆಯುವುದು, ಇಸ್ಪೀಟು ಕುಟ್ಟುವುದು. ಒಂದೊಂದು ದಿನ ಊಟಕ್ಕೂ ಬರುತ್ತಿರಲಿಲ್ಲ ಶಿವಲಿಂಗ. ಅವನ ತಂದೆಯೇ ಚಹದಂಗಡಿಗೆ ಹೋಗಿ ಮಗನನ್ನು ಎಳೆದುಕೊಂಡು ಬರಬೇಕಾಗುತಿತ್ತು. ಸದಾನಂದನ ಹತ್ತಿರ ಪಾಠ ಹೇಳಿಸಿಕೊಳ್ಳುವ ಪ್ರಸಂಗಕ್ಕಾರಂಭವಾದಂದಿನಿಂದ ಶಿವಲಿಂಗನಿಗೆ ಜೀವನವೆ ಬೇಸರವಾದ ಹಾಗಾಗಿತ್ತು. ಮನಸ್ಸಿಲ್ಲದ ಮನಸ್ಸಿನಿಂದ ಆತ ಪುಸ್ತಕ ಹಿಡಿದುಕೊಂಡು ಕೊಟಡಿಗೆ ಬಂದು ಒಂದು ತಾಸಿನವರೆಗೆ ಹೇಗೋ ಕುಳಿತು ಹೊರಟುಹೋಗುತ್ತಿದ್ದ. ಮತ್ತೆ ಮಾರನೆಯದಿನದವರೆಗೆ ಕೈಯಲ್ಲಿ ಪುಸ್ತಕ ಹಿಡಿಯುತ್ತಿರಲಿಲ್ಲ. ಮ್ಯಾಟ್ರಿಕ್

ವರ್ಗದವನಾದರೂ ಅವನಿಗೆ ಇಂಗ್ಲೀಷು ಕೊಂಚವೂ ಅಭ್ಯಾಸವಾಗಿರಲಿಲ್ಲ. ಆತ ಕಷ್ಟಪಟ್ಟಿದ್ದರಷ್ಟೆ ಅಭ್ಯಾಸವಾಗುವುದು!

"ವಾಕ್ಯದ ಆರಂಭಕ್ಕೆ ಕ್ಯಾಪಿಟಲ್ ಲೆಟರ್ ಬರೆಯುವದು ಕೂಡಾ ಗೊತ್ತಿಲ್ಲವಲ್ಲ ಇವನಿಗೆ ಕೊಟಬಾಗಿ?" ಎಂದು ಸದಾನಂದ ಹೇಳಿದಾಗ ಕೊಟಬಾಗಿ ನಗುತ್ತಾ, "ಇವನಿಗೆ ಕಲಿಸಲು ಸಾಕ್ಷಾತ್ ಬೃಹಸ್ಪತಿಯೇ ಬರಬೇಕು!" ಎನ್ನುತ್ತಿದ್ದ.

ಸದಾನಂದ ಕೇಳಿದ ಪ್ರಶ್ನೆಯೊಂದಕ್ಕೂ ಒಂದು ಸಲವೂ ಸರಿಯಾಗಿ ಉತ್ತರವೀಯಲಾಗಿರಲಿಲ್ಲ ಶಿವಲಿಂಗನಿಗೆ. ಏನಾದರೊಂದು ಅಸಂಬದ್ಧ ಉತ್ತರವಿತ್ತು ತುಟಿಗಳಲ್ಲಿ ನಗೆ ತುಳುಕಿಸುತ್ತಿದ್ದ ಶಿವಲಿಂಗ. ಅವನನ್ನು ಸುಧಾರಿಸುವುದು ಹೇಗೆಂಬುದೊಂದು ದೊಡ್ಡ ಸಮಸ್ಯೆಯಾಗಿತ್ತು ಸದಾನಂದನಿಗೆ.

"ಇವನೇನು ಮ್ಯಾಟ್ರಿಕ್ ಪಾಸಾಗಬಹುದೆಂದು ನನಗನಿಸುವದಿಲ್ಲ," ಎನ್ನುತ್ತಿದ್ದ ಸದಾನಂದ.

"ಮ್ಯಾಟ್ರಿಕ್ಕೇ ಇವನನ್ನು ದಾಟುತ್ತಿದೆಯಲ್ಲ!" ಎಂದು ನುಡಿದು ಗಹಗಹಿಸಿ ನಗುತ್ತಿದ್ದ ಕೊಟಬಾಗಿ.

ಒಂಭತ್ತೂವರೆಯಾಯಿತು. ಮತ್ತೆ ಹದಿನೈದು ನಿಮಿಷ ಕಳೆದರೂ ಶಿವಲಿಂಗ ಬರಲಿಲ್ಲ. ಸದಾನಂದ ಬಟ್ಟೆ ಧರಿಸಿ ಹೊರಗಡೆ ಹೊರಡುವ ಸಿದ್ಧತೆಗೆ ತೊಡಗಿದ. ಅಷ್ಟರಲ್ಲಿ ಬಾಗಿಲು ಕಿರ್ರೆಂದಿತು. ಶಿವಲಿಂಗನೇ ಬಂದನೇನೊ ಎಂದು ಸದಾನಂದ ಅತ್ತ ತಿರುಗಿದಾಗ ಬಾಗಿಲಲ್ಲಿ ಪೋಲೀಸು ಸಿಪಾಯಿಯೊಬ್ಬ ನಿಂತುಕೊಂಡಿದ್ದುದು ಕಾಣಿಸಿತು.

ತಮ್ಮ ಹತ್ತಿರ ಪೋಲೀಸರಿಗೇನು ಕೆಲಸವೋ ಎಂದು ಅಚ್ಚರಿಪಟ್ಟು ಕೊಳ್ಳುತ್ತಾ ಸದಾನಂದ ಕೇಳಿದ:

"ಏನು ಬೇಕು ನಿಮಗೆ?"

ಪೋಲೀಸನನ್ನು ನೋಡಿಯೂ ನೋಡದವನಂತೆ ಕೊಟಬಾಗಿ ಸಿಗರೇಟಿನ ಹೊಗೆ ಬಿಡುತ್ತ ಕುಳಿತಿದ್ದ.

"ಫೌಜದಾರರು ನಿಮ್ಮನ್ನು ಕರೆದುತರಲು ಹೇಳಿದ್ದಾರೆ."

ಸದಾನಂದ ವಿಸ್ಮಿತನಾಗಿ ಕೇಳಿದ:

"ನನ್ನನ್ನೇ? ಯಾಕೆ?"

"ಯಾಕೆಂಬುದು ನನಗೆ ಗೊತ್ತಿಲ್ಲ."

ಗೊಂದಲಕ್ಕೆ ಸಿಲುಕಿಕೊಂಡ ಸದಾನಂದನ ಮನಸ್ಸು ನೂರು ವಿಷಯಗಳನ್ನು ಕಲ್ಪಿಸಿಕೊಳ್ಳತೊಡಗಿತು. ತನಗೆ ಗೊತ್ತಿದ್ದ ಮಟ್ಟಿಗೆ ತಾನು ಯಾವ ಕಾನೂನನ್ನೂ ಉಲ್ಲಂಘಿಸಿಲ್ಲ. ಪೋಲೀಸು ಇಲಾಖೆಗೆ ತನ್ನಲ್ಲಿ ಆಸಕ್ತಿ ಹುಟ್ಟುವಂಥ ಯಾವ ಕಾರ್ಯಕ್ಕೂ ತಾನು ಕೈ ಹಾಕಿಲ್ಲ. ಎಲ್ಲಿಯೋ ಏನೋ ತಪ್ಪಾಗಿರಬೇಕು. ಬೇರೆ ಯಾರನ್ನಾದರೂ ಕರೆದುತರಲು ಹೇಳಿರಬಹುದು ಫೌಜದಾರರು. ತನ್ನೊಡನೆ ಏನು ಸಂಬಂಧ ಅವರಿಗೆ?

"ನನ್ನನ್ನೇ ಕರೆದುತರಲು ಹೇಳಿದ್ದಾರೇನ್ರೀ ನಿಮ್ಮ ಸಾಹೇಬರು? ನನ್ನ ಹೆಸರು ಸದಾನಂದ ಅಂತ...."

"ಹೌದು. ನಿಮ್ಮನ್ನೇ ಕರೆತರಲು ಹೇಳಿದ್ದಾರೆ."

ಆಗ ಮಾತ್ರ ಸದಾನಂದ ಹೊರಡಲೇಬೇಕಾಯಿತು. ಪೋಲೀಸು ಕಚೇರಿಗೆ ಬರುವವರೆಗೂ ಅವನ ಮಿದುಳು ರಭಸದಿಂದ ಕೆಲಸ ಮಾಡುತ್ತಿತ್ತು. "ಏನೋ ತಪ್ಪಿರಬೇಕು. ಏನೋ ತಪ್ಪಿರಬೇಕು," ಎಂದೇ ಆತ ಹೇಳಿಕೊಳ್ಳುತ್ತಿದ್ದ.

ಅವನನ್ನು ಕರೆದೊಯ್ದು ಫೌಜದಾರರ ಕೊಟಡಿಯ ಹೊರಗೆ ಒಂದು ಬೆಂಚಿನ ಮೇಲೆ ಕೂಡಿಸಿ ಪೋಲೀಸ ವರದಿ ಕೊಡಲು ಒಳಗಡೆ ನಡೆದ. ಪೋಲೀಸು ಕಚೇರಿಗೆ ಅದೇ ಮೊದಲಸಲ ಅಡಿಯಿರಿಸುತ್ತಿದ್ದ ಸದಾನಂದ ಕೊಂಚ ಕುತೂಹಲದಿಂದಲೇ ಸುತ್ತಲೂ ದೃಷ್ಟಿ ಬೀರಿದ. ಫೌಜದಾರರ ಕೊಟಡಿಯ ಬಾಗಿಲು ಸಾಕಷ್ಟು ಅಗಲವಾಗಿತ್ತು. ಅದಕ್ಕೆ, ಮೇಲೆತ್ತಿ ಕಟ್ಟಿದ ಬಿದಿರಿನ ಪರದೆ. ಒಳಗಡೆ ಕಲ್ಲ ಹಾಸು ಪೂರಾ ಸ್ವಚ್ಛವಾಗಿತ್ತು. ಕೊಂಚವೂ ಕಸ ಕಾಣುತ್ತಿರಲಿಲ್ಲ. ಸುಣ್ಣ ಬಳಿದ ಶುಭ್ರ ಗೋಡೆಗಳ ಮೇಲೆ "ಕ್ರೈಮ್ ಚಾರ್ಟ್"ನ ಕಪ್ಪು ಹಲಗೆ. ಪೋಲೀಸು ವೇಷದಲ್ಲಿರುವವರ ಹಲವು ಫೋಟೋಗಳು.

ಬಾಗಿಲಿನತ್ತ ಬೆನ್ನು ತಿರುಗಿಸಿ ಜಮಾದಾರನೊಬ್ಬ ಬರೆಯುತ್ತ ಕುಳಿತಿದ್ದುದು ಕಾಣುತ್ತಿತ್ತು. ಅವನ ತಲೆಯ ಮೇಲಿನ ಕಪ್ಪು ಬಣ್ಣದ, ಕೆಂಪು ಪಟ್ಟಿಯ ಟೋಪಿಯನ್ನೆ ದಿಟ್ಟಿಸುತ್ತಾ ಸದಾನಂದ ಕುಳಿತಿದ್ದ.

ಸಾಹೇಬರಿಂದ ಕರೆ ಬಂದಿತು.

ಸದಾನಂದ ಮೆಲ್ಲಗೆ ಹೆಜ್ಜೆಯಿಡುತ್ತ ಕೊಟಡಿಯಲ್ಲಿ ಪ್ರವೇಶಿಸಿದ. ಕೊಂಚ ಎತ್ತರಿಸಿದ ವೇದಿಕೆಯ ಮೇಲೆ ದೊಡ್ಡ ಮೇಜಿನ ಬಳಿ ಕುಳಿತಿದ್ದ ಮುಧೋಳರು ತಲೆಯನ್ನು ಮೇಲಕ್ಕೆತ್ತದೆ, ದೃಷ್ಟಿಯನ್ನು ಮಾತ್ರ ಅವನತ್ತ ತಿರುಗಿಸಿದರು. ಅವರ ಹಿಂಭಾಗದ ಗೋಡೆಯ ಮೇಲೆ ಗಾಂಧೀಜಿಯ ಭಾವ ಚಿತ್ರವಿತ್ತು. ಅದರ ಕೆಳಗೆ Mercy, Piety, Humanity ಎಂದು ಮೊದಲಾಗಿ ಇಂಗ್ಲೀಷಿನಲ್ಲಿ ಏನೇನನೊ ಬರೆದ ಫಲಕವೊಂದು ನೇತಾಡುತಿತ್ತು. ಗಾಂಧೀಜಿಯ ಚಿತ್ರವನ್ನೂ, ಆ ಫಲಕವನ್ನೂ, ಅದರ ಕೆಳಗಡೆ ಕುಳಿತ ಅಧಿಕಾರಿಯನ್ನೂ ನೋಡಿದಾಗ ಸದಾನಂದನ ಮುಖದ ಮೇಲೆ ಮುಗುಳ್ನಗೆ ಮೂಡದಿರಲಿಲ್ಲ.

"ಸಿಟ್ ಡೌನ್," ಎಂದರು ಮುಧೋಳರು. "ಪ್ಲೀಜ್," ಎಂಬ ಶಬ್ದ ಅವರ ಕೋಶದಲ್ಲೇ ಇರಲಾರದೇನೊ ಎಂದುಕೊಳ್ಳುತ್ತಾ ಸದಾನಂದ ಅವರೆದುರಿಗಿದ್ದ ಕುರ್ಚಿಯೊಂದರಲ್ಲಿ ಕುಳಿತುಕೊಂಡ.

ಬ್ಯಾಟ್ರಿಯ ಬೆಳಕು ಬಿಡುವ ಹಾಗೆ ಅವನ ಮುಖದ ಮೇಲೆ ದೃಷ್ಟಿಯನ್ನು ಹರಿದಾಡಿಸುತ್ತ ಮುಧೋಳರೆಂದರು :

"ಸದಾನಂದ ಅಂದರೆ ನೀವೇ ಏನು ?"

ಪೋಲೀಸು ಅಧಿಕಾರಿಗಳೊಡನೆ ಸಂಭಾಷಿಸುವುದೂ ಅದೇ ಮೊದಲ ಅನುಭವ ಸದಾನಂದನಿಗೆ. ಫೌಜದಾರರ ಪ್ರಶ್ನೆಯನ್ನು ಕೇಳಿ ಅವನಿಗೆ ಮೋಜೆನ್ನಿಸದಿರಲಿಲ್ಲ. ನಾಟಕವೊಂದರಲ್ಲಿನ ವಿದೂಷಕನ ಹಾಗೆ ಮುಧೋಳರು ಅವನಿಗೆ ಕಾಣಿಸಿದರು. ಆತ ಮುಗುಳ್ನಗುತ್ತ ಹೇಳಿದ :

"ಸದಾನಂದ ಅಂತ ಜನರೇನೋ ಅನ್ನುತ್ತಾರೆ."

"ಹಹ್ಹಂ...." ಎಂದು ನುಡಿದು ಉಗುಳುನುಂಗಿ ಮುಧೋಳರು ಕೇಳಿದರು :

"ನಿಮ್ಮ ಊರು ಯಾವದು ?"

ಸದಾನಂದ ತನ್ನ ಊರಿನ ಹೆಸರು ಹೇಳಿದ. ಅವನ ತಂದೆಯವರ ಉದ್ಯೋಗ, ಮನೆಯ ಉತ್ಪನ್ನ, ಅಣ್ಣ ತಮ್ಮಂದಿರ ವಿಷಯ ಎಲ್ಲವನ್ನೂ ಕೇಳಿ ಕೊಂಡ ತರುವಾಯ ಮುಧೋಳರು ದೃಷ್ಟಿಯನ್ನಿನ್ನೂ ತೀಕ್ಷ್ಣಗೊಳಿಸಿ,

"ಜನಪಥ ಪತ್ರಿಕೆಯಲ್ಲಿ ನೀವು ಬರೆಯುತ್ತೀರೇನು ?" ಎಂದರು.

“ ಹೌದು.”

“ ಅದರ ಸಂಪಾದಕ ಹರಿಹರನಿಗೂ ನಿಮಗೂ ಸ್ನೇಹವಿರಬೇಕಲ್ಲ ?”

“ ಇದೆ.”

“ ಅವನು ಕಮ್ಯೂನಿಸ್ಟ್ ಪಾರ್ಟಿಯ ಮೆಂಬರು ಅನ್ನುವದು ನಿಮಗೆ ಗೊತ್ತೋ ?”

“ ಗೊತ್ತು.”

“ ಕಮ್ಯೂನಿಸ್ಟ್ ಪಾರ್ಟಿಯ ಮೇಲೆ ಸರಕಾರದ ಕಣ್ಣಿದೆ ಎನ್ನುವದೂ ನಿಮಗೆ ಗೊತ್ತಿರಬೇಕು ?”

“ ಗೊತ್ತಿದೆ.”

“ ನೀವೂ ಕಮ್ಯೂನಿಸ್ಟರೋ ?”

“ ಅಲ್ಲ.”

“ ನಾವು ಹ್ಯಾಗೆ ನಂಬಬೇಕು ?”

“ ನಂಬಿದರೂ ಸರಿ. ಬಿಟ್ಟರೂ ಸರಿ.”

“ ಹಾಗಿದ್ದರೆ ಅಡ್ಡಿಯಿಲ್ಲ. ನೀವೂ ಕಮ್ಯೂನಿಸ್ಟರೂ ಒಂದೇ ಅಂದಂತಾಯಿತು. ಇನ್ನು ಮುಂದೆ ನಿಮ್ಮ ಹೆಸರೂ ನಮ್ಮ ರಿಕಾರ್ಡಿನಲ್ಲಿ ದಾಖಲಾಗುವದು.”

ಸದಾನಂದನ ಮನಸ್ಸು ಮತ್ತೆ ಗೊಂದಲಕ್ಕೊಳಗಾಯಿತು. ಕಮ್ಯೂನಿಸ್ಟರೊಡನೆ ಸ್ನೇಹದಿಂದಿರುವಲ್ಲಿ ಏನು ಅಪರಾಧವಿದೆಯೆಂಬುದು ಅವನಿಗೆ ತಿಳಿಯದಾಯಿತು. ಕಮ್ಯೂನಿಸ್ಟರೊಡನೆ ಮಾತ್ರವಲ್ಲ, ಎಲ್ಲರೊಡನೆಯೂ ಸ್ನೇಹದಿಂದ ಪ್ರೀತಿಯಿಂದ ನಡೆದುಕೊಳ್ಳುವ ಬಯಕೆ ತನ್ನದು. ತಾನು ಯಾರನ್ನೂ ದ್ವೇಷಿಸುವವನಲ್ಲ; ಎಲ್ಲರನ್ನೂ ಪ್ರೀತಿಸುವವನು. ಈ ಅಧಿಕಾರಿಯ ಎದುರಿಗೆ ತನ್ನ ಅಂತರಂಗವನ್ನು ಬಿಚ್ಚಿ ತೋರಿಸುವುದು ಹೇಗೆ ?

ಮುಧೋಳರು ಹೇಳುತ್ತಿದ್ದರು :

“ ಇನ್ನು ನೀವು ಹೋಗಬಹುದು. ನಾನೀಗ ಇಷ್ಟೇ ಹೇಳುತ್ತೇನೆ. ಕಮ್ಯೂನಿಸ್ಟ್ ಸೋಶಲಿಸ್ಟರ ಸಹವಾಸ ಒಳ್ಳೆಯದಲ್ಲ. ಅವರನ್ನೆಲ್ಲ ಕಟ್ಟಿಕೊಂಡು ಕಾಲೇಜು ವಿದ್ಯಾರ್ಥಿನಿಯರನ್ನು ಕೆಡಿಸಲು ಯತ್ನಿಸುವದೂ ಸರಿಯಲ್ಲ. ನಿಮ್ಮ ಬಗ್ಗೆ ನನಗೆ ಬಹಳ ತಕರಾರು ಬಂದಿವೆ....”

"ತಕರಾರು? ಯಾರಿಂದ?"

"ಯಾರಿಂದಲೋ ಬಂದಿವೆ. ಅಂತೂ ನೀವಿನ್ನುಮೇಲಾದರೂ ಸಂಭಾವಿತರಂತಿದ್ದರೆ ಸರಿ."

ಸ್ವಭಾವತಃ ಸಹನಶೀಲ ವೃತ್ತಿಯವನಾದ ಸದಾನಂದನಿಗೂ ಸಹ ಫೌಜದಾರರ ಈ ಮಾತಿನಿಂದಾಗಿ ಕೊಂಚ ಕೋಪ ಬಂದಿತು.

"ನೀವು ಅನ್ನುವದಾದರೂ ಏನು ಸಾಹೇಬರೆ? ನನ್ನ ಮೇಲೆ ಉಡಾಳ ತನದ ಆರೋಪ ಹೊರಿಸುತ್ತೀರೋ ಏನು?"

"ನಾನಲ್ಲ ಆರೋಪ ಹೊರಿಸುವವನು; ಜನರು. ವಿಚಾರಣೆ ಮಾಡಿ ನಿಮ್ಮ ಮೇಲೆ ಕಣ್ಣಿಡುವದಷ್ಟು ನನ್ನ ಕರ್ತವ್ಯ."

ಸದಾನಂದನಿಗೆ ಹಠಾತ್ತಾಗಿ ವರಸೆಟ್ಟಿಯ ಜ್ಞಾಪಕ ಬಂದಿತು. ಶಾಂತಳಿಗೂ ತನಗೂ ಬೆಳೆದುಬರುತ್ತಿದ್ದ ಸ್ನೇಹವನ್ನು ಕಂಡು ಸಹಿಸದೆ ವರಸೆಟ್ಟಿ ಏನಾದರೂ ಕಿತಾಪತಿ ನಡೆಸಿರಬಹುದೇ ಹೇಗೆ? ಇದ್ದರೂ ಇರಬಹುದು.

ಅಂದು ಮಧ್ಯಾಹ್ನ ಕಾಲೇಜಿನಲ್ಲಿ ಎರಡನೆಯ ಪೀರಿಯಡ್‌ಗೆ ಪಾಠವಿರ ಲಿಲ್ಲವಾದುದರಿಂದ ಆತ ವಾಚನಾಲಯದ ಕಡೆ ನಡೆದಿದ್ದ. ಹಾಗೆ ವಿದ್ಯಾರ್ಥಿನಿ ಯರ ಕೊಟಡಿಯ ಬಾಗಿಲಲ್ಲಿ ನಿಂತುಕೊಂಡಿದ್ದ ಲೀಲಾ ಅವನನ್ನು ಕಂಡು ಹತ್ತಿರ ಬಂದು,

"ಏನಾಯ್ತು ಸದಾನಂದ? ಪೋಲೀಸರು ಕರೆಸಿದ್ದರಂತಲ್ಲ?" ಎಂದು ಕೇಳಿದಳು.

ಪೋಲೀಸು ಕಚೇರಿಯಲ್ಲಿ ನಡೆದ ಮಾತುಗಳಿಂದಾಗಿ ಅವನ ಮನಸ್ಸು ಬಹಳ ಕಹಿಯಾಗಿತ್ತು. "ಏನೋ ಹಾಳು ಸಹವಾಸ. ಸ್ವಾತಂತ್ರ್ಯ ಬಂದರೂ ಈ ಪೋಲೀಸರು ಮಾತ್ರ ಸುಧಾರಿಸಲಿಲ್ಲ."

ಒಡಹುಟ್ಟಿದ ಸೋದರರನ್ನು ಪ್ರೀತಿಸುವುದಕ್ಕಿಂತ ಹೆಚ್ಚಾಗಿ ಲೀಲಾ ಸದಾನಂದನನ್ನು ಪ್ರೀತಿಸುತ್ತಿದ್ದಳು. ಅವಳಿಗೆ ಅಣ್ಣ ತಮ್ಮಂದಿರಿರಲಿಲ್ಲವಾದುದ ರಿಂದ ಸದಾನಂದನನ್ನೇ ಅಣ್ಣನೆಂದು ಭಾವಿಸಿ ತನ್ನ ಒಲವು, ಅಕ್ಕರತೆ, ಸ್ನೇಹ ಗಳೆಲ್ಲವನ್ನೂ ಅವನಿಗೆ ನಿವೇದಿಸಿದ್ದಳು. ಅವನ ಮೇಲೆ ಗಂಡಾಂತರವೇನಾದರೂ ಬಂದಿದೆಯೇನೊ ಎಂದೆನ್ನಿಸಿ ಅವಳಿಗೆ ಬಹಳ ದಿಗಿಲಾಗಿದ್ದಿತು.

"ಏನೋ ವಿಶೇಷ ನಡೆದ ಹಾಗಿದೆಯಲ್ಲ ಸದಾನಂದಾ. ಏನೆಂದ ಫೌಜ

ದಾರ?" ಎನ್ನುತ್ತಾ ಅವಳು ಕಾಲೇಜಿನ ಬಳಿಯಲ್ಲಿನ ಚಹದಂಗಡಿಗೆ ಅವನನ್ನು ಕರೆದೊಯ್ದಳು. "ಫ್ಯಾಮಿಲಿ ರೂಂ"ನಲ್ಲಿ ಕುಳಿತುದಾಯಿತು. ವಿದ್ಯಾರ್ಥಿಗಳೊಡನೆ ಚಹದಂಗಡಿಗೆ ಹೋಗುವುದು ಅವಳಿಗೆ ರೂಢಿಯಾಗುತ್ತ ಬಂದಿತ್ತು.

ಪೋಲೀಸು ಕಚೇರಿಯಲ್ಲಿ ನಡೆದುದನ್ನೆಲ್ಲ ಆತ ಹೇಳಿ ಮುಗಿಸುತ್ತಲೂ ಅವಳು ತುಂಟ ನಗೆ ಬೀರುತ್ತ ನುಡಿದಳು :

"ಅಂತೂ ಇದೆಲ್ಲಾ ಒಂದು ನಾಟಕದಂತೆ ನಡೆದಿದೆ."

"ನಾಟಕ?"

"ಶಾಂತಿಯನ್ನು ಮದುವೆಯಾಗಬೇಕೆಂತ ಹಪಾಪಿಸುತ್ತಿರುವ ಫೌಜದಾರ ಇವನೇ ಅನ್ನುವದು ನಿಮಗೆ ಗೊತ್ತಾಗಲಿಲ್ಲವೇ ಇನ್ನೂ?"

"ಹೀಗೇನು? ನನಗೆ ಗೊತ್ತಾಗಲಿಲ್ಲ."

"ನಿಮಗೂ ಶಾಂತಿಗೂ ಬಹಳ ಬಹಳ ಅನ್ನುವದನ್ನು ಯಾರೋ ಹೇಳಿರಬೇಕು ಈ ಫೌಜದಾರನಿಗೆ. ಅಥವಾ ಅವನೇ ನೋಡಿದ್ದರೂ ನೋಡಿರಬಹುದು. ಅದಕ್ಕೆ ಇದೆಲ್ಲಾ ವಿಚಾರಣೆ. ನನಗಂತೂ ಸಂಶಯವೇ ಉಳಿಯಲಿಲ್ಲ."

"ಕಮ್ಯೂನಿಸ್ಟರು...."

"ಅದೆಲ್ಲಾ ಸುಮ್ಮನೆ ನೆಪಕ್ಕೆ. ನಿಮ್ಮನ್ನು ಹೆದರಿಸಿ ಶಾಂತಿಯಿಂದ ದೂರವಿಡಲು ಕಮ್ಯೂನಿಸ್ಟ್ ದೆವ್ವವನ್ನು ತೋರಿಸಿದ್ದಾನೆ ಆ ಫೌಜದಾರ," ಎಂದು ಲೀಲಾ ಗಟ್ಟಿಯಾಗಿ ನಗತೊಡಗಿದಳು. "ಬಹಳ ಮಜಾನೇ ಇದೆಯಪ್ಪ. ಇದರ ಮೇಲೆ ಒಂದು ಕತೆಯನ್ನೇ ಬರೆಯಬಹುದು. ಅಷ್ಟು ಮಜಾ ಇದೆ ಅಂದರೆ...." ಅವಳು ಮತ್ತೆ ನಗತೊಡಗಿದಳು.

"ಶಾಂತಿಯನ್ನೂ ನಿಮ್ಮನ್ನೂ ಕೂಡಿಯೆ ಬೆದರಿಸಬೇಕೆಂತ ಇವರು ಮಸಲತ್ತು ಮಾಡಿರಬೇಕು. ಅವಳಣ್ಣನಿಗೊಂದು ಪತ್ರ ಬರೆದಿದ್ದಾರೆ. ನಿಮಗೆ ಗೊತ್ತಿಲ್ಲವೆ?"

ಸದಾನಂದನಿಗಿನ್ನೂ ಆ ವಿಷಯ ತಿಳಿದಿರಲಿಲ್ಲ. ನಿನ್ನೆಯಿಂದ ಶಾಂತಳಿಗೂ ಅವನಿಗೂ ಭೆಟ್ಟಿಯಾಗಿರಲಿಲ್ಲ.

ಆ ಪತ್ರದ ವಿಚಾರ ಹೇಳಿ ಮುಗಿಸಿ ಲೀಲಳೆಂದಳು :

"ಇವೆರಡೂ ಒಂದೇ ದಿನ ಆಗಬೇಕಾದರೆ ಏನಾದರೂ ಕಾರಸ್ಥಾನ್ ನಡೆದಿರಲೇಬೇಕೆಂತ ನನಗನಿಸುತದೆ."

"ಹೌದು. ಹೌದು. ಹಾಗೇ ಕಾಣುತ್ತದೆ." ಒಂದು ನಿಮಿಷ ಬಿಟ್ಟು ಸದಾನಂದ ಕೇಳಿದ: "ಇದನ್ನೆಲ್ಲಾ ಆ ವರಸೆಟ್ಟಿ ಮಾಡುತ್ತಿರಬಹುದೇ ಲೀಲಾ?"

"ಇದ್ದರೂ ಇರಬಹುದು. ವರಸೆಟ್ಟಿ ಫೌಜದಾರ ಇಬ್ಬರೂ ಸೇರಿಕೊಂಡೇ ಮಾಡುತ್ತಿರಬಹುದು."

"ಇವರನ್ನೆದುರಿಸಲು ಏನುಪಾಯ ಲೀಲಾ?"

"ಏನೂ ಇಲ್ಲ. ಸುಮ್ಮನಿದ್ದು ಬಿಡುವುದ."

"ಶಾಂತಾ ಏನೆಂದಳು? ಮನಸ್ಸಿಗೆ ಬಹಳ ಹಚ್ಚಿಕೊಂಡಿರುವಳೇನು?"

"ಅವಳ್ಯಾಕೆ ಹಚ್ಚಿಕೊಳ್ಳಬೇಕು? ಈಚೆಗೆ ಅವಳು ಬಹಳ ಬೋಲ್ಡ್ (ದಿಟ್ಟೆ) ಆಗಿದ್ದಾಳೆ. ಮೊದಲಿನ ಹಾಗಲ್ಲ," ಎಂದು ನುಡಿದು ಕೊಂಚ ತಡೆದು ಲೀಲಾ ಗಂಭೀರ ಸ್ವರದಲ್ಲಿ ಕೇಳಿದಳು:

"ಎಲ್ಲಾ ಸರಿ. ಆದರೆ ಮುಂದೆ ನೀವು ಹ್ಯಾಗೆ ಮಾಡಬೇಕೆಂದಿದ್ದೀರಿ ಸದಾನಂದಾ?"

"ಅಂದರೆ?"

"ಶಾಂತಿಯೂ ನೀವೂ ಇಬ್ಬರೂ ಅಂತ...."

ಸದಾನಂದ ಮೃದುವಾಗಿ ನಗುತ್ತ ನುಡಿದ:

"ಆ ಬಗ್ಗೆ ನಾನಿನ್ನೂ ಸರಿಯಾಗಿ ವಿಚಾರವನ್ನೇ ಮಾಡಿಲ್ಲ ಲೀಲಾ."

ಲೀಲಾ ಹುಬ್ಬುಗಳನ್ನೇರಿಸಿ ಹೇಳಿದಳು:

"ನೀವೂ ಒಳ್ಳೆಯವರೇ ಬಿಡಿರಿ! ಹೀಗೆಲ್ಲಾ ಅಂದು ಪಾರಾಗುವವರೇನು? ಆ ಹುಡುಗಿ ನಿಮ್ಮನ್ನೇ ಹಚ್ಚಿಕೊಂಡು ಕುಳಿತಿದೆ. ನಿಮಗಾಗಿ ಏನು ಬೇಕಾದರೂ ಮಾಡಲು ತಯಾರಾಗಿದ್ದಾಳೆ ಆಕೆ. ನೀವು ಮಾತ್ರ ಇನ್ನೂ ವಿಚಾರವನ್ನೇ ಮಾಡಿಲ್ಲ ಅನ್ನುತ್ತೀರಿ! ಚಲೋ ಕೆಲಸ! ನಾನಿನ್ನು ಶಾಂತಿಗೆ ವಾರ್ನ್ ಮಾಡಬೇಕು."

ತಡವರಿಸುವ ದನಿಯಲ್ಲಿ ಸದಾನಂದ ಮಾತನಾಡಿದ:

"ಶಾಂತಿಯೂ ನಾನೂ....ಅ....ಹಂ....ಮದುವೆಯಾಗಲು ಸಾಧ್ಯವಾದೀತು ಅಂತೀರಾ?"

"ಯಾಕಾಗಬಾರದು ಅಂತೀನಿ." ಜಗತ್ತಿಗೇ ಆಹ್ವಾನವೀಯುವ ದನಿಯಲ್ಲಿ ಹೇಳಿದಳು ಲೀಲಾ.

"ಅವಳ ಮನೆಯವರು....ಅವರು ನೊಂದುಕೊಳ್ಳಲಿಕ್ಕಿಲ್ಲವೆ?"

"ನೊಂದುಕೊಳ್ಳುತ್ತಾರೆ. ಎರಡು ದಿನ ನೊಂದುಕೊಂಡು ಮೂರನೇ ದಿನ ಸುಮ್ಮನಾಗುತ್ತಾರೆ–ಆದದ್ದು ಆಯ್ತು ಅಂತ."

"ನಿಮ್ಮ ಸಮಾಜ?"

"ನಮ್ಮ ಸಮಾಜ?" ಕಟುವ್ಯಂಗ್ಯ ಬೆರೆತ ದನಿಯಲ್ಲಿ ಅವಳೆಂದಳು: "ನಮ್ಮ ಸಮಾಜ ಅಂದರೆ ಯಾವದು? ಬ್ರಾಹ್ಮಣ ಸಮಾಜವೇ? ಬ್ರಾಹ್ಮಣ ಸಮಾಜ ಲಿಂಗಾಯತ ಸಮಾಜ ಅಂತ ನಾನಂತೂ ಭೇದಭಾವ ಮಾಡುವದಿಲ್ಲ. ಶಾಂತಿಯೂ ಮಾಡುವದಿಲ್ಲ. ನಮ್ಮ ಗುಂಪಿನವರೆಲ್ಲಾ ಹಾಗೇ–ನೀವೂ ಹಾಗೇ ಅಂತ ನಾನೂ ತಿಳಿದಿದ್ದೆ...."

"ನಾನೂ ನಿಮ್ಮ ವಿಚಾರದವನೇ ಲೀಲಾ. ಆದರೆ...."

"ಸುರುವಾಯ್ತು ರೇರಾಜ್ಯ!" ಎಂದು ಅಸಹನೆಯಿಂದ ಎದ್ದು ಹೊರಟಳು ಲೀಲಾ. ಸದಾನಂದನ ಮಾತಿನ ಧಾಟಿ ಅವಳನ್ನು ಬಹಳವಾಗಿ ಕೆರಳಿಸಿತ್ತು. ಸದಾನಂದ ತಾವು ಭಾವಿಸಿದ್ದಷ್ಟು ಗಟ್ಟಿಗನಲ್ಲವೆಂಬ ಸತ್ಯ ಈಗ ಅವಳ ಕಣ್ಣೆದುರು ಕಾಣಿಸಿಕೊಂಡಿತ್ತು.

"ಈತ ಮಹಾ ಚಂಚಲ ಮನಸ್ಸಿನವನಾಗಿರಬೇಕು. ಕವಿಗಳೆಲ್ಲಾ ಹಾಗೇ!" ಎಂದು ಅವಳು ತನ್ನಷ್ಟಕ್ಕೆ ತಾನೆ ಹೇಳಿಕೊಂಡಳು.

ಸಾಯಂಕಾಲ ಶಾಂತಳೊಡನೆ ಮಾತನಾಡುತ್ತ ಅವಳು ಹೇಳಿದಳು:

"ಮಧ್ಯಾಹ್ನ ಸದಾನಂದ ಸಿಕ್ಕಿದ್ದ. ಫೌಜದಾರರು ಅವನನ್ನು ಕರೆಯಿಸಿ ಹೆದರಿಸಿದರಂತೆ. ಅವನು ಹೊಯ್ದಾಡುತ್ತಿರುವಂತೆ ತೋರುತ್ತದೆ."

"ಹೊಯ್ದಾಟ? ಯಾತರ ಬಗ್ಗೆ?"

"ನಿನ್ನ ಬಗ್ಗೆ," ಎಂದು ಲೀಲಾ ಮಧ್ಯಾಹ್ನ ನಡೆದ ಮಾತುಕತೆಗಳನ್ನು ವಿವರಿಸಿದಳು.

ಶಾಂತಳಿಗೇನೂ ವಿವಂಚನೆಯಾಗಲಿಲ್ಲ. "ಹಾಗಾಗುವದು ಸಹಜ ಅಲ್ಲವೇನೇ ಲೀಲಾ? ನೀನು ಹೇಳುವಷ್ಟು ಸುಲಭವಲ್ಲ ಈ ವಿಷಯ."

"ನೀನೂ ಅವನ ಪಾರ್ಟಿಗೇ ಸೇರಿಕೊಳ್ಳುತ್ತೀಯಲ್ಲ! ಅದೂ ಸಹಜವೇ. ಎಷ್ಟಾದರೂ ಲವರ್ಸ್ ಅಲ್ಲವೇ!" ಎಂದಳು ಲೀಲಾ.

ಆ ಭಾನುವಾರದ 'ಕಾವ್ಯಕೂಟ'ದ ಸಭೆಗೆ ದೇಶಪಾಂಡೆ ಉಪಸ್ಥಿತನಿರಲಿಲ್ಲ. ಕಾವ್ಯಗಾಯನಕ್ಕಾರಂಭವಾದ ಕೆಲಹೊತ್ತಿನಲ್ಲಿ ಕೊಟಬಾಗಿಯೂ ಎದ್ದು ಹೊರಗಡೆ ಹೊರಟ.

"ಎತ್ತ ನಡೆದಿರಿ ಕೊಟಬಾಗಿ? ಕವಿತೆ ಓದುವದಿಲ್ಲವೆ?" ಎಂದ ನರಗುಂದ.

"ನನಗೆ ತಲೆನೋವು. ನಿಮ್ಮದು ಸಾಗಲಿ," ಎಂದಿಷ್ಟೆ ನುಡಿದು ಆತ ಹೊರಟುಹೋದ.

"ದೇಶಪಾಂಡೆಯೂ ಬರಲಿಲ್ಲ. ಇವನೂ ಹೋದ. ಈಚೆಗೆ ಅವರಿಬ್ಬರದೇ ಒಂದು ಗುಂಪು ಆಗಿದೆ. ಯಾವಾಗಲೂ ಕೂಡಿಯೆ ತಿರುಗುತ್ತಾರೆ. ಅವರ ಮನಸಿನಲ್ಲೇನಿದೆಯೊ ಏನೊ," ಎಂದ ನರಗುಂದ.

"ಕಾವ್ಯಕೂಟದ ಮೇಲೆ ಆಟಂಬಾಂಬ್ ಹಾಕುವ ವಿಚಾರವಿರಬಹುದು," ಎಂದಳು ಲೀಲಾ. ಎಲ್ಲರೂ ನಗತೊಡಗಿದರು.

ಅಂದಿನ ಸಭೆಯಲ್ಲಿ ಉಪಸ್ಥಿತನಿದ್ದ ಹರಿಹರ ಹೇಳಿದ:

"ದೇಶಪಾಂಡೆ ಆರ್. ಎಸ್. ಎಸ್. ದವರು. ನಮ್ಮಂಥವರು ಇಲ್ಲಿಗೆ ಬರುವದು ಅವರಿಗೆ ಸರಿಬರುತ್ತಿರಲಿಕ್ಕಿಲ್ಲ." ಇಲ್ಲಿ ನಡೆದ ಘಟನೆಗಳೆಲ್ಲವನ್ನು ಅವನಾಗಲೆ ಸದಾನಂದನಿಂದ ಅರಿತುಕೊಂಡಿದ್ದ. ಇದೆಲ್ಲವೂ ದೇಶಪಾಂಡೆಯ ಕುತಂತ್ರವೇ ಇರಬೇಕೆಂದು ಅವನಿಗೆನ್ನಿಸತೊಡಗಿತ್ತು.

"ಇದ್ದರೂ ಇದ್ದೀತು. ಇಲಿ ಬೆಕ್ಕು ಒಂದೇ ಕಡೆ ಸಮಾಧಾನದಿಂದ ಇರಲು ಸಾಧ್ಯವೆ?" ಎಂದಳು ಲೀಲಾ. ಮತ್ತೆ ಎಲ್ಲರೂ ನಕ್ಕರು.

"ಇದು ಸಾಂಸ್ಕೃತಿಕ ಕ್ಷೇತ್ರ. ನಿಜವಾಗಿ ಇಲ್ಲಿ ಪಾರ್ಟಿಗಳ ಭಾವನೆ ಇರಬಾರದು." ಅದು ಸದಾನಂದನ ಮಾತು.

"ಇರಬಾರದೆಂಬುದೇನೊ ಸರಿ. ಆದರೂ ಅದು ತಲೆಹಾಕದೆ ಬಿಡುವದಿಲ್ಲ.

ಎಲ್ಲಾ ಕಡೆಗೂ ಇದ್ದದ್ದೇ ಈ ಜಗಳ. ಒಂದು ಜಾತಿಯದು, ಇನ್ನೊಂದು ಪಾರ್ಟಿಗಳದು," ಎಂದಳು ಕುಮುದ.

"ನಿಮಗೆ ತೊಂದರೆಯಾಗುವಂತಿದ್ದರೆ ನಾನಿನ್ನು ಇಲ್ಲಿಗೆ ಬರುವದನ್ನು ನಿಲ್ಲಿಸುತ್ತೇನೆ," ಎಂದ ಹರಿಹರ.

"ಛೆ. ಛೆ. ಎಂಥ ತೊಂದರೆ?"

"ದೇಶಪಾಂಡೆ....ಆರ್. ಎಸ್. ಎಸ್....ಫೌಜದಾರರು...."

"ಇರಲಿರಲಿ. ಇಂಥ ಸಾವಿರ ಜನರನ್ನು ನೋಡಿದ್ದೇವೆ. ಹಳ್ಳಿಯ ಮಂದಿಯನ್ನು ಬೆದರಿಸಿದ ಹಾಗೆ ನಮ್ಮನ್ನು ಬೆದರಿಸುತ್ತಾರೇನು ಇವರು! ಅವರೇನಾದರೂ ಅಧಿಕ ಪ್ರಸಂಗ ಮಾಡಿದರೆ ನಮ್ಮ ತಂದೆಯಿದ್ದಾರೆ. ಅವರನ್ನೆಲ್ಲಾ ಕೋರ್ಟಿಗೆಳೆದು ಫಜೀತಿ ಮಾಡಿಸುತ್ತೇನೆ," ಎಂದಳು ಲೀಲಾ.

"ಬ್ರೇವೋ!" ಎಂದಳು ಕುಮುದ.

"ಲೀಲಾ ಮೈಯಲ್ಲಿ ಝಾಂಸಿ ರಾಣಿ ಅವತರಿಸಿದ್ದಾಳೆ!" ಎಂದ ನರಗುಂದ. ಮತ್ತೆ ಎಲ್ಲರೂ ನಗತೊಡಗಿದರು.

"ಈ ಆರ್. ಎಸ್. ಎಸ್. ಅನ್ನು ಮೊದಲು ಮಟ್ಟಹಾಕಬೇಕು," ಎಂದ ನರಗುಂದ.

"ಹೌದು ಹೌದು. ಅದು ಜರೂರಾಗಿ ಆಗಬೇಕು," ಎಂದ ಹರಿಹರ.

"ಆಗಬೇಕು ನಿಜ. ಆದರೆ ಮಟ್ಟಹಾಕುವವರು ಯಾರು?"

"ನಾವು....ನೀವು....ಎಲ್ಲರೂ...."

"ಕಾಲೇಜಿಗೆ ಯಾವಾಗ ಹೋಗುವದು. ಅಭ್ಯಾಸ ಯಾವಾಗ ಮಾಡುವದು, ಈ ರಾಜಕಾರಣ ಯಾವಾಗ ಮಾಡುವದು?"

"ಮೂರನ್ನೂ ಕೂಡೇ ಮಾಡಬೇಕು," ಎಂದ ಹರಿಹರ.

"ವಿದ್ಯಾರ್ಥಿಗಳು ರಾಜಕಾರಣದಲ್ಲಿ ಬೀಳಬಾರದು," ಎಂದು ಒಬ್ಬ ದನಿಯೆತ್ತಿದ.

"ಓ! ಇಲ್ಲೊಬ್ಬರು ಕಾಂಗ್ರೆಸ್ಸಿಗರಿದ್ದ ಹಾಗಿದೆ!" ಎಂದು ನರಗುಂದ ಕುತೂಹಲದಿಂದ ಅತ್ತ ತಿರುಗಿದ.

"ನಾನು ಯಾವ ಇಗನೂ ಅಲ್ಲ." ಎಂದು ಆ ವಿದ್ಯಾರ್ಥಿ ಕೆರಳಿ ನುಡಿದ.

"ಇಗನಲ್ಲವಾದರೆ ಮಿಗ ಇರಬಹುದು," ಎಂದಳು ಲೀಲಾ. ಮತ್ತೆ ಅನೇಕರು ನಕ್ಕರು. ಆ ವಿದ್ಯಾರ್ಥಿಗೆ ಬಲು ಅವಹೇಳನವಾದಂತಾಯಿತು. "ಇದು ಕವಿಗಳ ಕೂಟವಲ್ಲ, ಕಪಿಗಳ ಕೂಟ," ಎಂದು ನುಡಿದು ಆತ ಎದ್ದು ಹೋದ.

"ಅಡ್ಡಿಯಿಲ್ಲ – ಸ್ವಲ್ಪವಾದರೂ ಸೆನ್ಸ್ ಆಫ್ ಹ್ಯೂಮರ್ ಇದೆಯಲ್ಲಾ!" ಎಂದಳು ಲೀಲಾ. ಹಲವರು ನಕ್ಕರು. ಸದಾನಂದ, ನರಗುಂದ, ಶಾಂತಾ, ವೆಂಕಟೇಶ ಮಾತ್ರ ನಗಲಿಲ್ಲ. ಹರಿಹರನಂತೂ ಭಾವರಹಿತ ಮುಖಮುದ್ರೆಯಿಂದ ಮೌನವಾಗಿ ಕುಳಿತಿದ್ದ.

"ಛೆ. ಛೆ. ನಾನು ಅವರಿಗೆ ಹಾಗನ್ನಬಾರದಾಗಿತ್ತು." ನೊಂದ ದನಿಯಲ್ಲಿ ನುಡಿದ ನರಗುಂದ.

"ಅವರನ್ನು ಸಿಟ್ಟಿಗೆಬ್ಬಿಸಿದ್ದು ನೀವಲ್ಲ, ನಾನು. ನೀವೇಕೆ ಪಶ್ಚಾತ್ತಾಪ ಪಡುತ್ತೀರಿ?" ಎಂದು ಲೀಲಾ ಅವನನ್ನು ಸಂತೈಸಿದಳು.

"ಮೊದಲೇ ನಮ್ಮ ಕೂಟವನ್ನು ಕಂಡರೆ ಅನೇಕರಿಗೆ ಹೊಟ್ಟೇಕಿಚ್ಚು. ಅದರಲ್ಲಿ ಈ ಹೊತ್ತು...."

"ಹೋಗಲಿ ಬಿಡಿರೀ. ಎಷ್ಟು ಅಳುತ್ತೀರಿ! ಒಬ್ಬಿಬ್ಬರು ಹೋದರೆ ಏನು ಪ್ರಪಂಚ ಮುಳುಗುವದಿಲ್ಲ – ನಾಲ್ಕು ಜನ ಉಳಿದರೂ ಸರಿ. ಕೂಟವನ್ನು ಮುಂದುವರಿಸಿ ಫೈಟ್ ಮಾಡೋಣ," ಎಂದಳು ಲೀಲಾ.

"ಫೈಟ್ ಮಾಡುವದು? ಯಾರ ವಿರುದ್ಧ?" ಎಂದಳು ಕುಮುದಾ.

"ಎಲ್ಲಾ ರಿಯಾಕ್ಷನರಿಗಳ ವಿರುದ್ಧ."

"ಬ್ರೇವೋ!" ಎಂದಳು ಕುಮುದ.

"ನೀನು ಲೀಲಾ ಅಲ್ಲ, ಜ್ವಾಲಾ!" ಎಂದ ವೆಂಕಟೇಶ.

ನರಗುಂದ ತನ್ನ ಹೊಸ ಕವಿತೆಯನ್ನೋದಲು ಎದ್ದು ನಿಂತ. ಕೊಟಡಿಯೆಲ್ಲ ಸ್ತಬ್ಧವಾಯಿತು.

## ೧೮

" ಆಗಲೇ ಹೊರಡುವ ತಯಾರಿ ಮಾಡಿದ್ದೀಯಲ್ಲಾ ?" ಎಂದ ಶಿವಣ್ಣ, ಕೊಟಡಿಯಲ್ಲಿ ಪ್ರವೇಶಿಸುತ್ತ. ಒಂದೆರೆಡು ವಾರಗಳಿಂದ ಆತ ಸದಾನಂದನನ್ನು ಕಂಡಿರಲಿಲ್ಲ. ಈಗ ದೀಪಾವಳಿ ರಜಕ್ಕಾರಂಭವಾಗಿದ್ದುದರಿಂದ ಸದಾನಂದ ಊರಿಗೆ ಹೋಗುವ ಮುನ್ನ ಅವನನ್ನು ಭೆಟ್ಟಿಯಾಗಲೆಂದು ಆತ ಬಂದಿದ್ದ. ಸಾಯಂಕಾಲದ ಸಮಯ. ಕೊಟಡಿಯಲ್ಲಿ ಸದಾನಂದನೊಬ್ಬನೇ ಇದ್ದ. ಕೊಟಬಾಗಿಯಿನ್ನೂ ಶಾಲೆಯಿಂದ ಬಂದಿರಲಿಲ್ಲ—

" ನೀನೆಲ್ಲಿ ಹಾಗೇ ಹೊರಟುಬಿಡುತ್ತೀಯೊ ಅಂದುಕೊಂಡು ನಾನೇ ಬರಬೇಕಾಯಿತು," ಎಂದ ಶಿವಣ್ಣ.

" ನಿನಗೆ ಹೇಳದೆ ಹೋಗುತ್ತೇನೆಯೇ ನಾನು ?"

" ಯಾರಿಗೆ ಗೊತ್ತಪ್ಪಾ ! ಈಗೇನು, ನಮ್ಮ ನೆನಪು ಹ್ಯಾಗೆ ಉಳಿದೀತು ? ಒಬ್ಬರಿಗೆ ಹೇಳಿ ಹೋದರಾಯಿತಲ್ಲ !" ಎಂದ ಶಿವಣ್ಣ.

ಸದಾನಂದ ಮುುಗುಳ್ನಗೆ ಬೀರುತ್ತ ನುಡಿದ :

" ಆ ಕೊಂಕು ಮಾತೆಲ್ಲಾ ಬಿಟ್ಟು ಬಿಡು. ಈಗೇನು ಇಲ್ಲೇ ಚಹಾ ಮಾಡಲೋ ಅಥವಾ ಹೊರಗೆ ಹೋಗೋಣವೋ ?"

" ಹೊರಗೆ ಹೋಗುವದೇ ಒಳ್ಳೆಯದು. ನಿನ್ನ ಹತ್ತಿರ ಸ್ವಲ್ಪ ಮಾತಾಡುವದಿದೆ. ಆ ಸವಾಯಿ ಕೀಟ್ಸ್ ಬಂದು ಬಿಟ್ಟರೆ...."

"ಅವನು ಈಗಲೇ ಬರುವದಿಲ್ಲ. ಸವಾಯಿ ಕುಮಾರವ್ಯಾಸನ ಜತೆಗೆ ತಿರುಗಾಡಿಕೊಂಡು ರಾತ್ರಿಗೇ ಬರುತ್ತಾನೆ."

"ಯಾರಪ್ಪಾ ಈ ಕುಮಾರವ್ಯಾಸ?"

"ನಿನಗಿನ್ನೂ ಗೊತ್ತಿಲ್ಲವೆ? ದೇಶಪಾಂಡೆಗೆ ಲೀಲಾ ಹೀಗೆ ಕರೆಯುತ್ತಾಳೆ."

"ಸರಿ. ಅವನ ಸಹವಾಸದಲ್ಲಾದರೂ ಕೊಟಬಾಗಿ ಸ್ವಲ್ಪ ಸಂತೋಷ ವಾಗಿದ್ದರೆ ಸಾಕು. ಅವನ ಅಳುಮೋರೆ ನೋಡಿದಾಗೆಲ್ಲ ನನಗೆ ಬಲು ಕಳವಳ ವಾಗುತ್ತದೆ."

"ಈಗ ಎಷ್ಟೋ ಉತ್ಸಾಹದಿಂದಿದ್ದಾನಪ್ಪ."

ಕೊಟಡಿಗೆ ಬೀಗ ಜಡಿದು ಬೀದಿಗೆ ಬಂದು ದೊಡ್ಡ ರಸ್ತೆಗೆ ತಿರುಗಿಕೊಂಡು ನಗರವನ್ನು ಹಿಂದೆ ಬಿಟ್ಟು ಹೊಲಗಳ ಬಳಿ ಬಂದುದಾಯಿತು. ಸುಗ್ಗಿಯ ದಿನಗಳು ಸಮೀಪಿಸುತ್ತಿದ್ದುದರಿಂದ ಹವೆಯಲ್ಲಿ ಚಳಿಯಾಡಲಾರಂಭವಾಗಿತ್ತು. ಮೋಡಗಳಿಲ್ಲದ ತಿಳಿಯಾದ ಆಕಾಶ. ಹೊಲಗಳಲ್ಲಿ ಒಣಗುತ್ತಿದ್ದ ಜೋಳದ ತೆನೆಗಳು ಮುತ್ತಿನ ತೆನೆಗಳಂತೆ ಕಾಣುತ್ತಿದ್ದವು. ಬತ್ತದ ಗದ್ದೆಗಳಲ್ಲಿ ಒಕ್ಕಲು ನಡೆದಿತ್ತು. ಹತ್ತಿರದ ಕಣವೊಂದರಲ್ಲಿ ಬತ್ತವನ್ನು ಎತ್ತುಗಳಿಂದ ತುಳಿಸುತ್ತಿದ್ದರು. ಕಣದ ಅಂಚಿನ ಮೇಲಿದ್ದ ಹೊರಸಿನ ಮೇಲೆ ಕುಳಿತು ರೈತನೊಬ್ಬ ಚಿಲುಮೆ ಸೇದುತ್ತಿದ್ದ. ಅದರ ಪಕ್ಕದ ಗದ್ದೆಯಲ್ಲಿ ರೈತರ ಹುಡುಗಿಯರು ಬತ್ತದ ಸೂಡು ಗಳನ್ನು ಒಟ್ಟುಗೂಡಿಸುತ್ತಿದ್ದರು. ಅವರು ಕಚ್ಚೆ ತಿರುವಿ ಸೀರೆಗಳನ್ನು ಮೇಲಕ್ಕೆತ್ತಿ ಬಿಗಿದಿದ್ದರಾದುದರಿಂದ ಅವರ ಮೊಳಕಾಲುಗಳ ಮಾಂಸಪೂರ್ಣ ಭಾಗ ಸಂಜೆಯ ಕಾಂತಿಯಲ್ಲಿ ಮಿರುಗುತ್ತಿದ್ದುವು. ಕಣದಲ್ಲಿ ಎತ್ತು ತಿರುಗಿಸು ತ್ತಿದ್ದ ಹರೆಯದಾಳು ಆಗಾಗ ಆ ಹುಡುಗಿಯರ ಕಾಲುಗಳ ಕಡೆ ಕಳ್ಳದೃಷ್ಟಿ ತೂರುತ್ತಿದ್ದುದನ್ನು ನಿರೀಕ್ಷಿಸಿದ ಶಿವಣ್ಣ ನಸುನಗುತ್ತ ನುಡಿದ:

"ಗಂಡಿಂಗೆ ಹೆಣ್ಣಾಗಿ ಕಾಡಿತ್ತು ಮಾಯೆ."

ಹಠಾತ್ತಾಗಿ ಶಿವಣ್ಣ ಆ ವಚನವನ್ನೇಕೆ ಹೇಳಿದನೆಂಬುದು ಅರ್ಥ ವಾಗಲಿಲ್ಲ ಸದಾನಂದನಿಗೆ. ಶಿವಣ್ಣನ ಗಮನವನ್ನು ಸೆಳೆದ ಆ ದೃಶ್ಯವನ್ನು ಸದಾನಂದ ನಿರೀಕ್ಷಿಸಿರಲಿಲ್ಲ.

"ಈಗ್ಯಾಕಪ್ಪಾ ಮಾಯೆಯ ಮಾತು?"

"ಅಲ್ಲಿ ನೋಡು," ಎಂದು ಶಿವಣ್ಣ ಗದ್ದೆಯಲ್ಲಿನ ದೃಶ್ಯದತ್ತ ಬೆರಳು ಮಾಡಿದ.

ಸದಾನಂದ ನೋಡಿ, ನಕ್ಕು, ಶಿವಣ್ಣನ ಬೆನ್ನುತಟ್ಟಿ ಹೇಳಿದ:

"ಮದುವೆಯಾಗಿ ಎರಡು ವರ್ಷವಾದರೂ ನೀನಿನ್ನೂ ನಿನ್ನ ರಸಿಕತನ ಬಿಟ್ಟಿಲ್ಲವಲ್ಲ!"

"ಮದುವೆಯಾದ ಮೇಲೆ ರಸಿಕತನ ಹೋಗುವದೆಂದು ತಿಳಿದಿದ್ದೀಯೇನು ನೀನು?"

"ಹಾಗೇನೂ ಇಲ್ಲ...."

"ಹೊಲದಲ್ಲಿ ನಡೆದದ್ದನ್ನು ನೀನು ನೆಟ್ಟಗೆ ನೋಡಲಿಲ್ಲ. ಆ ಹುಡುಗಿಯರ ಕಾಲು ನೋಡಿ ನಾನು ಮರುಳಾಗಲಿಲ್ಲ. ಎತ್ತು ಹೊಡೆಯುತ್ತಿದ್ದಾನಲ್ಲಾ ಆ ಆಳು...."

"ಓ, ಹೀಗೇನು! ಸರಿ. ಸರಿ. ಗೊತ್ತಾಯಿತು." ಒಂದು ನಿಮಿಷ ಮೌನವಾಗಿದ್ದು ಸದಾನಂದ ಹೇಳಿದ: "ಅದೇನು, ಎಲ್ಲಾ ಕಡೆಗೂ ನಡೆಯತಕ್ಕದ್ದೇ."

ಮತ್ತೊಂದು ಫರ್ಲಾಂಗು ನಡೆದು ಹೋಗಿ ಜನಗಳಿಲ್ಲದ ತಾಣವೊಂದನ್ನು ಹುಡುಕಿ ಕುಳಿತುಕೊಂಡರು. ಹವೆಯಲ್ಲಿನ ತಂಪು ನಿಧಾನವಾಗಿ ಹೆಚ್ಚುತ್ತಲಿತ್ತು. ಜೋಳದ ಕಂಪನ್ನು ಕೂಡಿಸಿಕೊಂಡು ಗಾಳಿಯೂ ಸುಳಿಯುತ್ತಲಿತ್ತು.

"ನಡೆಯತಕ್ಕದ್ದೇ – ನಿಜ. ಇದೆಲ್ಲಾ ನೈಸರ್ಗಿಕ. ಗಂಡು ಹೆಣ್ಣಿಗೆ ಮರುಳಾಗುವದು, ಹೆಣ್ಣು ಗಂಡಿಗೆ ಮರುಳಾಗುವದು....ಎಲ್ಲಾ ಸಹಜ....ನೀನು ನಡಸಿರುವದೂ ಸಹಜ...." ಎಂದ ಶಿವಣ್ಣ. ಶಾಂತಾ ಸದಾನಂದರ ದಟ್ಟ ಸ್ನೇಹದ ವಿಚಾರ ಅವನಿಗೆ ಬಲುದಿನಗಳ ಹಿಂದೆಯೆ ಗೊತ್ತಾಗಿದ್ದಿತು.

ತಾಮ್ರವರ್ಣಕ್ಕೆ ತಿರುಗುತ್ತಿದ್ದ ಪಡುವಲ ದಿಸೆಯನ್ನು ದಿಟ್ಟಿಸುತ್ತ ಸದಾನಂದ ಹೇಳಿದ:

"ನಾನು ನಡಸಿರುವದು....ಮಾಡಬಾರದಂಥಾದ್ದೇನನ್ನೂ ನಾನು ಮಾಡುತ್ತಿಲ್ಲ ಶಿವಣ್ಣ."

"ನೀನು ಅಂಥಾದ್ದು ಮಾಡುತ್ತಿದ್ದೀ ಅಂತ ನಾನೆಲ್ಲಿ ಹೇಳಿದೆ?"

"ಹೇಳದಿದ್ದರೂ ಆ ಅರ್ಥ ಬರುತ್ತದೆ ನಿನ್ನ ದನಿಯಲ್ಲಿ."

"ಕಳ್ಳನ ಮನಸ್ಸು ಹುಳ್ಳ ಹುಳ್ಳಗೆ," ಎಂದು ಹೇಳಿ ಶಿವಣ್ಣ ಗಹಗಹಿಸಿ ನಗತೊಡಗಿದ.

ಸದಾನಂದನಿಗೆ ನಗೆ ಬರುವದು ಸಾಧ್ಯವೇ ಇರಲಿಲ್ಲ. ಶಿವಣ್ಣನ ಮಾತು ಅವನ ಹೃದಯವನ್ನು ಮುಳ್ಳಿನಂತೆ ಚುಚ್ಚಿದಂತಾಯಿತು. ತನ್ನ ವಿಚಾರವಾಗಿ ಶಿವಣ್ಣ ಈ ರೀತಿ ಯೋಚಿಸುತ್ತಿರುವನಲ್ಲ....ತಾನು ಕಳ್ಳನಂತೆ....ಅಂದರೆ.... ಶಾಂತಾ ಕೂಡ ಕಳ್ಳಿ....ಅವಳೊಡನೆ ತಾನು – ಕಳ್ಳತನದಿಂದ....ಛೆ. ಛೆ.... ಎಂಥ ಭಯಂಕರ ಕಲ್ಪನೆ ಶಿವಣ್ಣನದು....ತನ್ನ ಪರಮಮಿತ್ರನೊಬ್ಬ ತನ್ನ ಮೇಲೆ ಇಂಥ ಆಪಾದನೆ ಹೊರಿಸುವುದೆಂದರೆ ಎಷ್ಟು ಅಸಹನೀಯ....

ಅತಿಶಯವಾದ ವ್ಯಸನದಿಂದ ಅವನ ಹೃದಯ ಬಿರಿದಂತಾಗಿ ಕಣ್ಣುಗಳಲ್ಲಿ ಕಂಬನಿಗಳು ಕಾಣಿಸಿಕೊಂಡವು. ಅವನ ಕತ್ತು ಬಿಗಿದು ಕಂಪಿಸತೊಡಗಿತು. ಅಂಥ ಸ್ಥಿತಿಯಲ್ಲಿ ಅವನು ಮಾತನಾಡುವುದು ಸಾಧ್ಯವಿರಲಿಲ್ಲ.

ಗೆಳೆಯನ ಕಣ್ಣುಗಳಲ್ಲಿ ನೀರೂರಿದುದನ್ನು ಕಂಡಾಗ ಶಿವಣ್ಣನಿಗೆ ವಿಸ್ಮಯವಾಗದಿರಲಿಲ್ಲ. ಒಮ್ಮಿಂದೊಮ್ಮೆಲೆ ಸದಾನಂದನಿಗೆ ದುಃಖವೇಕೆ ಉಕ್ಕಿ ಬಂದಿತೆಂಬುದು ಅವನಿಗರ್ಥವಾಗಲಿಲ್ಲ. ತಾನು ಚೇಷ್ಟೆಗೆಂದು ಆಡಿದ ಮಾತನ್ನು ಇಷ್ಟು ಹಚ್ಚಿಕೊಂಡರೆ ಹೇಗೆ?

"ಛೀ. ಛೀ. ಕಣ್ಣೀರು ಯಾಕೆ ತರುತ್ತೀ? ಏನಾಯ್ತು ನಿನಗೆ? ನಾನೇನು ಅಂಥಾದ್ದು ಅಂದೆ?"

ಕಣ್ಣುಗಳ ಮೇಲೆ ಕರವಸ್ತ್ರವನ್ನಾಡಿಸುತ್ತ ಸದಾನಂದ ಮೆಲ್ಲಗೆ ಮಾತನಾಡಿದ:

"ನನ್ನ ಬಗ್ಗೆ ನೀನು ಎಂಥಾ ಭಯಂಕರ ಕಲ್ಪನೆ ಮಾಡಿಕೊಂಡಿದ್ದೀಯಲ್ಲ ಶಿವಣ್ಣಾ?"

"ಭಯಂಕರ? ಏನು ಭಯಂಕರ?"

"ಅಲ್ಲ....ನಾನು ಕಳ್ಳನೇ? ಶಾಂತಾ...."

"ಒಂದುವೇಳೆ ನೀನು ಕಳ್ಳನೇ ಆಗಿದ್ದರೂ ಏನು ಅಂಥಾ ಪ್ರಮಾದವಾಯ್ತು ಸದಾನಂದಾ? ನಾನು ಆಗಲೆ ಹೇಳಲಿಲ್ಲವೆ, ಹೆಣ್ಣು ಗಂಡಿನ ಸಂಬಂಧ ಕೇವಲ ನೈಸರ್ಗಿಕ ಅಂತ....ಹರಯದಲ್ಲಿ ಹೀಗಾಗುವದು ಸ್ವಾಭಾವಿಕ. ಎಲ್ಲರಿಗೂ ಒಂದಿಲ್ಲೊಂದು ಸಾರಿಯಾದರೂ ಇಂಥಾ ಅನುಭವ ಬರುತ್ತದೆ.

ನನಗೂ ಬಂದಿತ್ತು. ನಿನಗೂ ಬಂದಿರಬಹುದು. ಅದರಲ್ಲೇನಿದೆ ಅಂಥಾ ಮಹತ್ವ?"

"ನೀನು ಹೇಳುವಂಥಾದ್ದನ್ನು ನಾವೇನೂ ಮಾಡಿಲ್ಲ ಅಂತೀನಿ ನಾನು." ಏರಿಸಿದ ದನಿಯಲ್ಲಿ ನುಡಿದ ಸದಾನಂದ.

"ಮಾಡದಿದ್ದರೂ ಅಷ್ಟೆ, ಮಾಡಿದ್ದರೂ ಅಷ್ಟೆ. ನನ್ನ ದೃಷ್ಟಿಯಲ್ಲಿ ಅದಕ್ಕೆ ಹೆಚ್ಚಿನ ಮಹತ್ವವಿಲ್ಲ. ನೀವಿಬ್ಬರೂ ಕೂಡಿ ದೂರ ದೂರ ವಾಕಿಂಗ್ ಹೋಗುತ್ತೀರಲ್ಲವೆ? ಆಗ ನೀವಿಬ್ಬರೂ...."

ಅವನ ಮಾತನ್ನು ನಡುವೆಯೆ ತಡೆದು ಸದಾನಂದನೆಂದ:

"ನಿನಗೆ ಆಣೆ ಮಾಡಿ ಹೇಳುತ್ತೇನೆ ಶಿವಣ್ಣಾ. ನಾವು ತಿರುಗಾಡಲು ಹೋಗುವದೇನೋ ನಿಜ. ಆದರೆ ಇದುವರೆಗೆ ಕಾಮುಕ ವಿಚಾರ ಒಮ್ಮೆಯೂ ಬಂದಿಲ್ಲ ನಮ್ಮಲ್ಲಿ."

"ಹಿ ಹಿ....ನಾನದನ್ನು ನಂಬುವದಿಲ್ಲ."

"ಹ್ಯಾಗೆ ಹೇಳಿದರೆ ನಂಬಿಕೆಯಾಗುವದೋ ನಿನಗೆ! ಒಂದು ಹೂವನ್ನು ಪ್ರೀತಿಸುವಂತೆ ನಾನು ಅವಳನ್ನು ಪ್ರೀತಿಸುತ್ತೇನೆ. ಅದನ್ನು ಹಿಡಿದು ಹಿಸುಕುವಂಥ ಹೀನ ಮನಸ್ಸು ನನ್ನದಲ್ಲ." ಸದಾನಂದ ಭಾವಪರವಶನಾಗಿ ಮಾತನಾಡಿದ.

ಶಿವಣ್ಣ ಮತ್ತೆ ನಗುತ್ತಾ, "ಆದರೆ ಈ ಹೂವು ಮಾತ್ರ ಹಿಸುಕಿದಷ್ಟೂ ಅರಳುತ್ತದೆ, ಬಾಡುವದಿಲ್ಲ," ಎಂದ.

ಒಂದೆರಡು ನಿಮಿಷ ಮೌನ.

"ಇಲ್ಲಿ ನೋಡು ಸದಾನಂದಾ. ನಾನು ನಿನಗಿಂತ ಎರಡು' ಮೂರು ವರ್ಷಗಳಿಗೆ ದೊಡ್ಡವನು. ಮದುವೆಯೂ ಆಗಿದೆ. ಈ ವಿಷಯಗಳಲ್ಲಿ ನಿನಗಿಂತ ಹೆಚ್ಚು ಅನುಭವವೂ ನನಗಿದೆ. ಇಂಥ ಅನುಭವ ಪಡೆದ ಎಷ್ಟೋ ಜನರ ಪರಿಚಯವೂ ನನಗಿದೆ. ಒಬ್ಬರೊಬ್ಬರಿಗೆ ಮರುಳಾಗಿರುವ ತರುಣ ತರುಣಿಯರು ಏಕಾಂತದಲ್ಲಿ ಕೂಡುವ ಸಂಧಿ ಸಿಕ್ಕಾಗ ಅದನ್ನುಪಯೋಗಿಸಿಕೊಳ್ಳದೆ ಬಿಡುವದಿಲ್ಲ. ಬೇರೆಯವರ ಮಾತೀಗ ಬೇಡ. ನನ್ನ ಅನುಭವವನ್ನೇ ಹೇಳುತ್ತೇನೆ, ಕೇಳು. ಇದುವರೆಗೂ ನಿನ್ನ ಮುಂದೆ ನಾನು ಈ ಸಂಗತಿಯನ್ನೆತ್ತಿಲ್ಲ – ನಿನ್ನ ಮುಂದೆ ಮಾತ್ರವಲ್ಲ, ಯಾರ ಮುಂದೆಯೂ ಈ ವಿಷಯ

ಹೇಳಿಲ್ಲ. ಮ್ಯಾಟ್ರಿಕ್ ಮುಗಿದ ಬಳಿಕ ನಾನು ಇಲ್ಲಿಗೆ ಬಂದೆನಲ್ಲ – ಆಗ ಇನ್ನೂ ಮದುವೆಯಾಗಿರಲಿಲ್ಲ ನನಗೆ. ರೂಮು ಮಾಡಿಕೊಂಡು ಒಬ್ಬನೇ ಇದ್ದೆ. ನಮ್ಮ ಆಫೀಸಿನಲ್ಲಿ ಟೈಪಿಸ್ಟ್ ಆಗಿದ್ದ ವಿಮಲಾ ಎಂಬ ಬ್ರಾಹ್ಮಣರ ಹುಡುಗಿಯೊಡನೆ ಸಲಿಗೆಯಾಯಿತು. ಅವಳಿಗೂ ಇನ್ನೂ ಮದುವೆಯಾಗಿರಲಿಲ್ಲ.

"ವಿಮಲಾ ಚೆಲುವೆಯೇನೂ ಅಲ್ಲ. ಮೈ ಬಣ್ಣ ಸ್ವಲ್ಪ ಕಪ್ಪು. ಲೀಲಾ ಇಲ್ಲವೇ, ಹಾಗೆ. ಅವರ ತಂದೆಗೆ ಎಂಟು ಜನ ಮಕ್ಕಳು. ನಾಲ್ಕು ಹೆಣ್ಣು ಮಕ್ಕಳು. ಇವಳೇ ದೊಡ್ಡವಳು. ತಂದೆ ಪ್ರಾಥಮಿಕ ಶಾಲೆಯ ಮಾಸ್ತರರು. ಬರುವ ಸಂಬಳ ಅರವತ್ತು. ಮನೆಯಲ್ಲಿ ಬಹಳ ಬಡತನ. ಅಂಥಾದ್ದರಲ್ಲೂ ಇವಳಿಗೆ ಮ್ಯಾಟ್ರಿಕ್‌ವರೆಗೆ ಓದಿಸಿದ್ದರು. ಹುಡುಗಿ ಬಹಳ ಜಾಣೆ. ಆದರೇನು, ವರದಕ್ಷಿಣೆ ಕೊಟ್ಟು ಮದುವೆ ಮಾಡಲು ಅವಳ ತಂದೆಗೆ ಶಕ್ತಿಯಿರಲಿಲ್ಲ. ಇವಳಿಗೆ ಸೌಂದರ್ಯವೂ ಇರಲಿಲ್ಲವಲ್ಲ. ಇಪ್ಪತ್ತು ವರ್ಷ ಪ್ರಾಯವಾದರೂ ಮದುವೆಯಾಗಿರಲಿಲ್ಲ. ಮನೆಯಲ್ಲಿ ಕುಳಿತು ಮಾಡುವದಾದರೂ ಏನು? ತಮ್ಮಂದಿರ ತಂಗಿಯರ ಶಿಕ್ಷಣದ ಖರ್ಚು ಬೇರೆ ವಿಪರೀತವಾಗಿತ್ತು. ಮನೆತನಕ್ಕೆ ಸ್ವಲ್ಪವಾದರೂ ಸಹಾಯವಾದೀತೆಂದು ಅವಳು ಟೈಪಿಸ್ಟ್ ಕೆಲಸಕ್ಕೆ ಸೇರಿದ್ದಳು. ಆಫೀಸಿನಲ್ಲೆಲ್ಲ ಅವಳೊಬ್ಬಳೇ ಒಬ್ಬಳು ಹೆಣ್ಣು. ಪ್ರೆಸಿಡೆಂಟರು ಚೀಫ್ ಆಫೀಸರು ಮೆಂಬರುಗಳು ಕಾರಕೂನರು ಎಲ್ಲರಿಗೂ ಅವಳ ಮೇಲೆ ಕಣ್ಣು. ಪ್ರತಿಯೊಬ್ಬರೂ ಅವಳನ್ನು ಕೆಡಿಸಲು ಯತ್ನಿಸುವವರೇ. ನಿಜ ಹೇಳುತ್ತೇನೆ. ನನಗೂ ಅವಳ ಬಗ್ಗೆ ಆಸೆಯಾಯಿತು. ಆ ವೇಳೆಗಾಗಲೆ ಅವಳು ಎಷ್ಟೋ ಜನರೊಡನೆ ರಮಿಸಿರಬೇಕೆಂದು ನನಗೆನ್ನಿಸಿತ್ತು. ಆಫೀಸಿನಲ್ಲಿ ಕೆಲಸ ಮಾಡುವ ಯುವತಿಯರು ಚಾರಿತ್ರ್ಯ ಕಾದುಕೊಳ್ಳಲು ಸಾಧ್ಯವೇ ಇಲ್ಲವೆಂದು ನಾನು ತಿಳಿದುಕೊಂಡಿದ್ದೆ.

"ವಿಮಲಾ ಬಹಳ ಸೋಶಿಯಲ್ ಆಗಿದ್ದಳು. ಗಂಡಸರೊಡನೆ ಮಾತಾಡುವಾಗ ಸ್ವಲ್ಪವೂ ಸಂಕೋಚಗೊಳ್ಳುತ್ತಿರಲಿಲ್ಲ. ನಾನು ಕೆಲಸಕ್ಕೆ ಸೇರಿದ ಕೆಲ ದಿನಗಳಲ್ಲೇ ಅವಳೊಡನೆ ಗಾಢ ಸ್ನೇಹವಾಯಿತು. ಇಬ್ಬರೂ ಕೂಡಿ ಚಹಕ್ಕೆ, ಸಿನಿಮಾಕ್ಕೆ, ತಿರುಗಾಡಲಿಕ್ಕೆ ಹೋಗತೊಡಗಿದೆವು. ಒಂದು ದಿನ ಹೀಗೇ ಇಲ್ಲಿಯವರೆಗೆ ಬಂದು ಕತ್ತಲಾಗುವತನಕ ಇಲ್ಲೇ ಕೂತಿದ್ದೆವು...."

"ಇಲ್ಲೇ ಅಂದರೆ ಇದೇ ಜಾಗದಲ್ಲೇ?"

"ಹೌದು. ಇಲ್ಲೇ. ಅದಕ್ಕೇ ಈ ಜಾಗ ಅಂದರೆ ನನಗೆ ಹೆಚ್ಚು ಪ್ರೀತಿ. ತಿರುಗಾಡಲು ಬಂದಾಗಲೆಲ್ಲ ಇಲ್ಲಿಗೇ ಬರುತ್ತೇನೆ ನಾನು. ಅಂದು ಅವಳು ಇಲ್ಲಿ, ನೀನು ಕೂತಲ್ಲೇ ಕೂತಿದ್ದಳು. ಚೀಫ್ ಆಫೀಸರ ವಿಷಯ ಹೇಳುತ್ತಾ ಅವಳು ಆಗಾಗ ನಗುತ್ತಿದ್ದಳು. ಕತ್ತಲಾಗುತ್ತ ಬಂದರೂ ಎದ್ದು ಹೊರಡುವ ವಿಚಾರ ಬಂದಿರಲಿಲ್ಲ. ಅವಳು ಅಷ್ಟು ಸಮೀಪದಲ್ಲಿ ಕೂತು ನಗುತ್ತಿದ್ದುದನ್ನು ನೋಡಿದ ಹಾಗೆಲ್ಲ ನನಗೆ ಸಹಜವಾಗಿಯೆ ಬಯಕೆ ಕೆರಳುತ್ತಿತ್ತು. ಅವಳಿಗೂ ಹಾಗೇ ಆಗುತ್ತಿದ್ದಿರಬೇಕೆಂದೂ ನನಗನ್ನಿಸಿತ್ತು.

"'ಚೀಫ್ ಆಫೀಸರು ನನಗಾಗಿ ಹುಚ್ಚನಂತಾಗಿದ್ದಾನೆ. ಕೆಲಸವಿಲ್ಲದಿದ್ದಾಗಲೂ ಏನೆನೋ ನೆಪ ತೆಗೆದು ನನ್ನನ್ನು ತನ್ನ ರೂಮಿಗೆ ಕರೆಸಿಕೊಂಡು ತಿಂದುಬಿಡುವ ಹಾಗೆ ನನ್ನನ್ನು ನೋಡುತ್ತಾನೆ,' ಎಂದಳು ವಿಮಲಾ.

"'ನಿನ್ನನ್ನು ನೋಡಿದರೆ ಯಾರಿಗಾದರೂ ಹಾಗಾಗುವದು ಸಹಜ' ಎನ್ನುತ್ತಾ ನಾನು ಅವಳನ್ನು ನನ್ನ ತೋಳುಗಳಲ್ಲಿ ಬಿಗಿದುಕೊಂಡೆ. ಒಂದು ಕ್ಷಣ ಮಾತ್ರ ಅವಳು ಅಪ್ರತಿಭಳಾದ ಹಾಗೆ ತೋರಿತು. ಅನಂತರ...."

ಮಾತು ನಿಲ್ಲಿಸಿ, ಒಂದು ನಿಮಿಷ ಸುಮ್ಮನಿದ್ದು ಮತ್ತೆ ಹೇಳತೊಡಗಿದ ಶಿವಣ್ಣ.

"ಅಂದು ಮೊದಲನೆಯ ಸಲ ಅವಳನ್ನು ಕೂಡಿದ್ದಾಯಿತು. ಅವಳೇನೂ ನಾಚಿಕೊಳ್ಳಲಿಲ್ಲ. ನನ್ನಂತೆ ಅವಳಿಗೂ ಸಂತೋಷವಾಗಿತ್ತು. ಇಬ್ಬರೂ ನಗು ನಗುತ್ತಲೇ ಮನೆಗೆ ಹೋದೆವು. ಆಮೇಲೂ ಎಷ್ಟೋ ಸಲ ಇಲ್ಲಿಯೆ ಸಂಧಿಸುತ್ತಿದ್ದೆವು. ಒಂದೊಂದು ರಾತ್ರಿ ನನ್ನ ರೂಮಿಗೂ ಬರುತ್ತಿದ್ದಳವಳು."

"ಅಕ್ಕಪಕ್ಕದವರಿಗೆ ಗೊತ್ತಾಗಲಿಲ್ಲವೆ?"

"ರಾತ್ರಿ ಹತ್ತು ಗಂಟೆಯ ಮೇಲೆ ಬಂದರೆ ಯಾರಿಗೆ ಗೊತ್ತಾಗುತ್ತದೆ ಸದಾನಂದ....? ಅಲ್ಲದೆ ಇದು ನಗರ. ಯಾರೂ ಯಾರ ಕಡೆಗೂ ಹೆಚ್ಚು ಲಕ್ಷ್ಯ ಕೊಡುವದಿಲ್ಲ. ಅವರ ಸಮಸ್ಯೆಗಳೇ ಅವರಿಗೆ ಸಾಕಷ್ಟಿರುತ್ತವಲ್ಲ...."

"ಸರಿ. ಅವಳನ್ನೇ ಮದುವೆಯಾಗಬಹುದಾಗಿತ್ತಲ್ಲ ನೀನು?"

"ನಿನಗೆ ಏನೇನೂ ತಿಳಿಯುವದಿಲ್ಲ ನೋಡು ಸದಾನಂದಾ. ಅಂಥವಳನ್ನು ಮದುವೆಯಾಗಲು ಯಾರಿಗಾದರೂ ಮನಸ್ಸು ಬಂದೀತೇ? ನಾಲ್ಕು ದಿನ

ಮೋಜು ಮಾಡುವದೆಷ್ಟೋ ಅಷ್ಟೆ. ಇಂಥ ಹುಡುಗಿಯರೊಡನೆ ಸಂಸಾರ ಸಾಧ್ಯವಾದೀತೇ? ನನ್ನಂಥವರೆಷ್ಟು ಮಂದಿ ಗೆಳೆಯರೋ ಅವಳಿಗೆ!"

"ಎಲ್ಲರೊಡನೆಯೂ ನಿನ್ನ ಹಾಗೇ ಸಂಬಂಧವಿತ್ತೇ?"

"ನನಗಂತೂ ಏನೂ ಸಂಶಯವಿರಲಿಲ್ಲ. ಅವಳು ಆಗಾಗ ಚೀಫ್ ಆಫೀಸರ ಮನೆಗೂ ಹೋಗುತ್ತಿದ್ದಳೆಂದು ಸುದ್ದಿಯಿತ್ತು. ಒಂದು ದಿನ ಆ ಬಗ್ಗೆ ಅವಳನ್ನು ಸ್ಪಷ್ಟವಾಗಿ ಕೇಳಿಯೂ ಬಿಟ್ಟೆ. ಅವಳೇನೆಂದಳು ಗೊತ್ತೇ?"

"ಏನು?"

"ಅಂದಳು: 'ಅದೆಲ್ಲಾ ಯಾಕೆ ತಲೆಗೆ ಹಾಕಿಕೊಳ್ಳುತ್ತೀರಿ? ನೀವೇನು ನನ್ನ ಮದುವೆಯಾಗಬೇಕಾಗಿಲ್ಲವಲ್ಲ!' ಅಂತ. ಸರಿ. ನನ್ನನ್ನು ಮದುವೆ ಯಾಗುವಿಯಾ ಅಂತ ನಾನು ಅವಳನ್ನು ಕೇಳುವ ಅಗತ್ಯವೂ ತಪ್ಪಿ ಹೋಯಿತು."

"ಈಗಲೂ ಅವಳು ನಿಮ್ಮ ಆಫೀಸಿನಲ್ಲೇ ಇದ್ದಾಳೆಯೇ ಶಿವಣ್ಣ?"

"ಇಲ್ಲ. ಒಬ್ಬರು ಸ್ನೇಹಿತರ ವಶೀಲಿಯಿಂದ ಅವಳಿಗೆ ರೆವಿನ್ಯೂ ಖಾತೆಯಲ್ಲಿ ಕೆಲಸ ಸಿಕ್ಕಿತು. ಈಗ ಅವಳಿಗೆ ತಿಂಗಳಿಗೆ ನೂರೈವತ್ತು ರೂಪಾಯಿ ಸಂಬಳ. ಮದುವೆಯೂ ಆಗಿದೆ. ಸುಖವಾಗಿದ್ದಾಳೆ. ಆಗಾಗ ನನಗೂ ಭೆಟ್ಟಿ ಯಾಗುತ್ತಿರುತ್ತಾಳೆ. ಆದರೆ ನಮ್ಮಿಬ್ಬರಲ್ಲಿ ಮೊದಲಿನ ಸಂಬಂಧವೇನೂ ಇಲ್ಲ. ಸಂಸಾರದಲ್ಲಿ ಅವಳು ತೃಪ್ತಿ ಪಡೆದಿರಬೇಕೆಂದೇ ನನಗೆನ್ನಿಸುತ್ತದೆ."

"ನೀನೋ?"

"ನಾನೂ ಸುಖವಾಗೇ ಇದ್ದೇನಪ್ಪ. ನನ್ನ ಹೆಂಡತಿ ಬಹಳ ಒಳ್ಳೆ ಯವಳು. ಬುದ್ಧಿವಂತೆ."

"ವಿಮಲಳ ನೆನಪು ನಿನ್ನ ಸುಖವನ್ನು ಕೆಡಿಸುವದಿಲ್ಲವೇನು?"

"ಇಲ್ಲ. ಅವಳ ನೆನಪಾದಾಗ ಹಳೆಯದೊಂದು ಸವಿಗನಸು ನೆನಪಾ ದಂತಾಗುತ್ತದಷ್ಟೆ. ಮದುವೆಗೆ ಮೊದಲು ಅವಳ ಸಂಬಂಧ ಬಂದದ್ದು ಒಳ್ಳೆಯದೇ ಆಯಿತೆಂದೂ ಅನ್ನಿಸುತ್ತದೆ."

ಸದಾನಂದ ಚಕಿತನಾಗಿ ಕೇಳಿದ:

"ಒಳ್ಳೆಯದಾಯಿತೇ!"

"ಯಾಕೆ, ನಿನಗೆ ಆಶ್ಚರ್ಯವೇನು? ಸಂಸಾರಿಕ ಜೀವನ ಸಾಗಿಸುವದಕ್ಕೆ

ಒಂದು ತರದ ಟ್ರೇನಿಂಗ್ ಇದ್ದ ಹಾಗೆ ಇಂಥ ಅನುಭವ. ಎಲ್ಲಾ ಯುವಕ ಯುವತಿಯರಿಗೂ ಇಂಥಾ ಅನುಭವ ಅವಶ್ಯವೆಂದು ಪ್ರಸಿದ್ಧ ತತ್ವಜ್ಞಾನಿಗಳೂ ಅಭಿಪ್ರಾಯಪಟ್ಟಿದ್ದಾರೆ. ಬರ್ಟ್ರಾಂಡ್ ರಸೆಲ್ ಓದಿಲ್ಲವೇ ನೀನು?"

"ತೀರಾ ಸ್ವಲ್ಪ."

"ರಸೆಲ್ ಪೂರಾ ಓದಬೇಕು ನೀನು. ಆತ ಶ್ರೇಷ್ಠ ವಿಚಾರವಾದಿ. ವಿವಾಹಪೂರ್ವ ಪ್ರಣಯ ಸಂಬಂಧಗಳಿಂದ ಬಹಳ ಪ್ರಯೋಜನವಿದೆಯೆಂದು ಆತ ಸಾರ್ವಜನಿಕವಾಗಿಯೆ ಸಾರಿದ್ದಾನೆ. ಅರ್ಥಾತ್ ಇಂದಿನ ಕಾಲೇಜು ವಿದ್ಯಾರ್ಥಿ ವಿದ್ಯಾರ್ಥಿನಿಯರಲ್ಲಿ ಬಹುಮಂದಿ ರಸೆಲ್ ತತ್ವಜ್ಞಾನವನ್ನು ಕೃತಿಗಿಳಿಸುತ್ತಿದ್ದಾರೆ. ನೀನೂ ಹಾಗೇ ಮಾಡಿದರೂ ನನಗೆ ಸಂತೋಷವೇ. ಸ್ವಲ್ಪ ಅನುಭವವಾದರೂ ಬಂದೀತು ನಿನಗೆ. ಶಾಂತಾಳಂಥ ಚೆಲುವೆಯ ಗೆಳೆತನವಿದ್ದೂ ನೀನು ಪೆದ್ದನಂತೆ ಸುಮ್ಮನಿದ್ದೀಯಲ್ಲಾ...."

"ಅವಳ ಬಗ್ಗೆ ನೀನು ಹೀಗೆಲ್ಲ ಮಾತಾಡಬಾರದು ಶಿವಣ್ಣಾ."

"ಓಹ್ಹೊ. ಅವಳು ನಿನ್ನ ದೇವತೆಯೆಂದು ಕಾಣುತ್ತದೆ!" ಶಿವಣ್ಣ ಹಾಸ್ಯ ಮಾಡಿದ.

"ಅವಳು ನನ್ನ ಏಂಜೆಲ್," ಎಂದ ಸದಾನಂದ.

ಶಿವಣ್ಣ ಗಟ್ಟಿಯಾಗಿ ನಗುತ್ತ, "ಏಂಜಲನ್ನು ಮುಂದೆ ಏನು ಮಾಡಬೇಕೆಂದಿರುವೆ? ಅವಳೊಡನೇ ಮದುವೆಯಾಗುವ ವಿಚಾರವೋ ಏನು?" ಎಂದು ಪ್ರಶ್ನಿಸಿದ.

"ಮದುವೆಯ ವಿಚಾರ ನಾನಿನ್ನೂ ಯೋಚಿಸಿಲ್ಲ. ಮೊದಲು ನನ್ನ ಎಂ.ಎ. ಮುಗಿಯಬೇಕು."

"ನಿನ್ನ ಎಂ.ಎ. ಮುಗಿಯುವವರೆಗೆ ಅವಳು ಕಾಯಬೇಡವೆ? ಅವಳ ಮನೆಯವರು ಸುಮ್ಮನಿದ್ದಾರೇ? ಈಗಾಗಲೆ ಅವಳಿಗೆ ಹದಿನೇಳು ವರ್ಷ. ಅವಳಾದರೂ ಎಷ್ಟು ದಿನ ತಡೆಯಬಲ್ಲಳು?"

"ಅವಳ ವಿಷಯ ನಿನಗೆ ಸರಿಯಾಗಿ ಗೊತ್ತಿಲ್ಲ ಶಿವಣ್ಣಾ. ಹಾಗೆಲ್ಲ ಸ್ವೇಚ್ಛಾಚಾರಿಯಲ್ಲ ಶಾಂತಾ."

"ಸ್ವೇಚ್ಛಾಚಾರಿಯಾಗಿರಲಿಕ್ಕಿಲ್ಲ. ಆದರೆ ಅವಳೂ ಮಾನವ ಪ್ರಾಣಿ, ಹೆಣ್ಣು, ಹರಯದ ಹೆಣ್ಣು ಅನ್ನುವದನ್ನು ಮರೆಯಬೇಡ. ಅವಳ ವಿಷಯ

ನನಗೆ ತಿಳಿಯದು ಅನ್ನುತ್ತೀ. ನಿಜವಾಗಿ ನಿನಗೇ ಸರಿಯಾಗಿ ತಿಳಿದಿರಲಿಕ್ಕಿಲ್ಲ. ಅವಳೊಬ್ಬಳ ಬಗ್ಗೇ ಯಾಕೆ, ಒಟ್ಟು ಸ್ತ್ರೀಯರ ಬಗ್ಗೇ ನಿನಗೆ ಏನೂ ತಿಳಿಯದು. ಎಳೆಮಗು ಇದ್ದ ಹಾಗಿದ್ದೀ ನೀನು."

ಸದಾನಂದ ಉತ್ತರವೀಯಲಿಲ್ಲ. ಶಿವಣ್ಣನೇ ಮುಂದುವರೆಸಿದ :

"ಈ ಶಾಂತಳ ಹುಚ್ಚನ್ನು ತಲೆಗೆ ಹಾಕಿಕೊಂಡು ಏನೂ ಉಪಯೋಗವಿಲ್ಲ ಸದಾನಂದಾ."

"ಒಂದೊಂದು ಸಲ ನನಗೂ ಹಾಗೇ ಅನ್ನಿಸುತ್ತದೆ."

"ಹೂಂ. ಹೀಗೆ ಹಾದಿಗೆ ಬಾ. ಪ್ರೇಮ ಗೀಮ ಎಲ್ಲಾ ಕಾವ್ಯದ ಮಾತು. ಇಂದಿನ ಜಗತ್ತಿನಲ್ಲಿ ಅಂಥ ಪ್ರೇಮವನ್ನು ಯಾರೂ ಕೇಳುವದಿಲ್ಲ. ನೀನು ಶಾಂತಾ ಪರಸ್ಪರರನ್ನು ಪವಿತ್ರವಾಗೇ ಪ್ರೀತಿಸುತ್ತಿದ್ದರೂ ಸಹ ಜಾತಿಗಳು ನಿಮ್ಮನ್ನು ದೂರದಲ್ಲೇ ಇಡುತ್ತವೆ. ಅವಳಿಗೂ ತಂದೆ ಅಣ್ಣ ತಮ್ಮಂದಿರಿದ್ದಾರೆ, ನಿನಗೂ ಇದ್ದಾರೆ. ಅವರೆಲ್ಲರ ಮನಸು ನೋಯಿಸಿ ನೀವಿಬ್ಬರೇ ಮದುವೆಯಾಗಲು ಸಾಧ್ಯವೇ?"

"ಬಹಳ ಕಷ್ಟವೆಂಬುದನ್ನು ಒಪ್ಪುತ್ತೇನೆ."

"ಅದಕ್ಕೇ ನಾನು ಹೇಳುವದು. ಅವಳನ್ನು ಬಹಳ ಹಚ್ಚಿಕೊಂಡು ಸಾಯಬೇಡ. ಬೇಕಿದ್ದರೆ ಒಂದೆರಡು ಸಲ ಮಜಾ ಮಾಡಿಬಿಡಬಹುದು. ಬೇಡವಾದರೆ ಬಿಟ್ಟು ಬಿಡಬಹುದು. ಹೆಣ್ಣುಗಳಿಗೇನು ಕೊರತೆಯೇ ಸದಾನಂದಾ? ಅದರಲ್ಲೂ ನಿನ್ನಂಥಾ ಬುದ್ಧಿವಂತರಿಗೆ? ಹುಕ್ಕೇರಿ ಸಾಹೇಬರು ಗೊತ್ತಿಲ್ಲವೇ ನಿನಗೆ?"

"ಕೇಳಿದ್ದೇನೆ. ಕೊಟಬಾಗಿಗೆ ಪರಿಚಯವಂತೆ."

"ನನಗೂ ಪರಿಚಯವಿದೆ. ಅವರ ಮನೆಯವರೆಲ್ಲಾ ಬಹಳ ಒಳ್ಳೆಯವರು. ಸುಸಂಸ್ಕೃತರು. ಅವರ ಮಗಳು ಮೀನಾಕ್ಷಿ...."

ತನ್ನನ್ನೇ ಯಾರೋ ಬಲವಂತದಿಂದೆಳೆದೊಯ್ದು ಆಳವಾದ ಬಾವಿಗೆ ದೂಡುತ್ತಿರುವ ಹಾಗೆ ಭಾಸವಾಯಿತು ಸದಾನಂದನಿಗೆ. ಮೀನಾಕ್ಷಿಯ ಪ್ರಸ್ತಾಪ ಬಂದೊಡನೆ ಶಾಂತಿಯ ಪ್ರಿಯಮೂರ್ತಿ ಅವನ ಬಗೆಗಣ್ಣಿನೆದುರಿಗೆ ಮೂಡಿತು. ಮತ್ತೆ ಅವನ ಕಣ್ಣುಗಳಲ್ಲಿ ಹನಿಯೂಡತೊಡಗಿತು. ತನ್ನ ಪ್ರಾಣದಲ್ಲೇ ಏಕವಾಗಿ ಬೆರೆತುಕೊಂಡಿದ್ದಾಳೆ ಶಾಂತಿ. ಅವಳನ್ನು ಕೂಡುವುದು

ಸಾಧ್ಯವಿಲ್ಲವೆ? ಕೊನೆಗೂ ತಾನು ಅವಳಿಂದ ದೂರಹೋಗಬೇಕಾಗಿ ಬರುವುದೊ ಏನೊ....

ಶಿವಣ್ಣ ಹೇಳುತ್ತಲೇ ಇದ್ದ :

"ಒಂದು ತಿಂಗಳ ಹಿಂದೇ ಕೊಟಬಾಗಿಯೊಡನೆ ವಾತಾಡಿ ಹುಕ್ಕೇರಿ ಸಾಹೇಬರಿಗೆ ಪತ್ರ ಬರೆದಿದ್ದೆ. ಅವರಿಂದ ವೊನ್ನೆ ಉತ್ತರವೂ ಬಂದಿದೆ. ಈ ಸೂಟಿಯ ಕಾಲದಲ್ಲಿ ನಿನ್ನನ್ನು ಕರೆದುಕೊಂಡು ಬರಬೇಕೆಂದು ಬರೆದಿದ್ದಾರೆ. ವಧುವನ್ನು ನೀನು ನೋಡಿ ಒಪ್ಪಿದರೆ ಬೇಸಿಗೆಯಲ್ಲಿ ಲಗ್ನ ಮಾಡಿಬಿಡಬಹುದೆಂದೂ ತಿಳಿಸಿದ್ದಾರೆ."

ಸದಾನಂದನಿಗೆ ಬಲು ಬೇಸರವಾಯಿತು. ಅವನು ವೇಲಕ್ಕೆದ್ದು ನಿಂತು ಹೇಳಿದ :

"ನನ್ನನ್ನೊಂದು ಮಾತೂ ಕೇಳದೆ ಅವರಿಗೆ ಪತ್ರವನ್ನೇಕೆ ಬರೆದೆ ಶಿವಣ್ಣಾ?"

"ನಿನ್ನ ಕೇಳಿದ್ದರೆ ಅರ್ಥಾತ್ ನೀನು ಬೇಡ ಅನ್ನುತ್ತಿದ್ದೆಯಲ್ಲ...."

"ಎಂಥ ಕಠಿಣಪ್ರಸಂಗ ತಂದಿಟ್ಟೆ ಶಿವಣ್ಣಾ. ನನ್ನ ಮತ್ತು ಶಾಂತಿಯ ಸಂಬಂಧವನ್ನು ತಿಳಿದೂ ನೀನು ಹೀಗೆ ಮಾಡಬೇಕೇ?"

"ಅದಕ್ಕೇ ಇಷ್ಟು ಅವಸರ ಮಾಡಿದ್ದು, ಈ ವ್ಯರ್ಥಪ್ರೇಮದ ಹುಚ್ಚಿಗೆ ಬಿದ್ದು ನೀನು ಹಾಳಾಗುವದನ್ನು ತಪ್ಪಿಸಬೇಕು ಅಂತ...."

ಆ ರಾತ್ರಿ ಶಿವಣ್ಣನ ಮನೆಯಲ್ಲಿಯೆ ಊಟವಾಯಿತು. ಸದಾನಂದನಿಗೆ ಅನ್ನದ ಮೇಲೆ ಗಮನವಿರಲಿಲ್ಲ. ಅವನ ಮನಸ್ಸಿನಲ್ಲೆಲ್ಲ ಶಾಂತಿಯೇ ಹರಡಿಕೊಂಡಿದ್ದಳು. ಶಿವಣ್ಣ ಏನೇನನೊ ಮಾತನಾಡುತ್ತಲೇ ಇದ್ದ. ಸದಾನಂದ ಯಾಂತ್ರಿಕವಾಗಿ ಅವುಗಳಿಗೆ ಉತ್ತರವೀಯುತ್ತಿದ್ದ. ಹತ್ತು ಗಂಟೆಯ ಸುಮಾರಿಗೆ ಆತ ಶಿವಣ್ಣನ ಮನೆಯಿಂದ ಹೊರಟು ಕೊಟಡಿಯ ಕಡೆ ಬರುತ್ತಿದ್ದ ಹಾಗೆ ತನ್ನ ಎದೆಯ ಮೇಲೆ ಯಾರೋ ಕುಳಿತು ನಿರ್ದಯೆಯಿಂದ ಏಟು ಹಾಕುತ್ತಿದ್ದ ಹಾಗೆ ತೋರತೊಡಗಿತು. ಎಡಗೈಯಿಂದ ಎದೆಯನ್ನು ಹಿಡಿದುಕೊಂಡು ರಸ್ತೆಯಲ್ಲಿ ಎಡಹುತ್ತ ಮುಂದೆ ಸಾಗಿದ.

## ೧೯

ಶಾಂತಳ ಕೊಟಡಿಯಲ್ಲಿನ್ನೂ ದೀಪವುರಿಯುತ್ತಿತ್ತು. ಅದು ಹಾಗೆ ಬಹಳ ಹೊತ್ತಿನವರೆಗೆ ಉರಿಯುವುದು ಹೊಸ ವಿಷಯವೇನೂ ಆಗಿರಲಿಲ್ಲ. ಒಂದೊಂದು ದಿನ ಮಧ್ಯರಾತ್ರಿಯವರೆಗೂ ಅವಳು ದೀಪವುರಿಸುತ್ತ ಪುಸ್ತಕವನ್ನೋದುತ್ತ ಕುಳಿತುದನ್ನು ಸದಾನಂದ ಕಂಡಿದ್ದ. "ಹೀಗೆ ರಾತ್ರಿ ನಿದ್ದೆ ಕೆಟ್ಟರೆ ಕಣ್ಣು ಕೆಡುವದಿಲ್ಲವೆ?" ಎಂದೂ ಒಂದು ಬಾರಿ ಎಚ್ಚರಿಸಿದ್ದ. "ಕೆಟ್ಟರೂ ಏನಂತೆ. ಈಗ ಎರಡಿರುವ ಕಣ್ಣು ನಾಲ್ಕಾಗುತ್ತವಷ್ಟೆ. ಕನ್ನಡಕ ಇಟ್ಟುಕೊಂಡರೆ ನಾನೂ ಒಬ್ಬ ಪಂಡಿತೆಯಂತೆ ಕಾಣಿಸಬಹುದು," ಎಂದು ಅವಳು ನಕ್ಕುಬಿಟ್ಟಿದ್ದಳು.

ಕೊಟಬಾಗಿಯೂ ಇನ್ನೂ ಎಚ್ಚರವಾಗಿದ್ದವನು ಸದಾನಂದನನ್ನು ನೋಡುತ್ತಲೂ ಹೇಳಿದ:

"ಯಾಕೆ ಬಹಳ ತಡವಾಯ್ತು? ಕವಿರತ್ನರ ದರ್ಶನಕ್ಕೆ ಹಿಂಡಿಗೆ ಹಿಂಡೇ ಬಂದಿತ್ತು."

ಅಂಗಿಯನ್ನು ತೆಗೆದು ಗೂಟಕ್ಕೆ ತಗಲಿಸುತ್ತ ಸದಾನಂದ ಕೇಳಿದ:

"ಯಾರ್‍ಯಾರು ಬಂದಿದ್ದರು?"

"ಅವಕ್ಕೊಂದು ಲೆಕ್ಕವೇ! ಲೀಲಾ ಕುಮುದ ಅಂತೂ ಸರಿ. ದಿನಾಲೂ ಇದ್ದೇ ಇರುತ್ತಾರೆ. ಒಂಭತ್ತು ಗಂಟೆಯ ಸುಮಾರಿಗೆ ನಿಮ್ಮ ಸೆಕ್ರೆಟರಿ ಮಹಾಶಯ ಬಂದಿದ್ದ. ಏನೋ ಅರ್ಜಂಟಿದೆಯಂತೆ. ಭೆಟ್ಟಿಯಾಗದೆ ಹಾಗೇ

ಊರಿಗೆ ಹೋಗಬಾರದೆಂದು ಹೇಳಿದ. ನಾಳೆ ಮುಂಜಾನೆ ಅವನ ರೂಮಿಗೆ ಬರಲು ಹೇಳಿದ್ದಾನೆ."

ಮಾರುಕಟ್ಟೆಯ ಬಳಿಯಲ್ಲಿನ ಇಕ್ಕಟ್ಟಾದ ಸಂದಿಯೊಂದರಲ್ಲಿದ್ದ ನರಗುಂದನ ಕೊಟಡಿಗೆ, ಮರುದಿನ ಸದಾನಂದ ಬಂದಾಗ ಆತ ಬಾಗಿಲಿನಲ್ಲಿ ಪಾತ್ರೆಗಳನ್ನು ತಿಕ್ಕುತ್ತ ಕುಳಿತಿದ್ದವನು ಬೇಗ ಬೇಗ ಆ ಕೆಲಸ ಮುಗಿಸಿ ಸದಾನಂದನನ್ನು ಹೃತ್ಪೂರ್ವಕವಾಗಿ ಬರಮಾಡಿಕೊಂಡ.

ಕೊಟಡಿಯ ಮೂಲೆಯಲ್ಲಿದ್ದ ಕಬ್ಬಿಣದ ಒಲೆಯ ಮೇಲೆ ಇದ್ದಲು ಬೆಂಕಿ ಉರಿಯುತ್ತಿತ್ತು. ಪಾತ್ರೆಗೆ ನೀರು ತುಂಬಿ ಚಹಕ್ಕಿಡುತ್ತಾ ನರಗುಂದ ಹೇಳಿದ:

"ನಿನ್ನೆ ರಾತ್ರಿ ಬಹಳ ಹೊತ್ತಿನವರೆಗೂ ನಿಮ್ಮ ರೂಮಿನಲ್ಲಿ ಕಾದು ಕುಳಿತಿದ್ದೆ. ನೀವೆಲ್ಲಿ ಸಿನಿಮಾಕ್ಕೆ ಹೋಗಿದ್ದಿರೇನು?"

"ಇಲ್ಲ. ಶಿವಣ್ಣನೊಡನೆ ತಿರುಗಾಡಲು ಹೋಗಿದ್ದೆ. ರೂಮಿಗೆ ಬಂದಾಗ ಹತ್ತೂವರೆಯಾಗಿತ್ತು –"

"ಸರಿ – ಸರಿ. ಹೊಸ ಸುದ್ದಿ ಕೇಳಿದ್ದೀರಾ?"

"ಹೊಸ ಸುದ್ದಿ?"

"ನಿಮ್ಮನ್ನೂ ಶಾಂತಕ್ಕನನ್ನೂ ಪೀಡಿಸುತ್ತಿರುವ ಜನರೇ ಈಗ ನನಗೂ ಕುಮುದಳಿಗೂ ಗಂಟು ಬಿದ್ದಿದ್ದಾರೆ."

"ಹೀಗೇನು? ಏನಾಯಿತು?"

ನರಗುಂದ ತನ್ನ ಟ್ರಂಕಿನಿಂದ ಎರಡು ಪತ್ರಗಳನ್ನು ತೆಗೆದು ಸದಾನಂದನ ಕೈಗಿತ್ತು, "ಸಾವಕಾಶವಾಗಿ ಓದಿ ನೋಡಿರಿ. ನಿಮಗೆ ಪೋಲೀಸರಿಂದ ಎಚ್ಚರಿಕೆ ಬಂದರೆ ನನಗೆ ಆರ್. ಎಸ್. ಎಸ್. ದಿಂದ ನೇರವಾಗೇ ಬೆದರಿಕೆ ಬಂದಿದೆ. ಅಡ್ಡಿಯಿಲ್ಲ. ಇವರ ಕಣ್ಣಲ್ಲಿ ಕಾಣುವಷ್ಟಾದರೂ ಪ್ರಸಿದ್ಧ ವ್ಯಕ್ತಿಯಾದಂತಾಯಿತಲ್ಲ ನಾನು!" ಎಂದು ಅಣಕದ ನಗೆ ನಕ್ಕು ಚಹವ ಸಿದ್ಧತೆಗೆ ತೊಡಗಿದ.

ನರಗುಂದನಿಗೆ ಬಂದ ಪತ್ರ ಬಹಳ ಚಿಕ್ಕದಾಗಿತ್ತು. "ಮುಸಲರವನಾದ ನೀನು ಬ್ರಾಹ್ಮಣ ಹುಡುಗಿಯ ಮೇಲೆ ಕಣ್ಣಿಟ್ಟು ಬೆಂಕಿಯೊಡನೆ ಆಟಕ್ಕೆ ನಿಂತಿರುವಿ. ಹಿಂದೂಗಳ ಧರ್ಮಾಭಿಮಾನವಾಗಲಿ ಪೌರುಷವಾಗಲಿ ಇನ್ನೂ

ಪೂರ್ಣವಾಗಿ ಅಳಿಸಿಹೋಗಿಲ್ಲವೆಂಬುದನ್ನು ಮರೆಯಬೇಡ. ಆ ಹುಡುಗಿಯ ಸಹವಾಸ ತ್ಯಜಿಸದಿದ್ದರೆ ನಿನ್ನ ಗತಿ ನೆಟ್ಟಗಾಗುವದಿಲ್ಲ. ನಿನ್ನ ಪ್ರಾಣದ ಮೇಲೆ ನಿನಗೆ ಪ್ರೀತಿಯಿದ್ದರೆ ಇನ್ನು ಮೇಲಾದರೂ ಹಿಂದೂ ಹುಡುಗಿಯರ ಕಡೆ ಹೊರಳಿ ನೋಡಬೇಡ. ಇದಕ್ಕೆ ತಪ್ಪಿದಲ್ಲಿ ನಿನ್ನನ್ನು ನೆಟ್ಟಗೆ ನಿನ್ನ ಅಲ್ಲಾನ ಸನ್ನಿಧಿಗೆ ಕಳಿಸಿಕೊಡಲಾಗುವದು."

ಆ ಪತ್ರವನ್ನೋದಿ ಮುಗಿಸಿ ಎರಡನೆಯ ಪತ್ರದ ಮೇಲೆ ದೃಷ್ಟಿಯೋಡಿಸಿದ ಸದಾನಂದ. ಎರಡೂ ಪತ್ರಗಳಲ್ಲಿನ ಹಸ್ತಾಕ್ಷರ ಒಂದೇ ವ್ಯಕ್ತಿಯವಾಗಿದ್ದುದು ಸ್ಪಷ್ಟವಿತ್ತು.

ಕುಮುದಳ ತಂದೆಯನ್ನುದ್ದೇಶಿಸಿ ಬರೆಯಲಾಗಿದ್ದ ಆ ಪತ್ರ ಕೊಂಚ ದೀರ್ಘವಾದುದಾಗಿತ್ತು. ಹಿಂದೂಧರ್ಮದ ಉಜ್ವಲ ಪರಂಪರೆಯನ್ನೂ ಶ್ರೇಷ್ಠ ಸಂಸ್ಕೃತಿಯನ್ನೂ ಬಣ್ಣಿಸಿ, ಅವನ್ನು ಇದ್ದುದಿದ್ದ ಹಾಗೆ ಕಾಪಾಡಿಕೊಂಡು ಬರುವುದು ಬ್ರಾಹ್ಮಣರೆಲ್ಲರ ಕರ್ತವ್ಯವೆಂದು ತಿಳಿಸಿ, ಕುಮುದಾ ನರಗುಂದರ ವಿಷಯವೆತ್ತಿ, ನರಗುಂದ ಅವಳನ್ನು ಹಾರಿಸಿಕೊಂಡು ಹೋಗಲು ಯತ್ನಿಸುತ್ತಿರುವನೆಂದೂ, ಅಂಥ ಪ್ರಸಂಗ ಬರದಂತೆ ಹುಷಾರಾಗಿರಬೇಕೆಂದೂ ಎಚ್ಚರಿಕೆ ಕೊಡಲಾಗಿದ್ದಿತು.

"ಈ ಪತ್ರ ಓದಿ ಕುಮುದಾ ತಂದೆ ಏನು ಹೇಳಿದರಂತೆ ನರಗುಂದ ?"

"ಇಂಥ ಪತ್ರಗಳಿಂದ ತಲೆ ಕೆಡಿಸಿಕೊಳ್ಳುವಷ್ಟು ಅವರು ಅಜ್ಞರಲ್ಲ. ಯಾರೋ ದುಷ್ಟರು ಬರೆದಿದ್ದಾರೆ ಅಂದುಕೊಂಡು ಇದನ್ನು ಮಗಳ ಕೈಗೇ ಕೊಟ್ಟು ನಕ್ಕು ಸುಮ್ಮನಾದರಂತೆ."

"ಕುಮುದಾ ?"

"ಅವಳೂ ನಕ್ಕಳಷ್ಟೆ. ನಿನ್ನೆಯೆಲ್ಲಾ ಅವರ ಮನೆಯಲ್ಲಿ ಬರೀ ನಗೆಯೇ ನಗೆ. ನಾನೂ ನನಗೆ ಬಂದ ಪತ್ರ ತೋರಿಸಿದೆ. ಇವೆರಡನ್ನೂ ಪೋಲೀಸರ ಕೈಗೆ ಕೊಡೋಣ ಅಂತ ಅವಳ ತಂದೆ ಹೇಳಿದರು. ನಾನೇ ಬೇಡ ಅಂದುಬಿಟ್ಟೆ. ಅಲ್ಲ, ಸದಾನಂದಾ, ಜಗತ್ತಿನಲ್ಲಿ ಎಂಥೆಂಥ ಮಂದಿ ಇದ್ದಾರೆ ನೋಡಿರಿ. ಕುಮುದಾ ನಾನು ಅಣ್ಣ ತಂಗಿ ಇದ್ದ ಹಾಗೆ ಇದ್ದೇವೆ. ಅವಳ ಬಗ್ಗೆ ನನಗಾಗಲಿ ನನ್ನ ಬಗ್ಗೆ ಅವಳಿಗಾಗಲಿ ಬೇರೆ ಭಾವನೆಯೆಂದೂ ಬಂದಿಲ್ಲ. ಆಗಾಗ ನಾನು ಅವರ ಮನೆಗೂ ಹೋಗುತ್ತಿರುತ್ತೇನೆ. ಅವರೆಲ್ಲಾ ಬಹಳ ಒಳ್ಳೆಯ ಜನರು.

ನನ್ನನ್ನು ಬಹಳ ಪ್ರೀತಿಯಿಂದ ನೋಡುತ್ತಾರೆ. ನಾನು ಮುಸಲ್ಮಾನ, ಬೇರೆ ಜಾತಿಯವ ಎಂಬ ವಿಚಾರ ಅವರಿಗೆಂದೂ ಬಂದಿಲ್ಲ. ಇಲ್ಲದ ಭೇದಭಾವವನ್ನು ತಂದು ತುಂಬಲು ಇಂಥ ಜನ ಯತ್ನಿಸುತ್ತಾರಲ್ಲ...."

"ನಮ್ಮಂಥವರಿಗೂ ಇವರಂಥ ಸಂಕುಚಿತ ಮನಸ್ಸಿನವರಿಗೂ ಯಾವಾಗಲೂ ವಿರೋಧ ಕಟ್ಟಿಟ್ಟದ್ದೇ ನರಗುಂದ."

"ಸರಿ. ಇವರನ್ನೆಲ್ಲಾ ಎದುರಿಸಿಯೆ ನಾವು ಮುಂದೆ ಸಾಗಬೇಕಾಗಿದೆ. ನನಗೇನೂ ಭಯವಿಲ್ಲ. ಆದರೆ ಕುಮುದಳ ಹೆಸರನ್ನು ಇವರೆಲ್ಲಾದರೂ ಕೆಡಿಸುವರೇನೋ ಅಂತ ಚಿಂತೆ. ಅವಳಿಗಿನ್ನೂ ಮದುವೆಯಾಗಬೇಕೆನ್ನುವದನ್ನು ಮರೆಯುವಂತಿಲ್ಲ."

ಒಂದೆರಡು ನಿಮಿಷ ಇಬ್ಬರೂ ಮೌನವಾಗಿದ್ದರು. ಚಹವನ್ನು ಗುಟುಕರಿಸುತ್ತ ನರಗುಂದನೇ ಮತ್ತೆ ಮಾತನಾಡಿದ:

"ಈಗ ನಾನು ಯಾವ ರೀತಿ ವರ್ತಿಸಬೇಕು ಸದಾನಂದ? ಕುಮುದಾ ಮನೆಗೆ ಹೋಗುವದನ್ನು ನಿಲ್ಲಿಸಿಬಿಡಲೇ ಹೇಗೆ?"

"ನೋಡಿರಿ. ನಿಮಗೆ ಹ್ಯಾಗೆ ತಿಳಿಯುತ್ತದೋ ಹಾಗೆ ಮಾಡಿರಿ. ಈಗ ನನ್ನ ಮುಂದೆಯೂ ಇಂಥಾ ಪ್ರಶ್ನೆಯೇ ಇದೆ. ಏನು ಮಾಡಬೇಕು, ಅಂತ."

"ಏನೇ ಆದರೂ ನಮ್ಮ ಆದರ್ಶವನ್ನು ನಾವು ಬಿಡಬಾರದು."

"ಬಿಡಬಾರದು, ನಿಜ–ಆದರೆ, ವಾಸ್ತವವಾಗಿ ಅದು ಅಷ್ಟೇನೂ ಸುಲಭವಲ್ಲ. ನೂರಾರು ಅಡೆತಡೆಗಳನ್ನು ನಾವು ಎದುರಿಸಬೇಕಾಗುತ್ತದೆ. ಅದಕ್ಕೆಲ್ಲ ಬಹಳ ಸಾಮರ್ಥ್ಯ ಬೇಕು. ಮೊದಲು–ಆರ್ಥಿಕ ಸ್ಥಿತಿ ನೆಟ್ಟಗಿರಬೇಕು. ನನ್ನಂಥವರು ನಿಮ್ಮಂಥವರು ಪ್ರವಾಹದ ವಿರುದ್ಧ ಈಜುವದೆಂದರೆ ಬಹಳ ಕಷ್ಟವೇ ಆಗುತ್ತದೆ, ಅಲ್ಲವೆ?"

ನರಗುಂದ ಸದಾನಂದನಿಗಿಂತಲೂ ಹೆಚ್ಚು ಧೈರ್ಯಶಾಲಿ, ಉತ್ಸಾಹಿ. ಆದರ್ಶದ ಸಾಧನೆಗಾಗಿ ಪ್ರಸಂಗ ಬಂದರೆ ಪ್ರಾಣವನ್ನೂ ಅರ್ಪಿಸಬಲ್ಲ ಕೆಚ್ಚು ಅವನಲ್ಲಿತ್ತು. ಸದಾನಂದ ಮೊದಲಿನಿಂದಲೂ ಕೋಮಲ ಪ್ರಾಣಿ. ಅಸತ್ಯ ಅನ್ಯಾಯಗಳನ್ನು ಕಂಡು ಅವನ ಮನಸ್ಸು ಕೆರಳುತ್ತಿದ್ದಿತಾದರೂ ಅವುಗಳನ್ನು ಕೊನೆಯವರೆಗೂ ಎದುರಿಸಿ ನಿಂತು ಹೋರಾಡಬೇಕೆಂಬ ಯೋಚನೆ ಮಾತ್ರ ಅವನಲ್ಲಿ ಬಹಳ ಹೊತ್ತಿನವರೆಗೆ ಸ್ಥಿರವಾಗಿ ನಿಲ್ಲುತ್ತಿರಲಿಲ್ಲ. ಅವನದು

ದಾಕ್ಷಿಣ್ಯದ ಪ್ರಕೃತಿ. ತನ್ನ ನಡೆನುಡಿಗಳಿಂದಾಗಿ ಯಾರ ಮನಸ್ಸೂ ನೋಯ ಬಾರದು, ಯಾರಿಗೂ ಹಾನಿಯಾಗಬಾರದು ಎಂದು ಅಪೇಕ್ಷಿಸುವ ಜೀವ ಅದು. ಭಾವಜೀವಿಯಾದ ಆತ ತನ್ನದೇ ಆದುದೊಂದು ಕಲ್ಪನಾಲೋಕವನ್ನು ನಿರ್ಮಿಸಿ ಕೊಂಡು ಅದರಲ್ಲಿಯೆ ತೃಪ್ತಿಪಡೆಯಲೆತ್ನಿಸುತ್ತಿದ್ದ – ಆಗಾಗ ಅವನ ಕಲ್ಪನೆಗಳಿಗೆ ಬಲವಾದ ಏಟು ಬೀಳುತ್ತಿತ್ತು. ಅಂಥ ಸಂದರ್ಭಗಳಲ್ಲಿ ಆತ ಗಡಬಡಿಸಿ ಎದ್ದು ಕೆಲಹೊತ್ತು ತನ್ನಲ್ಲೇ ನರಳಿ, ಮತ್ತೆ ತನ್ನ ಚಿಪ್ಪಿನಲ್ಲೇ ಸೇರಿಕೊಂಡುಬಿಡುತ್ತಿದ್ದ. ಅವನ ನೊಂದ ಹೃದಯವನ್ನು ತಣಿಸಲು ಕವಿತೆಯಂತೂ ಇದ್ದೇ ಇತ್ತು. ಸುತ್ತ ಮುತ್ತಲಿನ ಅನ್ಯಾಯಗಳನ್ನು ಕಂಡು ಆಗಾಗ ಅವನ ಮನಸ್ಸು ಬೆಂಕಿಯಾಗಿ ಕೆರಳುತ್ತಿದ್ದಿತಾದರೂ ಅದರ ಕಾವು ಬಹಳ ಕಾಲ ತಡೆಯುತ್ತಿರಲಿಲ್ಲ. ಕೆರಳಿ ಭುಗಿಲೆಂದ ಮರುಕ್ಷಣದಲ್ಲೇ ಅವನಿಗೆ ಜಗತ್ತಿನ ಎಲ್ಲ ಜೀವಿಗಳ ಬಗ್ಗೆ ಕನಿಕರ ವುಂಟಾಗುತ್ತಿತ್ತು. ಅನ್ಯಾಯ ಮಾಡುವವರೂ ತಿಳಿಯದೆ ಮಾಡುತ್ತಿರುವರೆಂದು ಅವನಿಗೆನ್ನಿಸುತಿತ್ತು. Judge not that you be Judged ಎಂಬ ಯೇಸು ವಚನವನ್ನು ನೆನೆದು ಆತ ಹಿಮಗಡ್ಡೆಯಂತೆ ತಣ್ಣಗಾಗಿ ಬಿಡುತ್ತಿದ್ದ.

"ಪ್ರವಾಹದ ವಿರುದ್ಧ ಈಜುವದರಿಂದಲೇ ಪ್ರಗತಿ ಸಾಧಿಸುತ್ತದೆ ಸದಾನಂದಾ. ಶಕ್ತಿಯಿಲ್ಲವೆಂತ ನಾವೆಲ್ಲರೂ ಪ್ರವಾಹ ಪತಿತರೇ ಆಗಿಬಿಟ್ಟರೆ ಮುಂದೆ ಗತಿಯೇನು ?"

"ಅಷ್ಟು ನಿರಾಸೆಗೊಳ್ಳಬೇಕಾಗಿಲ್ಲವಲ್ಲ. ಕೆಲವರಾದರೂ ಗಟ್ಟಿಗರು ಇದ್ದೇ ಇರುತ್ತಾರೆ."

"ನಾವೇ ನೋಡುತ್ತಿದೇವಲ್ಲ ಸದಾನಂದಾ. ಪ್ರತಿಗಾಮಿ ವಿಚಾರಗಳ ವಿರುದ್ಧ ಬಂಡು ಹೂಡಬೇಕಾದವರು ಮುಖ್ಯವಾಗಿ ತರುಣರು, ವಿದ್ಯಾರ್ಥಿಗಳು. ನಮ್ಮ ಕಾಲೇಜಿನಲ್ಲಿ ಇಂಥ ಬಂಡುಗಾರರು ಎಷ್ಟು ಜನ ಸಿಕ್ಕಬಹುದು, ಹೇಳಿರಿ."

"ಎಲ್ಲರಿಗೂ ಒಂದಿಲ್ಲೊಂದು ತೊಂದರೆಯಿರುತ್ತದೆಂಬುದನ್ನು ಮರೆಯ ಬಾರದು. ಮುಖ್ಯ ಅಂದರೆ ಬಡತನ...."

"ಅದೇ ಮುಖ್ಯ ಅನ್ನುವದು ನಿಜ, ಅದನ್ನು ಹೋಗಲಾಡಿಸಲಿಕ್ಕೇ ನಾವು ಹೋರಾಡಬೇಕಲ್ಲವೆ ?"

"ನಿಜ. ಆದರೆ ಹಾಗೆ ಹೋರಾಡುವಾಗ ಹೊಟ್ಟೆಯ ವಿಚಾರವನ್ನೂ ನೋಡಿಕೊಳ್ಳಬೇಕಾಗುವದಲ್ಲ. ನಮ್ಮ ಕಾಲೇಜಿನ ವಿದ್ಯಾರ್ಥಿಗಳೆಲ್ಲಾ

ಹೋರಾಟಕ್ಕೆ ತಯಾರಾದರೆಂದಿಟ್ಟುಕೊಳ್ಳೋಣ. ಅಲ್ಲಿಗೆ ಅವರನ್ನು ಕಾಲೇಜಿನಿಂದ ಹೊರಗೆ ಹಾಕುತ್ತಾರೆ. ಡಿಗ್ರಿ ಇಲ್ಲದಿದ್ದರೆ ಕೆಲಸ ಸಿಕ್ಕುವಂತಿಲ್ಲ. ಅವರು, ಅವರ ಮನೆಯವರು ಜೀವನ ಮಾಡುವದು ಹ್ಯಾಗೆ? ಇದೆಲ್ಲ ವಿಚಾರ ಮಾಡಿಯೆ ವಿದ್ಯಾರ್ಥಿಗಳು ಯಾವ ರಾಜಕಾರಣವನ್ನೂ ತಲೆಗೆ ಹಾಕಿಕೊಳ್ಳದೆ ಸುಮ್ಮನಿರುವರು."

"ಇವರೆಲ್ಲಾ ಸುಮ್ಮನಿದ್ದರೆ ಕೆಲಸ ಮಾಡುವವರಾದರೂ ಯಾರು? ನಮ್ಮ ಜನರ ಸ್ಥಿತಿಯನ್ನು ಸುಧಾರಿಸುವವರು ಯಾರು? ಅನ್ಯಾಯ ಅಜ್ಞಾನ ಅಂಧಶ್ರದ್ಧೆಗಳನ್ನೆಲ್ಲಾ ನಾಶಮಾಡುವವರು ಯಾರು?"

"ನನ್ನ ಮುಂದಿರುವ ಪ್ರಶ್ನೆಯೂ ಅದೇ."

ನರಗುಂದ ಕಿರುನಗೆ ಸೂಸುತ್ತಾ ಹೇಳಿದ:

"ಹ್ಯಾಮ್ಲೆಟ್ ಆಡಿದಂತೆ ಆಡುತ್ತೀರಿ ನೀವು! ನೆಹರೂ ಸಹಾ ನಿಮ್ಮ ಹಾಗೇ ಆಡುತ್ತಾರೆ ಆಗಾಗ."

"ನೆಹರೂರವರಿಗೂ ನನಗೂ ಯಾಕೆ ಹೋಲಿಸುತ್ತೀರಿ ಬಿಡಿರಿ. ಹ್ಯಾಮ್ಲೆಟ್ ಅನ್ನಲು ಅಡ್ಡಿಯಿಲ್ಲ. ನಾನೊಬ್ಬನೇ ಯಾಕೆ, ಸಾಮಾನ್ಯವಾಗಿ ಇಂದಿನ ಕಾಲೇಜು ವಿದ್ಯಾರ್ಥಿಗಳೆಲ್ಲಾ ಹ್ಯಾಮ್ಲೆಟ್ಟರೇ ಅನ್ನಬಹುದು."

"ನಾನಂತೂ ಅಲ್ಲ," ಎಂದ ನರಗುಂದ.

"ಹಾಗಾದರೆ ನೀವು ಏನು?" ಸದಾನಂದ ಚೇಷ್ಟೆಗಾಗಿ ಕೇಳಿದ.

"ನೀವೇ ಹೇಳಿರಿ, ನೋಡೋಣ."

"ನೀವು ನರಗುಂದ!" ಎಂದು ನುಡಿದು ಸದಾನಂದ ನಗತೊಡಗಿದ. "ಒಂದೊಂದು ಸಾರಿ ನಿಮ್ಮ ಬಗ್ಗೆ ನನಗೆ ಬಹಳ ಚಿಂತೆಯಾಗುತ್ತದೆ."

"ಚಿಂತೆ?"

"ಉತ್ಸಾಹದ ಭರದಲ್ಲಿ ನೀವು ಯಾವಾಗ ಎಲ್ಲಿ ಯಾವದಾದರೂ ಅಪಾಯಕ್ಕೊಳಗಾಗುವಿರೋ ಅಂತ. ಇನ್ನು ಮೇಲಂತೂ ಬಹಳ ಹುಷಾರಾಗೇ ಇರಬೇಕಪ್ಪಾ ನೀವು. ಈ ಕರೀ ಟೊಪ್ಪಿಯ ಮಂದಿ ನಿಮ್ಮ ಮೇಲೆ ಕಣ್ಣಿಟ್ಟಿದ್ದಾರೆ."

"ಗಾಂಧೀಜಿಯಂಥಾ ಮಹಾಜೀವವೇ ಹೋಯಿತಂತೆ. ಇನ್ನು ನನ್ನಂಥ ಯಕಶ್ಚಿತ್ ಜೀವದ ಬೆಲೆ ಎಷ್ಟು ಸದಾನಂದಾ? ನನ್ನ ಪ್ರಾಣಕ್ಕಾಗಿ ನಾನೆಂದೂ ಚಿಂತೆ ಮಾಡಿಲ್ಲ. ಬದುಕಿರುವವರೆಗೆ ಮಾತ್ರ ಶಕ್ತಿಮೀರಿ ಹೋರಾಡಬೇಕು. ಅನ್ಯಾಯಗಳಿಗೂ ಪ್ರತಿಗಾಮಿಗಳಿಗೂ ತಲೆಬಾಗಬಾರದು." ಗಂಭೀರ ಸ್ವರದಲ್ಲಿ ಹೇಳಿದ ನರಗುಂದ.

## ೨೦

ಸದಾನಂದ ನರಗುಂದ ಇಬ್ಬರೂ ಜತೆಯಾಗಿಯೆ ಊರಿಗೆ ಹೊರಟಿದ್ದರು. ಅವರನ್ನು ಬೀಳ್ಕೊಡಲು ವೆಂಕಟೇಶ, ಶಾಂತಾ, ಲೀಲಾ, ಕುಮುದ ನಿಲ್ದಾಣದ ವರೆಗೂ ಬಂದಿದ್ದರು. ಶಿವಣ್ಣನಿಗೆ ರಜೆಯಿರಲಿಲ್ಲವಾದುದರಿಂದ ಆತ ಬಂದಿರಲಿಲ್ಲ. ಒಂದು ವಾರದ ತರುವಾಯ ಅವನು ಸದಾನಂದನ ಹಳ್ಳಿಗೆ ಬರುವುದೆಂದು ಗೊತ್ತಾಗಿತ್ತು.

" ರಜೆಯನ್ನು ಹ್ಯಾಗೆ ಕಳೆಯುತ್ತೀರಿ ?" ಎಂದು ಕೇಳಿದಳು ಲೀಲಾ.

" ನಾನು ಕಳೆಯಬೇಕಾಗಿಯೆ ಇಲ್ಲ. ಅದೇ ಕಳೆದುಹೋಗುತ್ತದೆ," ಎಂದು ನಗುತ್ತ ನುಡಿದಿದ್ದ ಸದಾನಂದ.

" ಅವರ ಸಂಗಡ ಮತ್ತೇನನ್ನೂ ಕಳೆದುಕೊಳ್ಳಬಾರದು ಮತ್ತೆ ಹಂ !" ಎಂದು ನುಡಿದಿದ್ದಳು ಲೀಲಾ.

" ಇಲ್ಲೇ ಕಳೆದುಕೊಂಡು ಹೊರಟಿದ್ದೇನೆ," ಎಂದು ಹೇಳಬೇಕೆಂದು ಅವನಿಗೆನ್ನಿಸಿದ್ದಿತಾದರೂ ವೆಂಕಟೇಶನೆದುರಿಗೆ ಆ ಮಾತನಾಡುವುದು ಅನುಚಿತ ವೆಂದು ಬಗೆದು ಆತ ಸುಮ್ಮನಾಗಿದ್ದ. ಶಾಂತಾ ಮತ್ತು ತನ್ನ ನಡುವೆ ಬೆಳೆದು ಬಂದಿದ್ದ ನಿಕಟಸಂಬಂಧವನ್ನು ವೆಂಕಟೇಶ ಅರಿತುಕೊಂಡಿರಲಿಕ್ಕಿಲ್ಲವೆಂದೇ ಸದಾನಂದನಿಗೆನ್ನಿಸುತ್ತಿತ್ತು. ಅವನು ಅರಿತುಕೊಳ್ಳಲೆಂಬ ಅಪೇಕ್ಷೆಯೂ ಸದಾನಂದನಿಗಿರಲಿಲ್ಲ. ಲೀಲಾ ಮತ್ತು ಕುಮುದರೊಡನೆ ಸಲಿಗೆಯಿಂದಿರುವ ಹಾಗೆ ತಾನು ಶಾಂತಳೊಡನೆಯೂ ಕೇವಲ ಸ್ನೇಹಭಾವದಿಂದ ವರ್ತಿಸುತ್ತಿರುವಂತೆ

ಅವನು ತಿಳಿದಿರಬಹುದು. ನಿಜವಾದ ಪರಿಸ್ಥಿತಿ ಅವನಿಗೆ ತಿಳಿದು ಬಂದಾಗ ಅವನು ತನ್ನನ್ನು ಯಾವ ದೃಷ್ಟಿಯಿಂದ ಕಾಣುವನೊ ಯಾರು ಬಲ್ಲರು. ವೆಂಕಟೇಶ ಪ್ರಗತಿಪ್ರಿಯ ಯುವಕನೇನೋ ನಿಜವೆ. ಅರ್ಥಹೀನ ಸಂಪ್ರದಾಯಗಳನ್ನೆಲ್ಲ ಆತ ತಿರಸ್ಕರಿಸುವುದೂ ನಿಜ. ತಾನು ವೀರಶೈವ, ಅವನು ಬ್ರಾಹ್ಮಣ ಎಂಬ ಭೇದಭಾವವೂ ವೆಂಕಟೇಶನಲ್ಲಿಲ್ಲ. ಆದರೂ....ಅವನೆಷ್ಟೇ ಪ್ರಗತಿಶೀಲನಾದರೂ ತನ್ನ ಸ್ವಂತ ತಂಗಿಯ ಪ್ರಶ್ನೆ ಬಂದಾಗ ಹಿಂದೇಟು ಹಾಕಲಿಕ್ಕಿಲ್ಲವೆಂದು ಹೇಗೆ ಹೇಳಬೇಕು ? ಒಬ್ಬ ವೀರಶೈವ ಯುವಕ, ಒಬ್ಬ ಬ್ರಾಹ್ಮಣ ಯುವತಿ ಸ್ನೇಹಿತರಂತೆ ನಡೆದುಕೊಳ್ಳುವುದಕ್ಕೂ, ಪ್ರಣಯಿಗಳಾಗಿ ಕೂಡಿಕೊಳ್ಳುವುದಕ್ಕೂ ಬಹಳ ಅಂತರವಿದೆಯಲ್ಲವೆ ?

ಹಾಗೆ ಯೋಚಿಸಿ ವೆಂಕಟೇಶನೆದುರಿಗೆ ತನ್ನ ಮನೋಗತವನ್ನು ಪ್ರದರ್ಶಿಸದೆ ಮೌನವಾಗಿದ್ದ ಸದಾನಂದ.

ಸಿಳ್ಳು ಹಾಕಿ ಗಾಡಿ ಚಲಿಸಿತ್ತು. ನಿಲ್ದಾಣದಲ್ಲಿ ನಿಂತು ಕೈಬೀಸುತ್ತಿದ್ದವರ ಆಕೃತಿಗಳು ಕ್ರಮೇಣ ಚಿಕ್ಕವಾಗುತ್ತ ಬಂದು, ಗಾಡಿ ತಿರುಗಿಕೊಂಡು ಮುನ್ನಡೆಯುತ್ತಲೂ ಅವೂ ಕಣ್ಮರೆಯಾಗಿದ್ದುವು.

"ಮತ್ತೆ ಬರುತ್ತೇವಲ್ಲ ಸದಾನಂದಾ. ಇಷ್ಟೇಕೆ ವ್ಯಸನ ?" ಎಂದು ನುಡಿದು ನಗಲಾರಂಭಿಸಿದ್ದ ನರಗುಂದ.

"ವ್ಯಸನವೆಲ್ಲಿ ಬಂತು ನರಗುಂದ ?"

"ಎಲ್ಲಿ ಅಂದರೆ ? ನಿಮ್ಮ ಮುಖದ ಮೇಲೆ. ಕನ್ನಡಿಯಿದ್ದಿದ್ದರೆ ನೋಡಿಕೊಳ್ಳಲು ಬರುತ್ತಿತ್ತು."

ಸದಾನಂದ ಮುಗುಳುನಗೆ ಬೀರಿ ಆ ವಿಷಯ ಬದಲಿಸಿ ಕವಿತೆಗಳ ಬಗೆಗೆ ಮಾತಿಗಾರಂಭಿಸಿದ್ದ. ಎಲಿಯಟ್, ಡೈಲಾನ್ ಥಾಮಸ್, ಡನ್, ಎಡಿತ್ ಸಿಟ್ವೆಲ್, ಆಡೆನ್, ಸ್ಪೆಂಡರರ ಕವಿತೆಗಳ ಅರ್ಥ ಭಾವ ತಂತ್ರಗಳನ್ನು ಕುರಿತು ಸ್ವಾರಸ್ಯವಾದ ಚರ್ಚೆ ಸಾಗಿತು. ಮೂರು ಗಂಟೆಗಳ ತರುವಾಯ ಒಂದು ಜಂಕ್ಶನ್ ಸ್ಥಳದಲ್ಲಿ ರೈಲು ನಿಂತಾಗ ಗೆಳೆಯರಿಬ್ಬರೂ ಚರ್ಚೆಯನ್ನು ನಿಲ್ಲಿಸಿ ಚಹ ಕುಡಿಯಲೆಂದು ಇಳಿದು ಬಂದರು. ರೈಲು ಅಲ್ಲಿ ಅರ್ಧ ಗಂಟೆಯವರೆಗೂ ನಿಲ್ಲುತ್ತಿತ್ತು.

ಅವರಂತೆಯೆ ಚಹ ಕುಡಿಯಲೆಂದು ಉಪಾಹಾರ ಗೃಹದತ್ತ ನಡೆದಿದ್ದ

ಕಾಲೇಜು ವಿದ್ಯಾರ್ಥಿ ವಿದ್ಯಾರ್ಥಿನಿಯರದೊಂದು ಗುಂಪು ಪ್ಲಾಟ್‌ಫಾರ್ಮಿನ ಮೇಲಿದ್ದ ಜನರನ್ನೆಲ್ಲ ಆಕರ್ಷಿಸಿಕೊಳ್ಳುತ್ತಿತ್ತು. ಚಹ ಕುಡಿಯುತ್ತ ನಿಂತು ಕೊಂಡಿದ್ದವರೂ ಕೂಡ ಆ ವಿದ್ಯಾರ್ಥಿಗಳನ್ನೆ ನೋಡುತ್ತಿದ್ದರು. ಸದಾನಂದ ನರಗುಂದರ ಕಣ್ಣುಗಳೂ ಸಹಜವಾಗಿಯೆ ಆ ಗುಂಪಿನತ್ತ ತಿರುಗಿದುವು. ಆರು ಜನರ ಆ ಗುಂಪಿನಲ್ಲಿ ಇಪ್ಪತ್ತರಿಂದ ಇಪ್ಪತ್ತೈದರವರೆಗಿನ ನಾಲ್ವರು ಯುವತಿ ಯರೂ ಇಪ್ಪತ್ತೈದರ ಒಳಗಿನ ಇಬ್ಬರು ಯುವಕರೂ ಇದ್ದರು. ಒಬ್ಬಾತ ಹಸಿರು ಬಣ್ಣದ ಉಣ್ಣೆಯ ಕೋಟು, ಕಪ್ಪು ಬಣ್ಣದ ಪ್ಯಾಂಟ್ ಧರಿಸಿ ಟೈ ಕಟ್ಟಿಕೊಂಡಿದ್ದ. ಗದ್ದದ ಕೆಳಗಡೆ ಕೇವಲ ಮೋಜಿಗೆಂದೇ ಬೆಳಸಿದ್ದ ಪುಟ್ಟ ಗಡ್ಡ. ಇನ್ನೊಬ್ಬಾತ ಪ್ರವಾಸದ ಸೂಟು ಧರಿಸಿದ್ದ. ನಾಲ್ವರು ಯುವತಿಯರಲ್ಲೊಬ್ಬಾಕೆ ತೆಳ್ಳನೆಯ ಕರೀ ಸೀರೆಯುಟ್ಟುಕೊಂಡಿದ್ದಳು. ಅದರೊಳಗಿದ್ದ ಬಿಳಿಯ ಬಣ್ಣದ ಒಳಲಂಗ ಸ್ಪಷ್ಟವಾಗಿ ಕಾಣುತ್ತಿತ್ತು. ಅವಳ ಸೀರೆಯ ಸೆರಗು ಬೆನ್ನ ಹಿಂದೆ ನೇತಾಡು ತ್ತಿದ್ದುದರಿಂದ ಗುಲಾಬಿ ಬಣ್ಣದ ರವಿಕೆಯೊಳಗಿನಿಂದ ದುಂಡಗಿನ ಎದೆಕಟ್ಟು ಎದ್ದುಕಾಣುತ್ತಿತ್ತು....ಅದನ್ನು ಕುಣಿಸುವ ಹಾಗೆ ಆಗಾಗ ಮೈ ಹೊರಳಿಸಿ ಅತ್ತಿತ್ತ ತಿರುಗಿ ಸ್ವಚ್ಛಂದವಾಗಿ ನಗುತ್ತಿದ್ದಳಾಕೆ. ಎರಡನೆಯವಳು ಬಿಳಿಯ ರೇಶಿಮೆಯ ಸೀರೆಯುಟ್ಟು ಬಿಳಿಯ ರವಿಕೆ ಧರಿಸಿದ್ದಳು. ಮೂರನೆಯವಳು ಬಣ್ಣಬಣ್ಣಗಳ ವಾಯಿಲ್ ಸೀರೆಯುಟ್ಟು ಕಂಬುಸದಂಥ ರವಿಕೆ ತೊಟ್ಟಿದ್ದಳು. ಮನೆಯಲ್ಲಿ ಸ್ವೇಚ್ಛೆಯಿಂದ ವರ್ತಿಸುವ ಹಾಗೆ ಅವರೆಲ್ಲ ನಿಲ್ದಾಣದ ಮೇಲೂ ವರ್ತಿಸುತ್ತಿದ್ದರು. ಕರೀ ಸೀರೆಯ ಹುಡುಗಿ, ಹಸಿರು ಕೋಟಿನವನ ಗಡ್ಡವನ್ನು ಆಗಾಗ ಹಿಡಿದು ಬಿದ್ದು ಬಿದ್ದು ನಗುತ್ತಿದ್ದಳು. ಆತನೂ ತುಂಟತನದಿಂದ ನಗುತ್ತಾ ಅವಳ ಎದೆಯ ಮೇಲೆ ಏಟು ಹಾಕುತ್ತಿದ್ದನಲ್ಲದೆ–ಎಲ್ಲಾ ಹುಡುಗಿಯರ ಬೆನ್ನುತಟ್ಟಿ ಅವರು ನಗುವಂತೆ ಮಾಡುತ್ತಿದ್ದ....ಪ್ಲಾಟ್‌ಫಾರ್ಮಿನ ಮೇಲೆ ನೆರೆದಿದ್ದ ಜನರಿಗೆಲ್ಲ ಇದೊಂದು ಸಿನಿಮಾ ದೃಶ್ಯದ ಹಾಗೆ ಕಾಣುತ್ತಿತ್ತು.

"ಇವರೂ ನಮ್ಮ ಕಾಲೇಜಿನವರಲ್ಲವೇ ಸದಾನಂದ?" ಎಂದ ನರಗುಂದ.

"ಹೌದು. ಆ ಗಡ್ಡದ ಹುಡುಗ ಎಂ.ಎ. ಯಲ್ಲಿದ್ದಾನೆ. ಇನ್ನೊಬ್ಬ ಎಂ. ಎಸ್. ಸಿ."

"ಆ ಕರೀ ಸೀರೆಯವಳು ನಿಮ್ಮ ಕ್ಲಾಸ್‌ಮೇಟ್ ಅಲ್ಲವೆ?"

"ಹೌದು."

"ಎಂಥ ದಿಟ್ಟೆಯಿದಾಳಪ್ಪ ಅವಳು ! ಎಷ್ಟು ಸ್ವಚ್ಛಂದ ವೃತ್ತಿ....ಇವರಿಗೆ ಸಂಕೋಚ ಲಜ್ಜೆ ಸ್ವಲ್ಪ ಕೂಡಾ ಇಲ್ಲವಲ್ಲ ಸದಾನಂದಾ ? ಸ್ವಲ್ಪವೂ ಜವಾಬ್ದಾರಿ ಬೇಡವೇನು ? ತಮ್ಮನ್ನು ಬಿಟ್ಟರೆ ಬೇರೆ ಜಗತ್ತೇ ಇಲ್ಲವೆಂಬಂತೆ ಇವರು ವರ್ತಿಸುತ್ತಿದಾರಲ್ಲಾ...."

"ಕೆಲವರು ಹೀಗೂ ಇರುತ್ತಾರೆ ನರಗುಂದ."

"ನಮ್ಮ ದೇಶದ ಭವಿತವ್ಯವೇನು ಅಂತ ಯೋಚನೆ ನನಗೆ. ಹಿಂದುಸ್ಥಾನವನ್ನು ಕಟ್ಟುವ ಜನ ಇವರು....ಛೆ. ಛೆ !"

ಕರೀ ಸೀರೆಯವಳು ಸದಾನಂದನನ್ನು ಕಂಡು, ನರ್ತಕಿಯಂತೆ ನಡೆಯುತ್ತ ಬಂದು, "ಹಲೋ ಡೈಲಾನ್ ಥಾಮಸ್, ಎಲ್ಲಿಗೆ ಪ್ರಯಾಣ ?" ಎಂದಳು. ಅವಳ ಜತೆಯವರೂ ಬಂದು ಸೇರಿದರು.

"This is the poet," ಎಂದು ಅವಳು ಸದಾನಂದನ ಪರಿಚಯ ಮಾಡಿಕೊಟ್ಟಳು. ನರಗುಂದನನ್ನು ಯಾರೂ ಮಾತನಾಡಿಸಲಿಲ್ಲ. ತನ್ನ ಜತೆಯವರ ಹೆಸರುಗಳನ್ನೂ ಅವಳು ತಿಳಿಸಲಿಲ್ಲ. ನರಗುಂದನಿಗೆ ಬಲು ಬೇಸರವಾಯಿತು. ಅವರ ಹತ್ತಿರ ನಿಂತುಕೊಳ್ಳುವುದಕ್ಕೂ ಅವನಿಗೆ ಸಂಕೋಚವಾಗತೊಡಗಿತು.

"ಸದಾನಂದಾ, ಚಹ...." ಎಂದು ಆತ ದನಿಯೆತ್ತಿದ. ಒಡನೆಯೆ, ಹುಡುಗಿಯರೆಲ್ಲ "ಚಹ, ಚಹ," ಎಂದು ಕೂಗುತ್ತಾ ಉಪಾಹಾರ ಗೃಹದತ್ತ ನುಗ್ಗಿದರು.

ಎಲ್ಲರೂ ಕೂಡಿ ತಿಂಡಿ ತಿಂದು ಚಹ ಕುಡಿದುದಾಯಿತು. ಗಡ್ಡದ ಯುವಕ ಹಣ ತೆತ್ತ.

ರೈಲು ಹೊರಡಲು ಇನ್ನೂ ಹತ್ತು ನಿಮಿಷಗಳ ಅವಧಿಯಿತ್ತು. ಇಂಟರ್ ವರ್ಗದ ಡಬ್ಬಿಯ ಬಳಿ ನಿಂತು ಅವರು ಮತ್ತೆ ಹರಟೆತೊಡಗಿದರು.

"ಹಳ್ಳಿಗೆ ಹೋಗಿ ಏನು ಮಾಡುತ್ತೀರಿ ಕವಿಗಳೇ ?" ಗಡ್ಡದ ಯುವಕ ಕೇಳಿದ.

"ಮತ್ತೇನು ಮಾಡುವದು ? ಅಭ್ಯಾಸ ಮಾಡುವದಷ್ಟೆ."

"ಎಂಥ ಅಭ್ಯಾಸ ? ಕಾವ್ಯಾಭ್ಯಾಸವೋ ?" ಎಂದು ಕರೀ ಸೀರೆಯವಳು ಕೇಳಿದಳು. ಎಲ್ಲರೂ ಖೊಳ್ಳನೆ ನಕ್ಕರು – ಸದಾನಂದನಿಗೂ ನಗೆ ಬರದಿರಲಿಲ್ಲ.

ಯಾವುದೇ ತರದ ಕಿಲ್ಮಿಷವನ್ನೂ ಇಟ್ಟುಕೊಳ್ಳದೆ ಅವರು ಶುದ್ಧ ಮನಸ್ಸಿನಿಂದ ನಗುತ್ತಿದ್ದಾಗ ಅವನು ನೊಂದುಕೊಳ್ಳಬೇಕಾದ ಅಗತ್ಯವಿರಲಿಲ್ಲ.

"ಪರೀಕ್ಷೆ ಹದಿನೈದು ದಿನ ಇರುವಾಗಲಷ್ಟೇ ನಾನು ಕೈಗೆ ಪುಸ್ತಕ ತೆಗೆದು ಕೊಳ್ಳುವದು. ನಿಮ್ಮ ಹಾಗೆ ರಜೆಯಲ್ಲೂ ಅಭ್ಯಾಸ ಮಾಡುತ್ತ ಹೋದರೆ ಮೆಂಟಲ್ ಹಾಸ್ಪಿಟಲ್‌ಗೆ ಹೋಗುವದೇ ಸರಿ!" ಎಂದ ಗಡ್ಡದ ಯುವಕ.

ಅಂಗೈಯಿಂದ ಅವನ ಗಡ್ಡವನ್ನು ಬಡಿದು ನಕ್ಕಳು ಕರೀ ಸೀರೆಯವಳು.

"ನಮ್ಮ ಸಂಗಡ ಗೋವಾಕ್ಕೆ ಯಾಕೆ ಬರಬಾರದು ನೀವು?" ಬಿಳಿಯ ಸೀರೆಯವಳು ಕೇಳಿದಳು.

"ಅಲ್ಲಿ ನಿಸರ್ಗ ಬಹಳ ಸುಂದರವಾಗಿದೆ. ನೀವು ಒಂದು ಬುಟ್ಟಿ ತುಂಬುವಷ್ಟು ಕವಿತೆಗಳನ್ನು ಬರೆಯಬಹುದು!" ಎಂದ ಗಡ್ಡದ ಯುವಕ.

ಮತ್ತೆ ಖೊ ಖೊ ಖ್ಖೊ....

"ಕವಿಗಳಿಗೆ ಸ್ಫೂರ್ತಿ ಬರಲು ಬೇಕಾದ ಸಾಮಗ್ರಿಗಳೂ ಅಲ್ಲಿ ಬೇಕಾದಷ್ಟು ಸಿಗುತ್ತವೆ!" ಎಂದಳು ಕರೀ ಸೀರೆಯವಳು.

ಮತ್ತೆ ಖಿ ಖಿ ಖ್ಖಿ....

"ಬಿಳೀ ಟೊಪ್ಪಿಯ ಮಡಿ ಮಂತ್ರಿಗಳು ಅಲ್ಲಿಲ್ಲವಲ್ಲಾ!" ಎಂದಳು ಬಿಳೀ ಸೀರೆಯವಳು.

"ಕವಿಗಳ ಪ್ಯಾರಡೈಸ್ ಅಂದರೆ ಗೋವಾ!" ಎಂದಳು ವಾಯಿಲ್ ಸೀರೆಯವಳು.

"ಬರ್‍ರಿ. ಹೋಗೋಣ," ಎಂದಳು ಕರೀ ಸೀರೆಯವಳು.

"ನೀವು ಹಾಡುವಾಗ ನಾನು ಫಿಡಲ್ ನುಡಿಸುತ್ತೇನೆ," ಎಂದಳು ಬಿಳೀ ಸೀರೆಯವಳು.

"ನಾನು ತಬಲ ಬಾರಿಸುತ್ತೇನೆ – ತಬಲಾ ಅಂದರೆ ಇದು!" ಎನ್ನುತ್ತಾ ಗಡ್ಡದ ಯುವಕ ಕರೀ ಸೀರೆಯವಳ ಬೆನ್ನು ಬಾರಿಸಿದ.

ಎಲ್ಲರೂ ಸದಾನಂದನನ್ನೆಳೆಯತೊಡಗಿದರು. ಅವರಿಂದ ತಪ್ಪಿಸಿಕೊಂಡು ತನ್ನ ಡಬ್ಬಿಯ ಕಡೆ ಹೊರಡಬೇಕಾದರೆ ಸಾಕುಸಾಕಾಗಿ ಹೋಯಿತು ಸದಾನಂದನಿಗೆ.

ಅರ್ಧ ಗಂಟೆ ವಿರಮಿಸಿಕೊಂಡು ನೀರು ಕುಡಿದು ಉತ್ಸಾಹಗೊಂಡಿದ್ದ

ರೈಲು ಓಡತೊಡಗಿತು. ಹಿಂದೆ ಬೀಳುತ್ತಿದ್ದ ಹಳದಿಬಣ್ಣದ ಬತ್ತದ ಪಯಿರನ್ನು ದಿಟ್ಟಿಸುತ್ತ ಸದಾನಂದನೆಂದ :

"ಅವರದೂ ಒಂದು ಜೀವನ ನರಗುಂದ. ಅವರ ಸ್ವಚ್ಛಂದದಲ್ಲೂ ಒಂದು ಮಜಾ ಇದೆ, ಒಂದು ಕಾವ್ಯ ಇದೆ. ಅಲ್ಲವೇನು ?"

"ಸರಿ. ನಿಮ್ಮ ದೃಷ್ಟಿ ನನಗಿಲ್ಲ. ನನಗೇನೊ ಅದಾವದೂ ಸರಿಬರಲಿಲ್ಲ."

"ನೀವು ಯಾವಾಗಲೂ ಕ್ರಾಂತಿಯ ಗುಂಗಿನಲ್ಲೇ ಇರುತ್ತೀರಿ. ಕ್ರಾಂತಿಗಾಗಿ ಕೆಲಸ ಮಾಡದವರೆಲ್ಲಾ ನಿಮ್ಮ ದೃಷ್ಟಿಯಲ್ಲಿ ನಿರುಪಯೋಗಿ ಜನ, ಅಲ್ಲವೇನು ?"

"ನಿರುಪಯೋಗಿಗಳೆಂದೇನೂ ಅಲ್ಲ – ಬೇಜವಾಬ್ದಾರಿಗಳು ಅಷ್ಟೆ."

ಆ ವಿಷಯ ಅಲ್ಲಿಗೇ ಮುಕ್ತಾಯವಾಯಿತು.

"ಇನ್ನೆರಡು ಸ್ಟೇಶನ್ ದಾಟಿದರೆ ನಮ್ಮ ಊರು ಬರುತ್ತದೆ," ಎಂದ ನರಗುಂದ. ಸದಾನಂದ ಇಳಿಯಬೇಕಾಗಿದ್ದ ನಿಲ್ದಾಣ ಇನ್ನೂ ಬಹಳ ದೂರದಲ್ಲಿತ್ತು.

"ಸ್ಟೇಶನ್ನಿನಿಂದ ಎಷ್ಟು ದೂರ ನಿಮ್ಮ ಊರು ?"

"ಆರು ಫರ್ಲಾಂಗ್ ಇರಬಹುದು. ಮಲೆನಾಡಿನ ಹಳ್ಳಿ. ಬಹಳ ಸಣ್ಣದು. ಅಲ್ಲಿರುವ ಮನೆಗಳೆಂದರೆ ಆರೇ ಆರು. ಊರು ಬಹಳ ಚಂದವಿದೆ. ನೀವೊಮ್ಮೆ ಬಂದು ನಾಲ್ಕು ದಿನ ಇದ್ದು ಹೋಗಬೇಕು," ಎಂದ ನರಗುಂದ.

"ಅವಶ್ಯ ಬರುತ್ತೇನೆ," ಎಂದ ಸದಾನಂದ.

"ಯಾವಾಗ ಬರುತ್ತೀರಿ ? ಈ ಸೂಟಿಯಲ್ಲೇ ಬಂದು ಬಿಡಿರಲ್ಲ ?"

"ಮುಂದಿನ ವಾರ ಶಿವಣ್ಣ ಬರುವವನಿದ್ದಾನೆ ನಮ್ಮಲ್ಲಿಗೆ. ಇಬ್ಬರೂ ಕೂಡಿ ಬೆಳಗಾವಿಗೆ ಹೋಗುವದಿದೆ. ಸಾಧ್ಯವಾದರೆ ಅವನೂ ನಾನೂ ಇಬ್ಬರೂ ಬರುತ್ತೇವೆ."

"ಬಹಳ ಉತ್ತಮ. ನಮ್ಮ ಹಳ್ಳಿಯನ್ನು ಕಂಡು ನೀವು ಖಂಡಿತ ಮೆಚ್ಚುತ್ತೀರಿ. ಜನರ ಗದ್ದಲವಿಲ್ಲ. ನನ್ನದೊಂದು ಪ್ರತ್ಯೇಕ ರೂಂ ಇದೆ. ಕಿಟಕಿಯಿಂದ ನೋಡಿದರೆ ಬೆಟ್ಟಗಳ ಮಾಲೆ ಮಾಲೆ ಕಾಣುತ್ತವೆ. ಹಾಡುವ ಹಕ್ಕಿಗಳಿಗೂ ಬಣ್ಣ ಬಣ್ಣಗಳ ಹೂಗಳಿಗೂ ಕೊರತೆಯಿಲ್ಲ. ನಾಲ್ಕು ಹೆಜ್ಜೆ ನಡೆದರೆ ಗುಡ್ಡ. ಮೇಲೆ ಹೋಗಿ ಕೂತುಕೊಂಡರೆ ಕವಿತೆ ತಾನಾಗೇ ಸ್ಫುರಿಸೀತು."

" ನೀವೂ ಈಗ ಕವಿಗಳ ಹಾಗೇ ಮಾತಾಡ ಹತ್ತಿದಿರಿ!" ಎಂದು ನುಡಿದು ಸದಾನಂದ ಮುಗುಳುನಗೆ ಬೀರಿದ.

" ಈ ರಾಜಕಾರಣ ನನ್ನನ್ನು ಸೆಳೆಯದಿದ್ದರೆ ನಾನೂ ಪಕ್ಕಾ ಕವಿಯಾಗುತ್ತಿದ್ದೆನೇನೊ."

ನರಗುಂದನಿಳಿಯಲಿದ್ದ ಸಿಲ್ದಾಣ ಹತ್ತಿರ ಬಂದೊಡನೆ ಬಲಗಡೆ ಗುಡ್ಡದ ಅಡಿಯಲ್ಲಿ ಅರ್ಧಕ್ಕರ್ಧ ಅವಿತುಕೊಂಡಿದ್ದ ತಮ್ಮ ಹಳ್ಳಿಯನ್ನು ತೋರಿಸುತ್ತಾ ಆತನೆಂದ:

" ಸ್ಟೇಶನ್ನಿನಿಂದ ನೆಟ್ಟಗೆ ಕಾಲುಹಾದಿಯಿದೆ ಸದಾನಂದಾ. ನನಗೆ ತಿಳಿಸದೆ ಹಾಗೇ ನೀವು ಬಂದರೂ ತೊಂದರೆಯಿಲ್ಲದೆ ನಮ್ಮ ಹಳ್ಳಿಗೆ ಬರಬಹುದು. ಪತ್ರ ಬರೆದರಂತೂ ಒಳ್ಳೆಯದೇ. ಬರೆಯದೆ ಹಾಗೇ ಸ್ಫೂರ್ತಿ ಬಂದಾಗ ಬಂದರೂ ಚಿಂತೆಯಿಲ್ಲ. ರಾತ್ರಿಯಲ್ಲೂ ಕೂಡಾ ಬರಬಲ್ಲಿರಿ."

ಆತ ಇಳಿದುಹೋದ. ರೈಲು ಮತ್ತೆ ಮುಂದೆ ಸಾಗಿತು. ಸದಾನಂದ ಏಕಾಕಿಯಾಗುತ್ತಲೂ ಆದುವರೆಗೆ ಚಿತ್ತದಿಂದ ಮರೆಯಾಗಿದ್ದ ಅವನ ಪ್ರಿಯ ಮೂರ್ತಿ ಮತ್ತೆ ಕಾಣಿಸಿಕೊಳ್ಳತೊಡಗಿತು. ಅವಳೊಡನೆ ಕೂಡಿ ಕಳೆದ ಸನ್ನಿವೇಶಗಳು ಒಂದರ ಹಿಂದೊಂದರಂತೆ ನೆನಪಿನ ಪರದೆಯ ಮೇಲೆ ಮೂಡತೊಡಗಿದುವು. ಸಹಿಸಲಸದಳವಾದ ವೇದನೆ ಅವನ ಎದೆಯನ್ನು ಕೊರೆಯತೊಡಗಿತು. ಅದನ್ನು ಮರೆಯಲೆಂದು ಇಂಗ್ಲಿಷ್ ಕಾದಂಬರಿಯೊಂದನ್ನು ಕೈಗೆತ್ತಿಕೊಂಡ. ಒಂದು ಸಾಲೂ ಅರ್ಥವಾಗಲಿಲ್ಲ. ಹಾಗೆಯೆ ಸುಮ್ಮನೆ ಓದುತ್ತಲಿದ್ದ. ಮನಸ್ಸು ಮಾತ್ರ ಶಾಂತಳನ್ನು ಕುರಿತೇ ಕನಸು ಕಾಣುತ್ತಿತ್ತು.

" ಅವಳನ್ನು ಮರೆಯುವದು ಅಷ್ಟು ಸುಲಭವಲ್ಲ," ಎಂದು ತನ್ನಷ್ಟಕ್ಕೆ ತಾನೆ ಹೇಳಿಕೊಳ್ಳುತ್ತ ಆತ ಪುಸ್ತಕವನ್ನು ಚೀಲದಲ್ಲಿ ಸೇರಿಸಿ ಕಿಟಕಿಯಲ್ಲಿ ಮುಖವಿಟ್ಟು ಕುಳಿತುಕೊಂಡ. ಬಿಸಿಲಿನ ಕಾವು ಆರಿ ಸಂಜೆಯ ತಣ್ಣ ಹವೆಯಲ್ಲಿ ಬೆರೆತುಕೊಳ್ಳತೊಡಗಿತ್ತು. ಕಿತ್ತಿಳೆ ವರ್ಣದ ಸೂರ್ಯಕಿರಣಗಳಲ್ಲಿ ಬತ್ತದ ಹಳದಿ ಬಂಗಾರವಾಗಿ ಮಿರುಗುತಿತ್ತು. ಬತ್ತದ ಗದ್ದೆಗಳನ್ನು ದಿಟ್ಟಿಸಿದ ಹಾಗೆ ಸದಾನಂದನ ಬಗೆಗಣ್ಣಿನೆದುರಿಗೆ ಶಾಂತಳೊಡನೆ ಅಂಥ ಗದ್ದೆಗಳ ಬದುವಿನ ಮೇಲೆ ತಾನು ಕುಳಿತು ಕಳೆದ ಸನ್ನಿವೇಶಗಳು ಕಾಣಿಸಿಕೊಳ್ಳತೊಡಗಿದುವು. ಆದರ ಹಿಂದೆಯೆ, ಕೆಲವು ಗಂಟೆಗಳಿಗೆ ಮೊದಲು ಆ ಜಂಕ್ಶನ್ನಿನಲ್ಲಿ

ಕಂಡ ಕರೀಸೀರೆಯ ಯುವತಿಯ ಆಕೃತಿಯೂ ಹಠಾತ್ತಾಗಿ ಕಾಣಿಸಿಕೊಂಡಿತು. ಅವಳು ತನ್ನನ್ನು ಗೋವಾಕ್ಕೆ ಆಹ್ವಾನಿಸಿದ್ದುದು, ತಾನು ಹಾಡುವಾಗ ಅವಳು ಕುಣಿಯುವುದಾಗಿ ಹೇಳಿದ್ದುದು ಎಲ್ಲವೂ ಮತ್ತೆ ನೆನಪಾಯಿತು. ಎಷ್ಟು ವಿಚಿತ್ರ! ಎನ್ನಿಸದಿರಲಿಲ್ಲ ಸದಾನಂದನಿಗೆ. ಆ ಕಾಲೇಜು ವಿದ್ಯಾರ್ಥಿಗಳ ಭೇಟಿ ಯಿಂದ ಅವನ ಮನಸ್ಸಿನ ಮೇಲೆ ವಿಲಕ್ಷಣವಾದ ಪರಿಣಾಮವುಂಟಾಗಿದ್ದುದು ಸ್ಪಷ್ಟವಾಗಿದ್ದಿತು. ಅವರ ಹಾಗೆ ತಾನೂ ಪ್ರಪಂಚದ ಎಲ್ಲ ಚಿಂತೆಗಳನ್ನು ಕಡೆಗಣಿಸಿ ಸ್ವಚ್ಛಂದವಾಗಿ ವರ್ತಿಸುವಂತಾದರೆ ಎಷ್ಟು ಚೆನ್ನ! ಎಂದೂ ಅವನಿ ಗೆನ್ನಿಸಿತು. ಆ ಗುಂಪಿನಲ್ಲಿ ತಾನೂ – ಶಾಂತಳೊಡನೆ – ಸೇರಿ ವಿಹಾರಯಾತ್ರೆ ಮಾಡುವಂತಾಗಿದ್ದರೆ! ಜನರು ಗದ್ದಲದಿಂದ ದೂರವಿರುವ ನರಗುಂದನ ಹಳ್ಳಿಗೆ ಹೋಗಿ ನಾಲ್ಕಾರು ದಿನ ಅಲ್ಲಿ ಸುಖವಾಗಿ ಕಾಲ ಕಳೆಯುವಂತಾಗಿದ್ದರೆ!

"ರೇ ರಾಜ್ಯ!" ಎಂದು ತನ್ನಷ್ಟಕ್ಕೇ ಹೇಳಿಕೊಂಡು ಮೃದುವಾಗಿ ನಕ್ಕ ಸದಾನಂದ. ಲೀಲಾ ಒಂದು ಬಾರಿ ಆ ಮಾತು ಆಡಿ ತನ್ನನ್ನು ಖಂಡಿಸಿದುದು ನೆನಪಾಗಿ ಮತ್ತೆ ಅವನಿಗೆ ನಗೆ ಬಂದಿತು. ಎಷ್ಟು ಒಳ್ಳೆಯ ಯುವತಿ ಲೀಲಾ.... ಅವಳ ಚಾರಿತ್ರ್ಯವೆಷ್ಟು ನಿರ್ಮಲವಾದುದು....ಪರಿಚಯವಾದಂದಿನಿಂದಲೂ ತನ್ನನ್ನು ಕೇವಲ ಆತ್ಮೀಯತೆಯಿಂದ ಕಾಣುತ್ತ ಬಂದಿದ್ದಾಳೆ. ಅವಳು ಬೇರೆಯವಳೆಂದು ಅನ್ನಿಸುವುದೇ ಇಲ್ಲ, ತನ್ನ ಸ್ವಂತ ಸೋದರಿಯಾಗಿರ ಬೇಕೆಂದೇ ಅನ್ನಿಸುತ್ತದೆ. ಕಪಟವನ್ನರಿಯದ ಸರಳ ಮನಸ್ಸು, ಸ್ವಲ್ಪ ಬಿರುಸು ಅನ್ನಿಸಬಹುದಾದರೂ ಸ್ಪಷ್ಟವಾದ ಖಂಡಿತವಾದ ಮಾತು, ಯಾವಾಗಲೂ ಸುಖವಾಗಿ ನಗುನಗುತ್ತಾ ಇರುವ ಉಲ್ಲಸದ ವೃತ್ತಿ....ಲೀಲಾ....ಜೀವನ ವೊಂದು ಲೀಲೆಯೆ ಆದ ಹಾಗಿದೆ ಅವಳಿಗೆ. ಶಾಂತಾ ಸ್ವಲ್ಪ ಭಿನ್ನ ಪ್ರಕೃತಿ ಯವಳು. ಲೀಲಳಿಗಿಂತ ಹೆಚ್ಚು ಆಳ, ಹೆಚ್ಚು ಗಾಂಭೀರ್ಯ. ಆಗಾಗ ಬದ ಲಾಗುವ ಅವಳ ಮನಃಸ್ಥಿತಿಗಳೂ ತುಂಬ ಮೋಜಿನವು. ಬಡತನ ಕಷ್ಟ ಸಂಕಟ ಗಳನ್ನೇ ಅರಿಯದ ಲೀಲಾ ಆನಂದದ ಮೂರ್ತಿಯಾಗಿ ಬೆಳೆದಿರುವುದು ಸಹಜ. ಶಾಂತಳಾದರೊ ಬಹಳ ಕಷ್ಟಪಟ್ಟ ಜೀವ. ಮತ್ತೆರಡು ಸೀರೆಗಳೂ ಇಲ್ಲ ಅವಳಿಗೆ. ಒಂದಾದರೂ ಸೀರೆಯನ್ನು ಕಾಣಿಕೆಯಾಗಿ ಕೊಡಬೇಕೆಂದು ತಾನು ಯೋಚಿಸಿ ಕೊಂಡುದಾಗಿತ್ತು. ಆದರೆ....ತಾನೂ ಸದ್ಯ ಸುದಾಮನ ಅವತಾರ....

"ನನಗೆ ಎರಡು ಅಂಗಿ....ಅವಳಿಗೆರಡು ಸೀರೆ!" ಎಂದು ತನ್ನಲ್ಲಿಯೆ

ಹೇಳಿಕೊಂಡು ಮತ್ತೆ ನಕ್ಕ ಸದಾನಂದ. ಗೋವಾಕ್ಕೆ ಹೊರಟಿದ್ದ ವಿದ್ಯಾರ್ಥಿಗಳೆಲ್ಲ ಉಳ್ಳವರ ಮನೆತನಗಳಿಗೆ ಸೇರಿದವರು. ತನ್ನಂಥ ಶಾಂತಳಂಥ ಆರ್ಥಿಕ ದುಸ್ಥಿತಿ ಅವರಿಗಿಲ್ಲವೆಂತಲೇ ಅವರು ಚಕ್ಕಂದದಿಂದ ವರ್ತಿಸಲು ಸಾಧ್ಯವಾಗಿದೆ. ತನ್ನಂಥವನು ಅವರಂತೆ ಮೋಜುಮಾಡಲು ಬಯಸುವದೆಂದರೆ ವ್ಯರ್ಥವಾಗಿ ಹಗಲುಗನಸು ಕಂಡಂತೆಯೆ ಸರಿ. ತಾನಿನ್ನೂ ಬಿ.ಎ. ಮುಗಿಸಬೇಕು. ಎಂ.ಎ. ಮುಗಿಸಬೇಕು. ಅನಂತರ ಯಾವುದೊಂದು ಒಳ್ಳೆಯ ಕೆಲಸ ದೊರಕಿಸಬೇಕು. ಇಷ್ಟೆಲ್ಲ ಆದಬಳಿಕ ಮೋಜು ಮಾಡುವ ಮಾತು. ಅದುವರೆಗೂ....ಮನಸ್ಸು ಚಂಚಲವಾಗದಂತೆ ನೋಡಿಕೊಂಡು ಅಭ್ಯಾಸ ಮಾಡುತ್ತಿರಬೇಕು. ಸದ್ಯ ಅದೊಂದೇ ತನ್ನ ಕರ್ತವ್ಯ.

ಹಾಗೆ ಯೋಚಿಸಿ ಸದಾನಂದ ತನ್ನ ವಿಚಾರವನ್ನು ಬೇರೆ ದಿಸೆಗೆ ತಿರುಗಿಸಲು ಯತ್ನಿಸತೊಡಗಿದ. ಇನ್ನೊಂದು ತಿಂಗಳಲ್ಲಿ ತನ್ನ ಪ್ರಥಮ ಕವನ ಸಂಕಲನ ಪ್ರಕಟವಾಗುತ್ತದೆ. ಮುಂದೆ ವರ್ಷಕ್ಕೊಂದಾದರೂ ಸಂಕಲನ ಪ್ರಕಟವಾಗಲು ಸಾಧ್ಯವಾಗಬಹುದು. ಕನ್ನಡ ಕಾವ್ಯರಂಗದಲ್ಲೂ ತಾನು ಪರಿಶ್ರಮಪಟ್ಟು ದುಡಿಯಬೇಕಾಗಿದೆ. ತನ್ನದೂ ಒಂದು ಭವಿತವ್ಯ ನಿರ್ಮಿಸಕೊಳ್ಳಬೇಕಾಗಿದೆ. ಇನ್ನೊಬ್ಬ ಬೇಂದ್ರೆಯಾಗಬೇಕು, ಇನ್ನೊಬ್ಬ ಕುವೆಂಪು ಆಗಬೇಕು, ಇನ್ನೊಬ್ಬ ಷೆಲ್ಲಿಯಾಗಬೇಕು....

"ಛೆ. ಛೆ. ಛೆ. ಮತ್ತೆ ಕನಸುಗಳಿಗಾರಂಭವಾಯ್ತು?" ಎಂದುಕೊಂಡು ಸದಾನಂದ ತನ್ನಷ್ಟಕ್ಕೆ ತಾನೇ ನಕ್ಕು ಮತ್ತೆ ಕಿಟಕಿಯಾಚೆಗೆ ದೃಷ್ಟಿ ತೂರಿದ. ಆಗತಾನೆ ಸೂರ್ಯ ಅಸ್ತಮಿಸಿದ್ದುದರಿಂದ ದೂರದ ಗುಡ್ಡಗಳೆಲ್ಲ ಕಡುನೀಲವರ್ಣ ತಳೆದು ರಂಜಿಸುತ್ತಿದ್ದುವು, ಆಕಾಶದ ಅಂಗಳದಲ್ಲಿ ಕಿತ್ತಳೆಬಣ್ಣ ಸೂರೆಯಾಗಿತ್ತು. ಅಲ್ಲಿ ಇಲ್ಲಿ ಒಂದೊಂದು ತಾರೆಗಳೂ ಕಣ್ಣು ಮಿಟುಕಿಸಲಾರಂಭಿಸಿದ್ದುವು.

"ಕಿತ್ತಳೆಯ ಕೆನ್ನೆಯೂ ಕನ್ನೆಯನು ಕಂಡು
ಕಣ್ಣು ಮಿಟುಕಿಸಿ ನಕ್ಕಿತೋ ತುಂಟ ತಾರೆ"!
ಕಿತ್ತಳೆಯ ಕನ್ನೆ....ಶಾಂತಿ? ತುಂಟ ತಾರೆ....ತಾನು?

"ಛೆ. ಛೆ. ಮತ್ತೆ ಮತ್ತೆ ಅದೇ ವಿಚಾರ!" ಎಂದು ಕತ್ತು ಕೊಡಹಿ ಆತ ಸಾಯಂ ಸೌಂದರ್ಯದಲ್ಲಿ ಮನಸ್ಸು ತೊಡಗಿಸಲು ಯತ್ನಿಸತೊಡಗಿದ.

ಅರಣ್ಯ ಪ್ರದೇಶದ ಮಧ್ಯೆ ಹಾಯ್ದು ಭರದಿಂದ ಧಾವಿಸುತಿತ್ತು ರೈಲು. ಅಲ್ಲಿ ಇಲ್ಲಿ ನೀರಹಾವುಗಳಂತೆ ಹರಿದ ಕಾಲುದಾರಿಗಳು. ಗಿಡಗಳ ನಡುವೆ ಎದ್ದ ಕಲ್ಲು ಬಂಡೆ. ಎಲೆಗಳ ಗೊರಬು ಕಟ್ಟಿಕೊಂಡು ಗದ್ದೆಗಳಲ್ಲಿ ದುಡಿಯುತ್ತಿದ್ದ ಹಳ್ಳಿಯ ಹೆಂಗಸರ ಹಿಂಡು. ಒಂದೆಡೆಗೆ ಹಸುರು ಮೇಯುತ್ತಿದ್ದ ದನಗಳು. ಕಂಬಳಿಗುಪ್ಪಿ ದೇಹ ಮುಚ್ಚಿಕೊಂಡು, ಕೋಲಿನ ಮೇಲೆ ಕೈಯಿಸ್ತೂರಿ ಶಿಲ್ಪಿ ಕಡೆದ ಮೂರ್ತಿಯಂತೆ ನಿಂತ ದನಗಾಹಿ ಬಾಲಕ. ಪಚ್ಚೆಗಂಬಳಿಯಂತೆ ಪಸರಿಸಿದ ಬತ್ತ. ಅದು ನರ್ತಿಸುವ ಬೆಡಗೊ! ಸುಳಗಾಳಿ ಸುಳಿದೊಡನೆ ಪಯಿರು ಕೊರಳು ಕೊಂಕಿಸುವ ಸೊಬಗೊ! ಅಲ್ಲಲ್ಲಿ ಗದ್ದೆಗಳ ಮಧ್ಯೆ ಮಿಂಚಿನ ಹಾಗೆ ಅಂಕ ಡೊಂಕಾಗಿ ಹರಿಯುತಿದ್ದ ತೊರೆ. ಒಂದೆಡೆಗೆ ಜಲಗನ್ನಡಿಯಂತೆ ನಿಂತಿದ್ದ ಪುಟ್ಟ ಕೊಳ. ಅದರಲ್ಲಿ ಮೊಗ ನೋಡಿಕೊಳ್ಳುತಿದ್ದ ಮರವೆಣ್ಣು! ಹತ್ತು ಗಿಡಗಳ ಮಧ್ಯೆ ಹಣೆಯೆತ್ತುತಿದ್ದ ಹಸುಳೆವಳ್ಳಿ. ಪೂರ್ವಕಾಲದ ಋಷ್ಯಾಶ್ರಮಗಳ ಹಾಗೆ ಮೆರೆಯುತ್ತಿದ್ದ ಎಲೆವನೆ. ಯಾಗಧೂಮದ ಹಾಗೆ ಒಯ್ಯನೊಯ್ಯನೇರಿ ಗಾಳಿಯಲ್ಲಿ ಕರಗುತ್ತಿದ್ದ ಹೊಗೆ. ಗಿಡ ಹಸಿರು, ಎಲೆ ಹಸಿರು, ಬೆಳೆ ಹಸಿರು, ಹುಲ್ಲು ಹಸಿರು, ಗುಡ್ಡ ಹಸಿರು, ಮುಡ್ಡಿ ಹಸಿರು. ಎಲ್ಲೆಲ್ಲೂ ಹಸಿರು. ಜಗತ್ತೆಲ್ಲವೂ ಹಸಿರಿನಲ್ಲಿಯೆ ಲೀನವಾದಂತಿದ್ದ ಆ ನೋಟ ಸದಾನಂದನ ಕವಿ ಹೃದಯವನ್ನು ತಣಿಸಿತು.

## ೨೧

"ಬಹಳ ಸೊರಗಿದ್ದೀಯಪ್ಪಾ," ಎಂದರು ಬಸವಂತಪ್ಪ, ಮಗನನ್ನು ಕಂಡೊಡನೆ.

"ಅಲ್ಲಿ ಎಷ್ಟು ತ್ರಾಸವೊ ಯಾರಿಗೆ ಗೊತ್ತು! ಸೊರಗದಿದ್ದಾನೇನು!" ಎನ್ನುತ್ತಾ ತಾಯಿ ಕಣ್ಣಲ್ಲಿ ನೀರು ತಂದಳು.

"ಒಂದು ತಿಂಗಳವರೆಗೂ ಅರಾಮಾಗಿ ಪ್ರಕೃತಿ ಸುಧಾರಿಸಿಕೊಳ್ಳಪ್ಪಾ," ಎಂದರು ತಂದೆ.

ಮಾರನೆಯ ದಿನ ಬೆಳಿಗ್ಗೆ ಉಪಾಹಾರ ಸ್ವೀಕರಿಸುತ್ತಿದ್ದಾಗ ಹುಕ್ಕೇರಿ ಸಾಹೇಬರ ವಿಷಯ ಪ್ರಸ್ತಾಪಿಸಿ ತಂದೆ ಹೇಳಿದರು :

"ಒಂದು ವಾರದ ಹಿಂದೆಯೆ ಅವರು ಇಲ್ಲಿಗೆ ಬಂದು ಹೋದರಪ್ಪ. ನಿನಗೆ ಪತ್ರ ಬರೆದು ತಿಳಿಸೋಣವೆಂದಿದ್ದೆ. ನೀನೇ ಬರುವವನಿದ್ದೆಯೆಂದು ಸುಮ್ಮನಾದೆ. ನಿಮ್ಮ ಸ್ನೇಹಿತ ಶಿವಣ್ಣನಿಗೂ ಬರೆದಿದ್ದಾರಂತಲ್ಲ?"

ಉತ್ಸಾಹರಹಿತ ದನಿಯಲ್ಲಿ ಸದಾನಂದನೆಂದ: "ಹೌದಪ್ಪ. ಬರೆದಿದ್ದಾರೆ."

ಮಗನ ಮುಖದಲ್ಲೂ ದನಿಯಲ್ಲೂ ಕಂಡುಬಂದ ಉದಾಸೀನತೆಯಿಂದಾಗಿ ಬಸವಂತಪ್ಪನವರಿಗೆ ಕೊಂಚ ವಿಸ್ಮಯವಾಗದಿರಲಿಲ್ಲ. ಮದುವೆಯ ಮಾತು ಹೊರಡುತ್ತಲೂ ಹುಡುಗರು ಲಜ್ಜಿತರಾಗುವುದುಂಟು, ಆನಂದಿತರಾಗುವುದುಂಟು. ಆನಂದಕ್ಕೆ ಪ್ರತಿಯಾಗಿ ಬೇಸರವುಂಟಾದಲ್ಲಿ ಆ ಸಂಬಂಧ ಅವರಿ

ಗಿಷ್ಟವಿಲ್ಲದುದೆಂದೇ ಅರ್ಥವಾಗುವುದು. ಹುಕ್ಕೇರಿಯವರ ಮಗಳನ್ನು ಮದುವೆಯಾಗಲು ಸದಾನಂದನಿಗೆ ಮನಸ್ಸಿಲ್ಲವೊ ಏನೊ. ಏನಿದೆಯೊ ಅವನ ಮನಸ್ಸಿನಲ್ಲಿ ?

ಬಸವಂತಪ್ಪನವರು ಆ ವಿಚಾರವನ್ನು ಅಲ್ಲಿಗೇ ನಿಲ್ಲಿಸಿಬಿಟ್ಟರು. ಮಾತು ಬೇರೆ ವಿಷಯಗಳತ್ತ ತಿರುಗಿತು. ಲಿಂಗಪ್ಪನವರ ಪ್ರಸ್ತಾಪ ಬಂತು. ಸದಾನಂದ ತನ್ನ ಕಟು ಅನುಭವವನ್ನು ಬಣ್ಣಿಸುತ್ತಲೂ ಬಸವಂತಪ್ಪನವರು ನಕ್ಕು ನುಡಿದರು :

" ನನಗೂ ಹಾಗೆ ಅನ್ನಿಸಿತ್ತು ಆಗಲೆ. ಒಬ್ಬೊಬ್ಬರ ಸ್ವಭಾವ ಹಾಗೂ ಇರುತ್ತದಪ್ಪ. ಅಂಥವರಿಂದ ನಾವು ದೂರವಿರುವದೇ ಒಳ್ಳೆಯದು. ಆಮೇಲೆ ನೀನು ಅವರ ಹತ್ತರ ಹೋಗಬೇ ಇಲ್ಲವೇನು ?"

" ಹೋಗಲು ಮನಸ್ಸಾದರೂ ಹ್ಯಾಗೆ ಬರಬೇಕಪ್ಪ ? ಈಗೇನೊ ಹೆಚ್ಚು ತೊಂದರೆಯಿಲ್ಲ. ಜಾನಾವಳಿಯ ಹುಡುಗನಿಗೆ ಟ್ಯೂಶನ್ ಹೇಳುವದರಿಂದ ಊಟದ ಚಿಂತೆ ಬಗೆಹರಿಯಿತು."

" ಆ ಹುಡುಗ ಪಾಸಾಗಬಹುದಲ್ಲವೆ ?"

" ಅದೇ ಸಂಶಯ ಅಪ್ಪಾ. ಅವನಿಗಂತೂ ಅಭ್ಯಾಸದ ಕಡೆ ಸ್ವಲ್ಪವೂ ಲಕ್ಷ್ಯವಿಲ್ಲ. ಅವನು ಮ್ಯಾಟ್ರಿಕ್ ಪಾಸಾದರೆ ಕಾಲೇಜಿಗೆ ಕಳಿಸಲು ತಂದೆ ತಯಾರಿದ್ದಾನೆ. ಟ್ಯೂಶನ್ ಹೇಳುವದೂ ಮುಂದುವರಿಯಬಹುದು. ಆದರೆ ಆತ ಪಾಸಾಗುವದು ಬಹಳ ಕಷ್ಟ....ಮುಂದಿನ ವರ್ಷ ವನಗೆ ಹೆಚ್ಚು ತೊಂದರೆಯಾಗುವದೆಂದು ತೋರುತ್ತದೆ."

" ಅದಕ್ಕಾಗಿ ಏನಾದರೂ ವ್ಯವಸ್ಥೆ ಮಾಡಬೇಕಪ್ಪಾ. ಹುಕ್ಕೇರಿ ಸಾಹೇಬರು ಸಹಾಯ ಮಾಡುವದಾಗಿ ಹೇಳಿದ್ದಾರೆ," ಎಂದಳು ತಾಯಿ.

" ಹೌದೇ ?" ಎಂದಿಷ್ಟೆ ನುಡಿದು ಸುಮ್ಮನಾದ ಸದಾನಂದ.

ತಾಯಿ ಉತ್ಸಾಹದ ದನಿಯಲ್ಲಿ ಮುಂದುವರೆಸಿದಳು :

" ಅವರೆಲ್ಲಾ ಬಹಳ ಒಳ್ಳೆಯ ಜನರು ಸದಾ. ಸಾಹೇಬರ ಕುಟುಂಬ ಬಂಗಾರದಂಥ ಹೆಣ್ಣುಮಗಳು. ಆ ಹುಡುಗಿ ಮೀನಾಕ್ಷೀನೂ ರತ್ನದಂಥಾಕೆ. ಇಂಗ್ಲೀಷು ಕಲಿತರೂ ಸ್ವಲ್ಪ ಕೂಡಾ ಜಂಬವಿಲ್ಲಪ್ಪ. ಬಹಳ ನಯ ನಾಜೂಕು ವಿನಯ...."

ಬಲು ಮೋಜೆನ್ನಿಸಿತು ಸದಾನಂದನಿಗೆ. ಕಿರುನಗೆ ಸೂಸುತ್ತ ಅವನು ಕೇಳಿದ :

" ಏನವ್ವಾ, ಬಹಳ ಹೊಗಳತೊಡಗಿದೆಯಲ್ಲ? ಅವರನ್ನೆಲ್ಲಾ ಎಲ್ಲಿ ನೋಡಿದೆ?"

" ಸಾಹೇಬರು ಕುಟುಂಬ ಸಮೇತ ಬಂದಿದ್ದರಪ್ಪ. ರೇವಣಸಿದ್ಧೇಶ್ವರನ ದರ್ಶನಕ್ಕೆ. ಎರಡು ದಿನ ಇಲ್ಲೇ ಇದ್ದರು ಎಲ್ಲರೂ. ನಿಜವಾಗಿ ಬಹಳ ಒಳ್ಳೆಯ ಜನ," ಎಂದರು ಬಸವಂತಪ್ಪ.

" ಮೀನಾಕ್ಷಿ ಬಹಳ ಚೆಂದಾಗಿ ಹಾಡುತ್ತಾಳೆ ಸದಾ. ನಿನ್ನ ಕವಿತೆಗಳಿಗೆ ರಾಗಗಳನ್ನೂ ಕೂಡಿಸಿದ್ದಾಳೆ," ಎಂದಳು ತಾಯಿ.

ಹುಕ್ಕೇರಿಯವರ ಬಗೆಗೂ ಅವರ ಮಗಳ ಬಗೆಗೂ ಹಲವರ ಬಾಯಿಂದ ಕೇವಲ ಪ್ರಶಂಸೆಯನ್ನೆ ಕೇಳುತ್ತ ಬಂದುದರಿಂದಾಗಿ ಸದಾನಂದನ ಮನಸ್ಸು ಅವನಿಗರಿವಾಗದಂತೆಯೆ ಅವರ ಕಡೆಗೆ ವಿಚಿತ್ರವಾದ ರೀತಿಯಲ್ಲಿ ಆಕರ್ಷಿತವಾಗ ತೊಡಗಿತ್ತು – ಎಲ್ಲರ ಮೆಚ್ಚುಗೆಗೂ ಪಾತ್ರಳಾದ ಮೀನಾಕ್ಷಿ ಹೇಗಿರುವ ಳೆಂಬುದನ್ನು ಒಂದು ಬಾರಿ ನೋಡಿಬಿಡೋಣವೆಂದೂ ಅವನಿಗೆನ್ನಿಸತೊಡಗಿತ್ತು. ನೋಡಿ ಬಂದ ಮಾತ್ರಕ್ಕೆ ಮದುವೆಗೆ ಒಪ್ಪಿಗೆ ಕೊಟ್ಟ ಹಾಗೇನೂ ಆಗುವುದಿಲ್ಲ ವಲ್ಲ. " ಈಗಲೇ ಮದುವೆಯಾಗಲು ನನಗೆ ಇಚ್ಛೆಯಿಲ್ಲ," ಎಂದು ನೆಪ ಹೇಳಿ ಪಾರಾಗಲು ಸಾಧ್ಯವಾದೀತು....

" ಹಬ್ಬವಾದ ಬಳಿಕ ಹೋಗಿ ನೋಡಿಕೊಂಡು ಬಾರಪ್ಪಾ. ತಪ್ಪದೆ ಕಳಿಸಿಕೊಡಿರೆಂದು ಹುಕ್ಕೇರಿ ಸಾಹೇಬರು ಹೇಳಿದ್ದಾರೆ," ಎಂದರು ಬಸವಂತಪ್ಪ.

ಅಮಾವಾಸ್ಯೆಯ ದಿನವೆ ಶಿವಣ್ಣ ಪತ್ನೀ ಸಮೇತನಾಗಿ ಹಳ್ಳಿಗೆ ಬಂದಿಳಿದ. ಎರಡು ದಿನಗಳ ತರುವಾಯ ಮೂವರೂ ಸೇರಿ ಬೆಳಗಾವಿಗೆ ಹೊರಟರು. ಕೆಲವು ತಿಂಗಳುಗಳ ಹಿಂದೆಯೆ ಹುಕ್ಕೇರಿಯವರಿಗೆ ಬೆಳಗಾವಿಗೆ ವರ್ಗವಾಗಿತ್ತು. ಠಳಕವಾಡಿಯಲ್ಲಿ ಗಿಡಮರಗಳ ಮಧ್ಯೆ ಒಂಟಿಯಾಗಿದ್ದ ಅವರ ಮನೆಯ ಅಂಗಳದಲ್ಲಿ ಅಡಿಯಿರಿಸಿದಾಗ ಒಂದು ತಪೋವನದಲ್ಲಿ ಪ್ರವೇಶಿಸಿದಂತೆಯೆ ಭಾಸವಾಯಿತು ಸದಾನಂದನಿಗೆ. ಅಂಗಳದ ಅರ್ಧಭಾಗದಲ್ಲಿ ಚಿಕ್ಕ ಹೂದೋಟ. ಸದಾನಂದನಿಗೆ ಪ್ರಿಯವಾದ ದುಂಡುಮಲ್ಲಿಗೆ ಬಳ್ಳಿ ಅಲ್ಲಿಯೂ ಬೆಳೆದು ನಿಂತಿದ್ದಿತು. ಅದನ್ನು ನೋಡಿದೊಡನೆಯೆ ಅವನ ಮನಸ್ಸು ಪ್ರಫುಲ್ಲಿತವಾಯಿತು.

ಹುಕ್ಕೇರಿಯವರು ಆಗ ಮನೆಯಲ್ಲಿರಲಿಲ್ಲ. ಸಾತ್ವಿಕತೆಯೆ ಮೂರ್ತಿವೆತ್ತು ಬಂದಂತಿದ್ದ ಮನೆಯೊಡತಿ ಮಾಲತೀದೇವಿ ಅವರನ್ನು ಆದರದಿಂದ ಬರಮಾಡಿ ಕೊಂಡರು. ಅವರಿಗೆ ನಲವತ್ತು ವರ್ಷ ವಯಸ್ಸಿರಬಹುದು. ಹಣೆಯ ಮೇಲಿನ ಹಲವು ಕೂದಲು ಆ ವೇಳೆಗಾಗಲೆ ಬೆಳ್ಳಗಾಗಿದ್ದುವು. ಅದರಿಂದಾಗಿ ಅವರ ಮುಖದ ಗಾಂಭೀರ್ಯ ಇನ್ನೂ ಎದ್ದು ಕಾಣುತ್ತಿತ್ತು.

ಪಡಸಾಲೆಯಲ್ಲಿ ಅಡಿಯಿರಿಸುತ್ತಲೂ ಅದರ ಬಲಭಾಗದಲ್ಲಿದ್ದ ಮೇಜಿನ ಮೇಲೆ ಹರಡಿದ್ದ ಪತ್ರಿಕೆಗಳು ಅವರ ಗಮನ ಸೆಳೆದುವು. ಇಂಗ್ಲೆಂಡು ಅಮೆರಿಕಾ ಗಳಲ್ಲಿ ಪ್ರಕಟವಾಗುವ ಮುಖ್ಯ ಮುಖ್ಯ ಪತ್ರಿಕೆಗಳೆಲ್ಲ ಅಲ್ಲಿ ಕಾಣಿಸುತ್ತಿದ್ದುವು. ನಡುಮನೆಯಲ್ಲಿ ಕೇವಲ ಗ್ರಂಥಗಳಿಂದ ತುಂಬಿದ ಎಂಟು ಹತ್ತು ಬೀರುಗಳು ಮನೆಯೊಡೆಯರ ವಾಚನಾಭಿರುಚಿಗೆ ಸಾಕ್ಷಿಯಾಗಿ ನಿಂತಿದ್ದುವು. ಮೂಲೆ ಯಲ್ಲೊಂದು ಪುಟ್ಟ ರೇಡಿಯೊ ಸೆಟ್. ಗೋಡೆಗಳ ಮೇಲೆ ಹೆಚ್ಚು ಪಟಗಳೇನೂ ಇರಲಿಲ್ಲ. ನಡುಮನೆಯ ಬಾಗಿಲಲ್ಲಿ ಅಡಿಯಿರಿಸಿದೊಡನೆ ಎದುರಿಗೆ ಎದ್ದು ಕಾಣುತ್ತಿದ್ದ ದೊಡ್ಡ ಪಟ ಅರವಿಂದರದು. ಅವರ ಪಕ್ಕದಲ್ಲಿಯೆ ಮಾತೆಯವರ ಭಾವಚಿತ್ರ. ಗಾಂಧಿ, ನೆಹರು, ಟಾಗೋರರ ಪಟಗಳೂ ಇದ್ದುವು. ಕಿಟಕಿ ಬಾಗಿಲುಗಳಿಗೆಲ್ಲ ತಿಳಿನೀಲವರ್ಣದ ಪರದೆಗಳು ತೂಗಾಡುತ್ತಿದ್ದವು. ಗೋಡೆ ಗಳಿಗೆ ಹೊಂದಿಕೊಂಡು ಅಚ್ಚುಕಟ್ಟಾಗಿ ಇರಿಸಿದ್ದ ಕುರ್ಚಿಗಳ ಮೇಲೆ ಕಸೀದೆಯ ನ್ನೊಳಗೊಂಡ ದಿಂಬುಗಳಿದ್ದುವು. ನೆಲದ ಮೇಲೆ ಕಂದು ಬಣ್ಣದ ಹಾಸು. ಮನೆಯೆಲ್ಲವೂ ಸ್ವಚ್ಛವಾಗಿತ್ತು, ಶುಭ್ರವಾಗಿತ್ತು.

ಐದು ಗಂಟೆಯಾಗುತ್ತಿದ್ದ ಹಾಗೆ ಹುಕ್ಕೇರಿಯವರೂ ಬಂದುದಾಯಿತು. ಅತಿಥಿಗಳನ್ನು ಕಂಡೊಡನೆ ವಿನಯದಿಂದ ಕೈಜೋಡಿಸಿ ವಂದಿಸುತ್ತಾ ಅವರೆಂದರು :

“ ಪ್ರವಾಸ ಸುಖವಾಗಿ ಆಯಿತಷ್ಟೆ ?”

ಅವರ ದನಿಯಲ್ಲಿ ಹಿರಿತನದ ಗಾಂಭೀರ್ಯವಿದ್ದಿತಾದರೂ ಅದರೊಡನೆ ಸಾದಾತನದ ಸರಳತೆಯೂ ಸೇರಿಕೊಂಡಿತ್ತು.

ಎಲ್ಲರೂ ಸೇರಿ ಉಪಾಹಾರ ತೆಗೆದುಕೊಳ್ಳುತ್ತಲಿದ್ದ ಹಾಗೆ ಶಾಲೆಗಳಿಂದ ಕಿರಿಯರು ಬಂದರು. ಹತ್ತು ವರ್ಷಗಳ ಶಿವಮೂರ್ತಿ, ಎಂಟು ವರ್ಷಗಳ ಅರವಿಂದ, ಹನ್ನೆರಡರ ಹುಡುಗಿ ಮುಕ್ತಾ. ತಂದೆ ತಾಯಿಗಳಂತೆ ಆ ಮಕ್ಕಳ

ಮುಖಗಳ ಮೇಲೂ ಪ್ರಸನ್ನತೆ, ಶಾಂತತೆಗಳು ಮುದ್ರೆಯೊತ್ತಿದ್ದುವು. ಕೈಕಾಲು ಮುಖ ತೊಳೆದುಕೊಂಡು ಬಂದು ಹುಡುಗರಿಬ್ಬರೂ ಅತಿಥಿಗಳಿಗೆ ಬಾಗಿ ನಮಸ್ಕರಿಸಿ ತಮ್ಮ ಕುರ್ಚಿಗಳ ಮೇಲೆ ಕುಳಿತುಕೊಂಡರು. ಮುಕ್ತಾ ಒಳಗೇ ಉಳಿದಳು.

"ಶಿವಮೂರ್ತಿ ಹೈಸ್ಕೂಲಿನಲ್ಲಿದ್ದಾನೆ. ಅರವಿಂದನಿನ್ನೂ ಪ್ರಾಥಮಿಕ ಶಾಲೆಯಲ್ಲಿದ್ದಾನೆ," ಎಂದರು ಹುಕ್ಕೇರಿಯವರು. "ಇವರು ಶಿವಣ್ಣ. ನೀವು ನೋಡಿದ್ದೀರಲ್ಲ ಮೊದಲೇ. ಇವರೇ ಕವಿಗಳು, ಸದಾನಂದರು."

ಹುಡುಗರಿಬ್ಬರೂ ಮತ್ತೆ ನಮಸ್ಕರಿಸಿದರು.

"ನಿಮ್ಮ ಎಲ್ಲಾ ಕವಿತೆಗಳನ್ನು ನಾನು ಓದಿದ್ದೇನೆ," ಎಂದು ಗಂಭೀರವಾಗಿ ಹೇಳಿದ ಶಿವಮೂರ್ತಿ.

"ಶಿವಮೂರ್ತಿ ಅರವಿಂದ ಮುಕ್ತಾ ಮೀನಾಕ್ಷಿ ಎಲ್ಲರೂ ಸೇರಿ ಕವಿತೆಗಳನ್ನು ಹಾಡುತ್ತಾರೆ," ಎಂದರು ಹುಕ್ಕೇರಿಯವರು.

ಆ ಮನೆಯ ವಾತಾವರಣದಿಂದ ಸದಾನಂದನ ಮನಸ್ಸಿನ ಮೇಲೆ ವಿಚಿತ್ರವಾದ ಪರಿಣಾಮವಾಗದಿರಲಿಲ್ಲ. ಪೌರ್ವಾತ್ಯ ಸಂಸ್ಕೃತಿಯ ಸರಳತನವೂ ಪಾಶ್ಚಾತ್ಯ ಸಂಸ್ಕೃತಿಯ ಅಚ್ಚುಕಟ್ಟುತನವೂ ಸಮಸಮವಾಗಿ ಬೆರೆತ ಆ ಅಪೂರ್ವ ದೃಶ್ಯ ಅವನ ಬಗೆಯನ್ನು ಸೂರೆಗೊಂಡಿತು. ಆ ಕುಟುಂಬದ ವಿಚಾರವಾಗಿ ತಾನು ಅದುವರೆಗೆ ಕೇಳಿದ ಪ್ರಶಂಸೆಯಲ್ಲಿ ಅತಿಶಯೋಕ್ತಿಯೇನೂ ಇಲ್ಲವೆಂದು ಅವನಿಗೆ ಮನವರಿಕೆಯಾಯಿತು.

ಕಾಲೇಜು ಪಠ್ಯಪುಸ್ತಕಗಳ ವಿಚಾರವಾಗಿ ಮೊದಲಾದ ಸಂಭಾಷಣೆ ನಿಧಾನವಾಗಿ ಸಾಹಿತ್ಯದ ಕಡೆ ಹೊರಳಿತು. ಕವಿತೆಗಳ ವಿಷಯ ಹೊರಟಿತು. ಅರವಿಂದ ಸಾಹಿತ್ಯ ತತ್ತ್ವಜ್ಞಾನಗಳ ಪ್ರಸ್ತಾಪ ಬಂದಿತು. ಸದಾನಂದನೇನೂ ಅರವಿಂದ ವಾಙ್ಮಯವನ್ನು ವಿಶೇಷವಾಗಿ ಓದಿಕೊಂಡಿರಲಿಲ್ಲ. ಹುಕ್ಕೇರಿಯವರು ಮಾತ್ರ Life Devine ಗ್ರಂಥವನ್ನೆಲ್ಲ ಶ್ರದ್ಧೆಯಿಂದ ಅಭ್ಯಸಿಸಿದಂತಿತ್ತು. ಆ ಹೆಬ್ಬೊತ್ತಿಗೆಯಲ್ಲಿನ ಭವ್ಯ ತತ್ತ್ವಜ್ಞಾನವನ್ನು ಕುರಿತು ಮಾತಾಡುತ್ತಿದ್ದ ಹಾಗೆ ಅವರು ತಮ್ಮನ್ನು ತಾವು ಮರೆತುಬಿಟ್ಟಿದ್ದರು.

ರಾತ್ರೆ ಊಟಕ್ಕೆ ಕುಳಿತಾಗ ಮೀನಾಕ್ಷಿ ಕಾಣಿಸಿಕೊಂಡಳು. "ಎಲ್ಲ ಅಂಶಗಳಲ್ಲೂ ತಾಯಿಯ ಪ್ರತಿಮೂರ್ತಿಯಂತಿದ್ದಾಳೆ ಮೀನಾಕ್ಷಿ," ಎಂದು

ಕೊಂಡ ಸದಾನಂದ. ಅವಳ ನಡೆಯಲ್ಲಿ ಹೆಚ್ಚಿನ ಸಂಕೋಚವಿರಲಿಲ್ಲವಾದರೂ ದಿಟ್ಟತನವೂ ಇರಲಿಲ್ಲ. ಶಾಂತವೂ ಸ್ಥಿರವೂ ನಿಶ್ಚಲವೂ ಆದ ನೋಟ. ಮುಗ್ಧತೆಯ ಜತೆಗೇ ಮುಖದಲ್ಲಿ ಬುದ್ಧಿವಂತಿಕೆಯ ಕಳೆಯೂ ಬೆಳಗುತ್ತಿತ್ತು. ತಾಯಿಯಂತೆ ಅವಳದೂ ಗೌರಕಾಯ. ಅಷ್ಟು ಎತ್ತರವೂ ಅಲ್ಲದ, ಕುಳ್ಳಗಿನದೂ ಅಲ್ಲದ ನಿಲುವು. ಕೊಂಚ ಕೃಶವಾದುದೆನ್ನಿಸುವ ತೆಳ್ಳನೆಯ ಮೈ. "ಇದು ಬಹಳ ಕೋಮಲಪ್ರಾಣಿಯ ಹಾಗೆ ಕಾಣುತ್ತದೆ. ಮಲ್ಲಿಗೆ ಹೂವಿನ ಹಾಗಿದ್ದಾಳೆ, ಅಷ್ಟೆ," ಎಂದುಕೊಂಡ ಸದಾನಂದ. ಸಹಜವಾಗಿಯೆ ಅವನ ಬಗೆಗಣ್ಣಿನೆದುರಿಗೆ ಶಾಂತಳ ಮೂರ್ತಿ ಕಾಣಿಸಿಕೊಂಡಿತು. "ಶಾಂತಿಯಂಥ ಮಾದಕ ಸೌಂದರ್ಯವಲ್ಲ ಮೀನಾಕ್ಷಿಯದು," ಎಂದುಕೊಂಡ ಸದಾನಂದ.

ಎರಡು ದಿನಗಳೂ ಯಾರಿಗೂ ಗೊತ್ತಾಗದಂತೆ ಕಳೆದುಹೋದವು. ಅಷ್ಟರಲ್ಲಿ ಸದಾನಂದ ಆ ಮನೆಯವರಲ್ಲೊಬ್ಬನಂತಾಗಿ ಹೋಗಿದ್ದ. ಶಿವಮೂರ್ತಿ ಅರವಿಂದ ಇಬ್ಬರೂ ಅವನಿಗೆ ಯಾವಾಗಲೂ ಅಂಟಿಕೊಂಡಿರುತ್ತಿದ್ದರು. ಮೂರನೆಯ ದಿನ ಊರಿಗೆ ಹೊರಟುನಿಂತಾಗ ಆ ಹುಡುಗರನ್ನು ಬಿಟ್ಟು ಹೊರಡುವುದು ಬಹಳ ಕಷ್ಟಕ್ಕಿಟ್ಟುಕೊಂಡಿತು ಸದಾನಂದನಿಗೆ. ಮೀನಾಕ್ಷಿಯೊಂದಿಗೆ ಮಾತ್ರ ಅಂಥ ಸಂಬಂಧವೇನೂ ಉತ್ಪನ್ನವಾಗಿರಲಿಲ್ಲ. ಎರಡು ದಿನಗಳ ಅವಧಿಯಲ್ಲಿ ಅವಳೊಡನೆ ಒಂದು ಸಲವೂ ಮಾತನಾಡುವ ಸಂದರ್ಭ ಲಭಿಸಿರಲಿಲ್ಲ – ಅವಳೂ ವಿಶೇಷವಾಗಿ ಅವನೆದುರಿಗೆ ಸುಳಿಯುತ್ತಿರಲಿಲ್ಲ. ಮಾಲತೀದೇವಿಯವರೇ ಅವನೊಡನೆ ಸಂಭಾಷಿಸುತ್ತ ಕೂಡುತ್ತಿದ್ದರು. ಆ ಪರಿಶುದ್ಧ ಹೃದಯದ ತಾಯಿಯನ್ನು ಬೀಳ್ಕೊಂಡು ಹೊರಡುವಾಗ ಸದಾನಂದನ ಕಣ್ಣಲ್ಲಿ ನೀರೂರುವಂತಾಯಿತು. ತನ್ನ ತಾಯಿ ಮತ್ತು ಲೀಲಾ ಇಬ್ಬರನ್ನು ಬಿಟ್ಟರೆ ಅಂಥ ಉದಾತ್ತ ಚಾರಿತ್ರ್ಯದ ಮಹಿಳೆಯನ್ನು ಅವನು ಇನ್ನೆಲ್ಲೂ ನೋಡಿರಲಿಲ್ಲ.

"ಆಗಾಗ ಪತ್ರ ಬರೀತಾ ಇರಿಯಪ್ಪಾ," ಎಂದರು ಮಾಲತೀದೇವಿ.

"ಬರೀತೇನೆ ತಾಯಿ."

ಸದಾನಂದ ಶಿವಣ್ಣ ಮೊದಲಾದವರೆಲ್ಲ ಕುದುರೆಗಾಡಿಗಳನ್ನೇರಿ ಕುಳಿತರು. ಅವರನ್ನು ರೈಲಿಗೆ ಕೂಡಿಸಿ ಬರಲು ಹುಕ್ಕೇರಿಯವರೇ ಹೊರಟಿದ್ದರು, ಶಿವಮೂರ್ತಿ ಅರವಿಂದರೊಡನೆ. ಕುದುರೆ ಗಾಡಿಗಳು ಹೊರಡುವವೇಳೆಗೆ ಬಾಗಿಲಲ್ಲಿ

ಮೀನಾಕ್ಷಿಯ ಮುಖ ಕಾಣಿಸಿಕೊಂಡಿತು. 'ಹೋಗಿ ಬರುತ್ತೇನೆ' ಎಂದು ಅವಳಿಗೂ ಹೇಳಬೇಕಲ್ಲವೆ?

"ಹೋಗಿ ಬರ್ತೇನೆ ಮೀನಾಕ್ಷೀ."

"ಹೋಗಿ ಬನ್ನಿ," ಎಂದು ಅವಳು ಮೃದುಸ್ವರದಲ್ಲಿ ನುಡಿದಳು.

ಆ ಮಾತಿನಿಂದಾಗಿ ಸದಾನಂದನ ಹೃದಯವೇನೂ ಪುಲಕಗೊಳ್ಳಲಿಲ್ಲ.

ರೈಲಿನಲ್ಲೂ ಅಷ್ಟೆ. ಮೀನಾಕ್ಷಿಯ ನೆನಪೇ ಅವನಿಗಾಗಲಿಲ್ಲ. ಹುಕ್ಕೇರಿಯವರು, ಮಾಲತೀದೇವಿ, ಶಿವಮೂರ್ತಿ, ಅರವಿಂದ ಈ ನಾಲ್ವರನ್ನೂ ಮತ್ತೆ ಮತ್ತೆ ಜ್ಞಾಪಿಸಿಕೊಂಡು ಅವನ ಮನಸ್ಸು ವಿಹ್ವಲವಾಗುತಿತ್ತು.

"ನೋಡಿದ್ದಂತೂ ಆಯ್ತಲ್ಲ ಸದಾನಂದಾ! ಏನು ಅಭಿಪ್ರಾಯ ನಿನ್ನದು?" ಎಂದು ಶಿವಣ್ಣ ಪ್ರಶ್ನಿಸಿದಾಗ ಸದಾನಂದ ಸಹಜ ಸ್ವರದಲ್ಲಿ ಹೇಳಿದ:

"ಅವರೆಲ್ಲಾ ಬಹಳ ಒಳ್ಳೆಯ ಜನರೆಂದು ನೀನು ಹೇಳಿದ್ದೆಯಲ್ಲ–ಅದರಲ್ಲಿ ಸ್ವಲ್ಪವೂ ಸುಳ್ಳಿರಲಿಲ್ಲ. ಇಂಥ ಸುಸಂಸ್ಕೃತ ಕುಟುಂಬವನ್ನು ನಾನು ಇಲ್ಲಿಯತನಕ ನೋಡಿರಲಿಲ್ಲ."

"ಮೀನಾಕ್ಷಿಯಂಥ ಕನ್ಯೆಯನ್ನೋ?" ಎಂದು ನಗುತ್ತ ಕೇಳಿದಳು ಪದ್ಮಾ.

ಸದಾನಂದನ ಮನಸ್ಸು ಗೊಂದಲಕ್ಕೆ ಸಿಲುಕಿಕೊಂಡಿತು. ಪದ್ಮಾ ಪ್ರಶ್ನೆಕ್ಕೆ ಉತ್ತರವೇನು? ಮೀನಾಕ್ಷಿಯಂಥವಳನ್ನು ಈ ಮೊದಲು ತಾನು ನೋಡಿರಲಿಲ್ಲವೆಂದು ಹೇಳಲು ಅವನ ಮನಸ್ಸು ಒಪ್ಪಲಿಲ್ಲ. ಅವಳದೇ ಆದ ವಿಶಿಷ್ಟ ವ್ಯಕ್ತಿತ್ವವೊಂದು ಮೀನಾಕ್ಷಿಗಿರುವುದು ನಿಜ. ಆದರೆ ಅದೊಂದೇ ಸಾಲದು. ಮೀನಾಕ್ಷಿಯಲ್ಲಿ ಯಾವುದೋ ಒಂದು ವಿಷಯದ ಕೊರತೆಯಿದೆ. ಆದಾವ ವಿಷಯ?

ಸದಾನಂದ ತಲೆ ಕೆರೆದುಕೊಂಡ. ಶಾಂತಳಿಗೂ ಮೀನಾಕ್ಷಿಗೂ ಮುಖ್ಯವಾದ ಭೇದವೇನು?

ಹಠಾತ್ತಾಗಿ ಅವನಿಗೆ ಹೊಳೆಯಿತು: ಶಾಂತಳನ್ನು ತಾನು ಮನಃಪೂರ್ವಕವಾಗಿ ಪ್ರೀತಿಸುತ್ತಿದ್ದಾನೆ. ಅಂತೆಯೆ, ಮೀನಾಕ್ಷಿ ತನ್ನ ದೃಷ್ಟಿಯಲ್ಲಿ ಎದ್ದು ಕಾಣಿಸುತ್ತಲಿಲ್ಲ.

"ಕನ್ಯೆ ಪಾಸಾಯಿತೇ?" ಪದ್ಮಾ ಪುನಃ ಕೇಳಿದಳು.

"ನೀನು ಪಾಸು ಮಾಡುವದನ್ನೇ ಅವರೆಲ್ಲಾ ಕಾದು ಕುಳಿತಿದ್ದಾರಪ್ಪಾ. ಶುಭಮುಹೂರ್ತ ನೋಡಿ ನಿಶ್ಚಯಕಾರಣ ಮಾಡಿಬಿಡೋಣ ಅಂತಿದ್ದರು ಸಾಹೇಬರು. ಬೇಸಿಗೆಯಲ್ಲೇ ಮದುವೆಯನ್ನೂ ಮಾಡಿಬಿಡುವ ವಿಚಾರವಿದ್ದಂತಿದೆ ಅವರಿಗೆ," ಎಂದ ಶಿವಣ್ಣ.

ಆಗ ಮಾತ್ರ ಸದಾನಂದನಿಗೆ ಪೀಕಲಾಟಕ್ಕಿಟ್ಟುಕೊಂಡಿತು. ಕನ್ನೆಯನ್ನು ನೋಡಲು ಹೋಗಿ ತಾನಾಗಿಯೆ ಕಠಿಣ ಪ್ರಸಂಗಕ್ಕೆ ಸಿಲುಕಿಕೊಂಡ ಹಾಗಾಯಿತು. ಹೋಗದೆ ಸುಮ್ಮನಿದ್ದು ಬಿಟ್ಟಿದ್ದರೆ ಈ ಪೇಚಾಟವೇ ಬರುತ್ತಿರಲಿಲ್ಲ. ತಾನು ಮೀನಾಕ್ಷಿಯನ್ನು ನಿರಾಕರಿಸುವುದಿಲ್ಲವೆಂದೇ ಅವರೆಲ್ಲ ನಂಬಿಕೊಂಡಿರಬೇಕು. ತನ್ನ ತಂದೆ ತಾಯಿಗಳೂ ಹಾಗೇ ಭಾವಿಸಿಕೊಂಡಿದ್ದಾರೆ. ಈ ಸಂಬಂಧ ಹೊಂದಿಸಿಯೇಬಿಡುವುದೆಂದು ಶಿವಣ್ಣನೂ ನಿರ್ಧರಿಸಿಕೊಂಡಂತಿದೆ. ಈ ಪ್ರಸಂಗದಿಂದ ತಪ್ಪಿಸಿಕೊಳ್ಳುವ ಬಗೆ ಯಾವುದು? ಮೀನಾಕ್ಷಿಯನ್ನು ತಾನು ನಿರಾಕರಿಸುವುದು ಯಾವ ಕಾರಣದಿಂದ? ಯಾವ ಕಾರಣ ಮುಂದೆ ಮಾಡಿದರೂ ಅವರ ಮನಸ್ಸು ನೋಯದಿರುವುದಿಲ್ಲ. ಅಂಥ ಒಳ್ಳೆಯ ಜೀವಗಳನ್ನು ನೋಯಿಸುವುದಾದರೂ ಹೇಗೆ?

ಊರಿಗೆ ಬಂದು ಮುಟ್ಟುತ್ತಲೂ ತಾಯಿ ಕೇಳಿದಳು:

"ನಾ ಹೇಳಿದ್ದು ಒಪ್ಪಿಗೆಯಾಯಿತೇ ಸದಾ?"

"ಹೌದವ್ವ," ಎಂದಿಷ್ಟೆ ನುಡಿದು ಅವನು ಮೌನ ತಳೆದ.

ನಾಲ್ಕೈದು ದಿನಗಳ ತರುವಾಯ ಹುಕ್ಕೇರಿಯವರ ಕಾಗದ ಬಂದು ಸೇರಿತು. ಅದನ್ನು ಮಗನ ಕೈಗೆ ಕೊಡುತ್ತ ಬಸವಂತಪ್ಪನವರು ಹೇಳಿದರು:

"ಸಮೀಪದಲ್ಲೇ ಮುಹೂರ್ತವಿದೆಯಂತೆ. ಲಗ್ನಕಾರ್ಯ ನಿಶ್ಚಯ ಮಾಡೋಣ ಅಂತ ಬರೆದಿದ್ದಾರೆ. ಏನು ಹೇಳುತ್ತೀ ಸದಾ?"

"ಈಗಲೇ ಏನು ಅವಸರ ಅಪ್ಪಾ?"

"ಅವಸರವೇನೂ ಇಲ್ಲ ತಮ್ಮಾ. ಮದುವೆ ತಡವಾದರೂ ಚಿಂತೆಯಿಲ್ಲ, ನಿಶ್ಚಯವಾದರೆ ಉತ್ತಮ ಅಂತ ಹುಕ್ಕೇರಿ ಸಾಹೇಬರೆನ್ನುತ್ತಾರೆ."

ಪತ್ರವನ್ನು ಜೇಬಿನಲ್ಲಿಟ್ಟುಕೊಂಡು ಸದಾನಂದ ಹೊರಗಡೆ ನಡೆದ. ಊರಿನಿಂದ ಅರ್ಧ ಮೈಲು ದೂರದಲ್ಲಿ ಎತ್ತರದ ಗುಡ್ಡದ ತುದಿಯಲ್ಲಿ ರೇವಣಸಿದ್ಧೇಶ್ವರನ ಗುಡಿ. ಆ ಭಾಗದಲ್ಲೆಲ್ಲ ಬಲು ಪ್ರಖ್ಯಾತವಾಗಿದ್ದ ದೇವಸ್ಥಾನ ಅದು.

ಬುಡದಿಂದ ತುದಿಯವರೆಗೂ ಕಲ್ಲು ಮೆಟ್ಟಲುಗಳನ್ನೇರ್ಪಡಿಸಿ ಗುಡ್ಡ ಹತ್ತಿ ಹೋಗಲು ಅನುಕೂಲವಾಗುವ ವ್ಯವಸ್ಥೆ ಮಾಡಲಾಗಿದ್ದಿತು. ಎಳೆಯ ತನದಿಂದಲೂ ಸದಾನಂದನ ಮೆಚ್ಚುಗೆಯ ತಾಣವಾಗಿತ್ತು ಆ ಗುಡ್ಡ. ಊರಿನಲ್ಲಿದ್ದಾಗಲೆಲ್ಲ ಪ್ರತಿದಿನವೂ ಸಾಯಂಕಾಲ ತಪ್ಪದೆ ಅಲ್ಲಿಗೆ ಹೋಗಿ ಗುಡ್ಡದ ನೆತ್ತಿಯ ಮೇಲೆ ಕುಳಿತು ಕೆಳಗಡೆ ಹರಡಿ ಸೃಷ್ಟಿ ಸೌಂದರ್ಯವನ್ನು ವೀಕ್ಷಿಸುತ್ತ ಮೈಮರೆಯುವುದು ಅವನಿಗೆ ಅಭ್ಯಾಸವಾಗಿದ್ದಿತು. ರೇವಣ ಸಿದ್ಧೇಶ್ವರನ ಗುಡಿಯ ಅಂಗಳದಲ್ಲಿ ಕುಳಿತುಕೊಂಡೇ ಅವನು ಅನೇಕ ಕವಿತೆ ಗಳನ್ನು ರಚಿಸಿದ್ದ. ಆತ ದಿನವೂ ಅಲ್ಲಿಗೆ ಹೋಗುವುದನ್ನು ಕಂಡ ಹಳ್ಳಿಗ ರನೇಕರು ಚೇಷ್ಟೆಗಾಗಿ ಅದನ್ನು 'ಸದಾನಂದನ ಗುಡ್ಡ' ಎಂದೂ ಕರೆಯ ತೊಡಗಿದ್ದರು.

ತಾನೇ ಬರಮಾಡಿಕೊಂಡ ಸಮಸ್ಯೆಯನ್ನು ಪರಿಹರಿಸಲಾರದೆ ಗೋಳಾಡುತ್ತ ಸದಾನಂದ ಗುಡ್ಡದ ಕಡೆ ನಡೆದಿದ್ದಾಗ ಅವನ ಬಾಲ್ಯದ ಗೆಳೆಯ ಗೋಪಾಲ ಹಾದಿಯಲ್ಲಿ ಭೆಟ್ಟಿಯಾದ. ಮುಲ್ಕೀ ಪರೀಕ್ಷೆಯವರೆಗೆ ಓದಿ ಹೊಲ ಮನೆ ನೋಡುತ್ತ ಹಳ್ಳಿಯಲ್ಲೇ ನೆಮ್ಮದಿಯಿಂದಿದ್ದ ಗೋಪಾಲ. ಸದಾ ನಂದನ ಬಗೆಗೆ ಅವನಲ್ಲಿ ಬಹಳ ಅಭಿಮಾನವಿತ್ತು.

" ಬೆಳಗಾವಿಯಿಂದ ಎಂದು ಬಂದೆ ಸದಾನಂದಾ ?" ಎಂದು ಗೋಪಾಲ ಮಾತಿಗಾರಂಭಿಸಿದ.

" ನಾಲ್ಕೈದು ದಿನವಾಯಿತಲ್ಲ ಬಂದು !"

" ಹೋದ ಕಾರ್ಯ ಹಣ್ಣಾಯಿತೇ ?"

ಸದಾನಂದ ವಧುವನ್ನು ನೋಡಲು ಹೋದ ವಿಷಯ ಗೋಪಾಲನಿಗೂ ಗೊತ್ತಿದ್ದಿತು.

ಅವನಿಗೆ ಯಾವ ಉತ್ತರವನ್ನೂ ಕೊಡದೆ ಸದಾನಂದ ಮೌನವಾಗಿ ಹಾದಿ ತುಳಿಯತೊಡಗಿದ. ಗುಡ್ಡವನ್ನೇರಿ ಬಂದು, ಗುಡಿಯೆದುರಿನ ಕಲ್ಲು ಬಂಡೆಯೊಂದರ ಮೇಲೆ ಕುಳಿತುಕೊಂಡುದಾಯಿತು. ಸಂಜೆಯ ಗಾಳಿ ತಂಪಾಗಿ ಹಿತಕರವಾಗಿ ಬೀಸುತ್ತಿತ್ತು.

" ಏನಾಯಿತು ಬೆಳಗಾವಿಯಲ್ಲಿ ?" ಗೋಪಾಲ ಮತ್ತೆ ಮಾತಿ ಗಾರಂಭಿಸಿದ.

“ಏನೂ ಆಗಲಿಲ್ಲ,” ಎಂದ ಸದಾನಂದ.

“ಅಂದರೆ?”

“ಅದಂರೆ....ಹೋದೆ, ನೋಡಿದೆ, ಬಂದೆ.”

“ಮದುವೆಯೂ ನಿಶ್ಚಯವಾಯಿತೇ?”

“ಇನ್ನೂ ಇಲ್ಲ.”

“ಯಾಕೆ?”

“ಯಾಕೆಂದರೇನು ಹೇಳಲಿ? ಈಗಲೇ ಮದುವೆಯಾಗುವದು ನನಗಿಷ್ಟವಿಲ್ಲ.”

“ಅರೇ ಹುಚ್ಚಾ! ಮದುವೆಯಿಷ್ಟವಿಲ್ಲ ಅಂದರೇನು? ನಾನೂ ನಿನ್ನ ಓರಗೆಯವನೇ ಅಲ್ಲವೆ? ಆಗಲೇ ಒಂದು ಮಗುವಿನ ತಂದೆಯಾಗಿ ಬಿಟ್ಟಿನಲ್ಲಾ! ನಿನಗೆ ಮಾತ್ರ....”

“ಹಾಗಲ್ಲ ಗೋಪಣ್ಣಾ. ನಾನಿನ್ನೂ ಓದಬೇಕು, ಕೆಲಸ ಹಿಡಿಯ ಬೇಕು....”

“ಓದುವುದಕ್ಕೇನಂತೆ? ಮದುವೆಯಾಗಿಯೂ ಓದುತ್ತಿರುವವರೆಷ್ಟು ಜನರಿಲ್ಲ ಸದಾನಂದಾ?”

ಐದಾರು ನಿಮಿಷಗಳವರೆಗೆ ಮಾತನಾಡದೆ ಸುಮ್ಮನೆ ಕುಳಿತಿದ್ದು ಅನಂತರ ದನಿಯೆತ್ತಿ ಹೇಳಿದ ಸದಾನಂದ:

“ನನ್ನ ಮದುವೆಯ ಮಾತು ಹಾಗಿರಲಿ. ಒಂದು ಕತೆ ಹೇಳುತ್ತೇನೆ ಕೇಳು.”

ಗೋಪಾಲ ಸಂತೋಷದಿಂದ ಕಣ್ಣರಳಿಸಿ ಕುಳಿತುಕೊಂಡ. ಸದಾನಂದ ಹೇಳತೊಡಗಿದ:

“ಒಂದೂರಿನಲ್ಲಿ ಒಬ್ಬ ಹುಡುಗಿಯಿದ್ದಳು. ಸಾಕಷ್ಟು ಚೆಲುವೆ. ಸ್ವಭಾವವೂ ಒಳ್ಳೆಯದೇ. ಹದಿನೇಳು ವರ್ಷ ವಯಸ್ಸಾದರೂ ಇನ್ನೂ ಮದುವೆ ಯಾಗಿರಲಿಲ್ಲ. ಅವಳ ಮನೆಯವರು ಬಹಳ ಬಡವರು. ವರದಕ್ಷಿಣೆ ತೆತ್ತು ಅವಳಿಗೆ ಮದುವೆ ಮಾಡುವದು ಸಾಧ್ಯವಿರಲಿಲ್ಲ....”

“ಅವರು ನಮ್ಮ ಜಾತಿಯವರೇನು?” ಎಂದು ಕೇಳಿದ ಗೋಪಾಲ.

“ಹೌದು ಅವರು ಬ್ರಾಹ್ಮಣರು....ವರಗಳ ಮುಂದೆ ಮುಖ ತೋರಿಸಿ

ತೋರಿಸಿ ಆ ಹುಡುಗಿಗೆ ಬಲು ಬೇಸರವಾಗಿತ್ತು. ಆ ಸಮಯದಲ್ಲೇ ಒಬ್ಬ ಹುಡುಗನಿಗೂ ಅವಳಿಗೂ ಪರಿಚಯವಾಯಿತು. ಪರಿಚಯ ಸ್ನೇಹವಾಗಿ ಸ್ನೇಹ ಪ್ರೇಮವಾಯಿತು. ಆದರೆ ಅವರ ಮದುವೆಯಾಗುವದು ಸಾಧ್ಯವಿರಲಿಲ್ಲ...."

"ಆ ಹುಡುಗ ಬೇರೆ ಜಾತಿಯವನೇನು ?"

"ಹೌದು. ಬೇರೆ ಜಾತಿಯವ. ಅವಳನ್ನು ಮದುವೆಯಾಗುವುದೂ ಸಾಧ್ಯವಿರಲಿಲ್ಲ. ಅವಳನ್ನು ಮರೆತು ಇನ್ನೊಬ್ಬಳನ್ನು ಮದುವೆಯಾಗುವದೂ ಸಾಧ್ಯವಿರಲಿಲ್ಲ. ಅವಳಿಗೂ ಹಾಗೇಯೇ. ಅವಳಿಗಿಂತ ಇಪ್ಪತ್ತೈದು ವರ್ಷಗಳಿಗೆ ಹಿರಿಯನಾದ ವಿಧುರನೊಬ್ಬ ಅವಳನ್ನು ಮದುವೆಯಾಗಲು ಸಿದ್ಧನಿದ್ದ. ಆದರೆ ತನ್ನ ಪ್ರಿಯತಮನನ್ನು ಮರೆತು ಅವಳು ಆ ವಿಧುರನನ್ನು ಕಟ್ಟಿಕೊಳ್ಳಲು ಸಮ್ಮತಿಸಲಿಲ್ಲ....ಮುಂದೆ ಈ ಕತೆ ಹ್ಯಾಗೆ ಮುಗಿಯಿತು ಹೇಳು ನೋಡೋಣ ?"

"ಗೊತ್ತೇ ಇದೆಯಲ್ಲ! ಮೊನ್ನೆ ಸಂಯುಕ್ತ ಕರ್ನಾಟಕದಲ್ಲಿ ಒಂದು ಸುದ್ದಿ ಬಂದಿತ್ತು ಇಂಥಾ ಪ್ರೇಮದ್ದೇ. ಮದುವೆಯಾಗಲು ಸಾಧ್ಯವಿರಲಿಲ್ಲವೆಂತ ಆ ಹುಡುಗ ಹುಡುಗಿ ಇಬ್ಬರೂ ಕೆರೆಗೆ ಹಾರಿಕೊಂಡು ಸತ್ತುಹೋದರಂತಲ್ಲ!"

ಪತ್ರಿಕೆಯಲ್ಲಿ ಬಂದಿದ್ದ ಆ ವರದಿಯನ್ನು ಸದಾನಂದನೂ ಓದಿದ್ದ. ಆತ್ಮಹತ್ಯೆ ಮಾಡಿಕೊಂಡ ಆ ಪ್ರಣಯಿಗಳು ತಮ್ಮ ಶರೀರಗಳನ್ನು ಹಗ್ಗದಿಂದ ಬಿಗಿದು ಕೂಡಿಸಿಕೊಂಡು ಎಂದೆಂದೂ ಅಗಲದಂತಿರಬೇಕೆಂದು ಒಂದಾಗಿ ಕೆರೆಗೆ ಹಾರಿದ ಆ ಭೀಕರ ದೃಶ್ಯವನ್ನು ಕಣ್ಣೆದುರು ತಂದುಕೊಂಡಾಗ ಸದಾನಂದನ ಎದೆ ಕಂಪಿಸಿತು.

"ಬ್ರಾಹ್ಮಣರ ಹುಡುಗಿಯನ್ನು ಬ್ರಾಹ್ಮಣೇತರ ಹುಡುಗನೊಬ್ಬ ಪ್ರೀತಿಸುವದು ತಪ್ಪು ಅನ್ನುತ್ತೀಯಾ ಗೋಪಾಲಾ ?"

ಗೋಪಾಲ ತಕ್ಕಮಟ್ಟಿಗೆ ಓದಿಕೊಂಡ ಸುಸಂಸ್ಕೃತ ಯುವಕ. ನಗರಗಳಲ್ಲಿನ ತರುಣರಷ್ಟು ಪುರೋಗಾಮಿಯಲ್ಲವಾದರೂ ಅವನು ಸಂಕುಚಿತ ಮನಸ್ಸಿನ ಧರ್ಮಾಂಧನೂ ಆಗಿರಲಿಲ್ಲ. ಹತ್ತು ಊರು ಸುತ್ತಿ ನೂರು ಜನರೊಂದಿಗೆ ವ್ಯವಹರಿಸಿ ಸಾಕಷ್ಟು ಲೋಕಾನುಭವವನ್ನೂ ಸಂಪಾದಿಸಿಕೊಂಡಿದ್ದ. ಗಂಡು ಹೆಣ್ಣಿನ ಪ್ರೇಮ ಜಾತಿ ಮತಗಳನ್ನು ಗಮನಿಸುವುದಿಲ್ಲವೆಂಬ ಅಂಶ ಅವನಿಗೆ ಚೆನ್ನಾಗಿ ಗೊತ್ತಿದ್ದಿತು.

"ತಪ್ಪು ಅಂತ ಅನ್ನುವದು ಹ್ಯಾಗೆ ಸದಾನಂದಾ? ಇಂಥ ಎಷ್ಟೋ ಘಟನೆ ನಡೆಯುತ್ತಲೇ ಇವೆಯಲ್ಲ ನಮ್ಮ ಕಣ್ಣೆದುರಿಗೇ!"

"ಇಂಥಾ ಪ್ರೇಮಕ್ಕೆಲ್ಲಾ ಅಂಥಾ ಕೊನೆಯೇ ಅಂತ ಕಾಣುತ್ತದೆ?"

"ಹೌದು. ಇಂದಿನ ಪರಿಸ್ಥಿತಿಯಲ್ಲಿ ಅದೂ ಸಹಜ."

ಮತ್ತೆ ಸದಾನಂದನ ಎದೆ ನಡುಗಿತು. ತಮ್ಮ ಪ್ರೇಮಕ್ಕೂ ಅದೇ ಬಗೆಯ ಅಂತ್ಯ ಕಾದಿದೆಯೊ ಏನೊ....

ಗೋಪಾಲ ಹಠಾತ್ತಾಗಿ ಕತ್ತೆತ್ತಿ ಸದಾನಂದನ ಉದಾಸ ಮುಖಮುದ್ರೆಯನ್ನು ದಿಟ್ಟಿಸುತ್ತ ಕೇಳಿದ:

"ಅಲ್ಲ ಸದಾನಂದಾ, ನೀನೇ ಎಲ್ಲಿಯಾದರೂ ಇಂಥ ಪ್ರೇಮಕ್ಕೆ...."

ಸದಾನಂದ ಕತ್ತು ಕೊಡಹಿ, ಶುಷ್ಕನಗೆ ಬೀರುತ್ತ ಮೇಲಕ್ಕೆದ್ದ. ಗೋಪಾಲನ ಪ್ರಶ್ನೆಗೆ ಅವನಿಂದ ಉತ್ತರ ಬರಲಿಲ್ಲ.

## ೨೨

ತನ್ನ ಬಗೆಗೆ ಕೊಟಬಾಗಿಯ ಭಾವನೆಗಳಲ್ಲಿ ಬದಲಾವಣೆಯಾಗಿದ್ದುದನ್ನು ಸದಾನಂದ ಮೊತ್ತಮೊದಲ ಬಾರಿ ಕಂಡುಕೊಂಡದ್ದು, ದೀಪಾವಳಿ ರಜೆ ಮುಗಿದ ತರುವಾಯ ಆತ ನಗರಕ್ಕೆ ಮರಳಿದಾಗ.

ಮೊದಲಿನಂತೆ ಕೊಟಬಾಗಿ ಅವನನ್ನು ಸಂತೋಷದಿಂದ ಬರಮಾಡಿ ಕೊಳ್ಳಲಿಲ್ಲ. ಸದಾನಂದ ಕೇಳಿದ ಪ್ರಶ್ನೆಗಳಿಗೆ ಬೇಸರದಿಂದ ಉತ್ತರವಿತ್ತು ಸುಮ್ಮನಾದ. ಈ ಆಸಾಮಿ ಹೀಗಾಗಲು ಕಾರಣವೇನು? ಎಂದು ಸದಾನಂದನಿಗೆ ಪರಮಾಶ್ಚರ್ಯವಾಯಿತು.

ಸಾಯಂಕಾಲ ಶಾಂತಾ ಸಿಕ್ಕಿದಾಗ ಅವನ ಆಶ್ಚರ್ಯವಿನ್ನೂ ಅಧಿಕ ವಾಯಿತು. ಅವನು ಊರಿಗೆ ಹೋದ ಸಮಯದಲ್ಲಿ ನಗರದಲ್ಲಿ ನಡೆದುದೆಲ್ಲವನ್ನೂ ವಿವರಿಸುತ್ತಾ ಅವಳು ಹೇಳಿದಳು :

" ಕೊಟಬಾಗಿ ದೇಶಪಾಂಡೆ ಸೇರಿ ಇನ್ನೊಂದು ಸಂಘ ಸ್ಥಾಪಿಸಿದ್ದಾರೆ, ದೀವಳಿಗೆಯ ದಿವಸ."

" ಎಂಥ ಸಂಘ ?"

" ಕಾವ್ಯ ಕಲಾ ಸಂಘ ಅಂತ. ಕಾವ್ಯಕೂಟಕ್ಕೆ ರೈವಲ್. ಇಂಥದನ್ನೇ ನಾವರೂ ಇವರು ಮಾಡಬಹುದೆಂದು ನನಗೆ ಬಹಳ ದಿನಗಳ ಹಿಂದೇ ಅನ್ನಿಸಿತ್ತು. ದೇಶಪಾಂಡೆಗೆ ಮೊದಲಿನಿಂದಲೂ ನಿಮ್ಮನ್ನು ಕಂಡರಾಗದು. ಕೊಟಬಾಗಿಯ ಮನಸ್ಸನ್ನೂ ಅವನೇ ಕೆಡಿಸಿರಬೇಕು."

“ ನಾನೇನು ಮಾಡಿದ್ದೇನೆ ದೇಶಪಾಂಡೆಗೆ ?”

“ ಏನೂ ಮಾಡಬೇಕಾಗಿಲ್ಲ. ಅವನು ಭಯಂಕರ ಜಾತೀಯ ವಾದಿ. ಬ್ರಾಹ್ಮಣರಲ್ಲದವರನ್ನು ಕಂಡರೆ ಉರಿದು ಬೀಳುತ್ತಾನೆ.”

“ ಕೊಟಬಾಗಿಯೇನೂ ಅಂಥವನಲ್ಲವಲ್ಲ ?”

“ ಅಲ್ಲ, ನಿಜ. ದೇಶಪಾಂಡೆ ಏನೇನೋ ಹೇಳಿ ಅವನ ತಲೆಯನ್ನೂ ಕೆಡಿಸಿರಬೇಕು. ದೀಪಾವಳಿಗೆಯ ದಿವಸ ಪ್ರಕಾಶದ ಕೇಶವರಾಯರ ಅಧ್ಯಕ್ಷತೆಯಲ್ಲಿ ಸಂಘವನ್ನು ಸ್ಥಾಪಿಸಿಬಿಟ್ಟರು. ಪತ್ರಿಕೆಗಳಲ್ಲಿ ಬಂದಿತ್ತಲ್ಲ. ನೀವು ಓದಲಿಲ್ಲವೆ ?”

“ ಇಲ್ಲ. ಬಹಳ ದಿನಗಳಿಂದ ದಿನಪತ್ರಿಕೆ ನೋಡಲು ಸಿಕ್ಕಿಲ್ಲ. ನಿಮ್ಮನ್ನೂ ಆಮಂತ್ರಿಸಿದ್ದರೇನು ?”

“ ಹೌದು. ಲೀಲಾ, ಕುಮುದ, ವೆಂಕಣ್ಣ ಎಲ್ಲರನ್ನೂ ಕರೆದಿದ್ದರು. ವೆಂಕಣ್ಣನೊಬ್ಬ ಹೋಗಿದ್ದ. ಅವನೂ ಈಚೆಗೆ ಒಂದು ತರಹ ಆಗುತಾ ಇದಾನೆ.”

ಲೀಲಳ ಮನೆಯಲ್ಲಿ ಕುಳಿತು ಮಾತನಾಡುತ್ತಿದ್ದರವರು. ಅದುವರೆಗೆ ಮೌನವಾಗಿದ್ದ ಲೀಲಾ ದನಿಯೆತ್ತಿ ಹೇಳಿದಳು :

“ ಬಹಳ ಮಾಡಿ ವೆಂಕಟೇಶನೂ ಅವರ ಗುಂಪಿಗೇ ಸೇರಿಕೊಳ್ಳಬಹುದು.”

“ ಹೌದೇ ?”

“ ಹಾಗೇ ಕಾಣುತ್ತದೆ. ಅವನ ಹೋಳಿಗೆಯೊಳಗೂ ತುಪ್ಪ ಬೀಳಬೇಕಲ್ಲ ಪಾಪ ! ಸುಭೇದಾರರ ಸರಲೆಯನ್ನು ಅವನಿಗೆ ಕೊಡುವ ಮಾತು ನಡೆದಿವೆ. ಅವರು ಗೊತ್ತಿರಬಹುದಲ್ಲ ನಿಮಗೆ ! ಬಹಳ ಹಳೆಯ ಕಾಲದ ಮಂದಿ. ಬ್ರಾಹ್ಮಣ್ಯದ ಕಟ್ಟರ್ ಅಭಿಮಾನಿಗಳು. ಅಂಥವರ ಅಳಿಯನಾಗುವ ವೆಂಕಟೇಶನೂ ಅವರ ಹಾಗೇ ಆಗಬೇಕಾದದ್ದು ಸಹಜ ಅಲ್ಲವೇನು ?”

“ ಹೌದು, ಹೌದು,” ಎಂದ ಸದಾನಂದ. “ ಈ ಸರಲಾ ಸುಶಿಕ್ಷಿತಳೇನು ಲೀಲಾ ?”

“ ಮ್ಯಾಟ್ರಿಕ್ ಆಗಿದೆ. ಈಗ ಮನೆಯಲ್ಲೇ ಇದ್ದಾಳೆ. ಸರಿಯಾದ ವರ ಸಿಕ್ಕಿರಲಿಲ್ಲವಾದ್ದರಿಂದ ಇನ್ನೂ ಮದುವೆಯಾಗಿರಲಿಲ್ಲ. ಸರಿ. ವೆಂಕಟೇಶನನ್ನು ಬಲೆಗೆ ಹಾಕಿಕೊಂಡುಬಿಟ್ಟಿದ್ದಾರೆ. ಎಂ.ಎ. ವರೆಗೂ ಓದಿಸುವದಲ್ಲದೆ ಪರ ದೇಶಕ್ಕೂ ಕಳಿಸುವದಾಗಿ ಹೇಳುತ್ತಿದ್ದಾರಂತೆ. ಈ ವೆಂಕಟೇಶ ಅವರ ತಾಳಕ್ಕೆ ಸರಿಯಾಗಿ ಕುಣಿಯುತ್ತಿದ್ದಾನೆ.”

ವ್ಯಸನದಿಂದ ಜಡವಾದ ದನಿಯಲ್ಲಿ ಸದಾನಂದನೆಂದ :

" ಹಾಗಾದರೆ ಇನ್ನು ಮುಂದೆ ಕಾವ್ಯಕೂಟದ ಚಟುವಟಿಕೆ ನಿಂತ ಹಾಗೆ ಅನ್ನಿರಿ."

" ಅದೇಕೆ ನಿಲ್ಲಬೇಕು ? ಮೂರು ನಾಲ್ಕು ಜನ ಹೋದ ಮಾತ್ರಕ್ಕೆ ಪ್ರಪಂಚ ಮುಳುಗುವದಿಲ್ಲ. ನಾವೆಲ್ಲ ಇಲ್ಲವೇನು ?" ಎಂದಳು ಲೀಲಾ.

" ಆದರೂ ಮೊದಲಿನ ಚಂದ ಬರುವದಿಲ್ಲ ಲೀಲಾ."

" ಅದೂ ನಿಜವೆ. ಈಗಾಗಲೆ ಅವರಿಬ್ಬರೂ ಸೇರಿ ಕೂಟದ ಸದಸ್ಯರನ್ನೆಲ್ಲಾ ತಮ್ಮ ಸಂಘಕ್ಕೆ ಸೇರಿಸುತ್ತಿದ್ದಾರೆ. ಕಾವ್ಯಕೂಟ ಅಂದರೆ ಶಿವದಾರದವರದು, ಕಾವ್ಯಕಲಾ ಸಂಘ ಜನಿವಾರದವರದು ಅಂತ ಬಹಿರಂಗದಲ್ಲೇ ಹೇಳುತ್ತಿದ್ದಾರೆ," ಎಂದಳು ಶಾಂತಾ.

" ಕೂಟದಲ್ಲಿ ಎಲ್ಲಾ ಜಾತಿಯ ಸದಸ್ಯರೂ ಇರುವರಲ್ಲ !"

" ಇದ್ದರೂ ಅದರ ಅಧಿಕಾರವೆಲ್ಲಾ ನರಗುಂದನ ಕೈಯಲ್ಲಿದೆಯಲ್ಲ. ಶಿವದಾರದವರೂ ಗಡ್ತದವರೂ ಯಾವಾಗಲೂ ಒಂದು ಗುಂಪು – ಅನ್ನುತ್ತಾನಂತೆ ದೇಶಪಾಂಡೆ."

ರಾತ್ರೆ ಸದಾನಂದ ಆ ಮಾತು ಎತ್ತುತ್ತಲೂ ಕೊಟಬಾಗಿ ಹೇಳಿದ :

" ಕಾವ್ಯಕೂಟದ ಹೆಸರಿನಲ್ಲಿ ನೀವೊಬ್ಬರೇ ಸ್ವಾರ್ಥ ಸಾಧಿಸಿಕೊಳ್ಳ ಹತ್ತಿದ್ದರಿಂದ ನಾವು ಬೇರೆ ಸಂಘ ಮಾಡಬೇಕಾಗಿ ಬಂತು."

ಸದಾನಂದನ ಹೃದಯಕ್ಕೆ ಬಲವಾದ ಏಟು ಬಿದ್ದಂತಾಯಿತು. ನೊಂದ ದನಿಯಲ್ಲಿ ಅವನು ಕೇಳಿದ :

" ನನ್ನ ಸ್ವಾರ್ಥ ?"

" ಕೂಟದ ಹೆಸರಲ್ಲಿ ನಿಮಗೊಬ್ಬರಿಗೆ ಕೀರ್ತಿ ಬಂತು. ನಿಮ್ಮದೊಂದು ಪುಸ್ತಕ ಪ್ರಕಟವಾಗಲು ಶಕ್ಯವಾಯಿತು. ನಾವೆಲ್ಲಾ ಇದ್ದಲ್ಲೇ ಇದ್ದೇವೆ. ನನ್ನದೂ ಒಂದು ಪುಸ್ತಕ ಪ್ರಕಟಿಸಬೇಕೆಂದು ಯಾವ ಪ್ರಕಾಶಕರಿಗಾದರೂ ಹೇಳಿದಿರಾ ನೀವು ?"

ಸದಾನಂದ ಹತಬುದ್ಧನಾಗಿ ತೆಪ್ಪಗೆ ಕುಳಿತುಕೊಂಡ.

" ಕೂಟದ ಹೆಸರಲ್ಲಿ ಮುಸಲರನ್ನೂ ಕಮ್ಯೂನಿಸ್ಟರನ್ನೂ ಅಟ್ಟಕ್ಕೇರಿಸಿ

ಮೆರೆಸುತ್ತೀದ್ದಿರಿ. ನಮ್ಮಂಥವರ ನೆನಪು ನಿಮಗಿಲ್ಲ. ನಾವು ಅಷ್ಟು ಚಿಲ್ಲರೆ ಆದೆವಲ್ಲವೇನು ನಿಮ್ಮ ಕಣ್ಣಲ್ಲಿ! ಕಡೆಗೂ ನಿಮ್ಮ ಜಾತಿಯ ಗುಣವನ್ನು ನೀವು ಬಿಡಲಿಲ್ಲ," ಎಂದು ಕಟುದನಿಯಲ್ಲಿ ನುಡಿದ ಕೊಟಬಾಗಿ.

ಆ ಕೊನೆಯ ನುಡಿ ಸದಾನಂದನ ಹೃದಯವನ್ನು ಸೂಜಿಯಂತೆ ಇರಿಯಿತು. ಅಂಥ ಮಾತು ಕೊಟಬಾಗಿಯ ಬಾಯಿಂದ ಬರಬಹುದೆಂದು ಅವನೆಂದೂ ಭಾವಿಸಿರಲಿಲ್ಲ. ಅದರಲ್ಲೂ – ತನ್ನಂಥವನನ್ನು ದ್ವೇಶಿಸಿ ಆ ಮಾತು! ಸದಾನಂದನ ಕಣ್ಣು ತೇವಗೊಂಡಿತು.

"ನಾನು ಜಾತೀಯವಾದಿಯಲ್ಲ ಅನ್ನುವದು ನಿಮಗೇನು ಗೊತ್ತಿಲ್ಲವೇ ಕೊಟಬಾಗಿ? ನಾನು ಬೇರೆ, ನೀವು ಬೇರೆ, ನನ್ನ ಕವಿತೆ ಬೇರೆ, ನಿಮ್ಮ ಕವಿತೆ ಬೇರೆ ಅಂತ ನಾನೆಂದೂ ತಿಳಿದುಕೊಂಡಿಲ್ಲ. ಜಾತಿಯ ಭಾವನೆ ನನ್ನ ಕನಸಿನಲ್ಲೂ ಕೂಡ ಬಂದಿಲ್ಲ. ಆದರೂ ನೀವು ಇಂಥ ಮಾತಾಡುತ್ತಿದ್ದೀರಲ್ಲಾ!"

"ಸಾಕು ಸಾಕು. ಸೋಗಿನ ಮಾತು ಸಾಕು. ಬಾಯಲ್ಲಿ ಸಕ್ಕರೆ, ಎದೆಯಲ್ಲಿ ವಿಷ. ನೀವು ಶಿವದಾರದ ಮಂದಿ ಎಲ್ಲಾ ಅಂಥವರೇ – ಒಳಗೊಳಗೇ ಕತ್ತಿ ಮಸೆಯುವವರು. ಎಲ್ಲಾ ಸಾರ್ವಜನಿಕ ಕ್ಷೇತ್ರಗಳಿಂದ ಬ್ರಾಹ್ಮಣರನ್ನು ದಬ್ಬಿಬಿಟ್ಟು ನೀವೇ ಮುಖಂಡರಾಗಲು ಏನುಬೇಕೋ ಎಲ್ಲಾ ಮಾಡುತ್ತಿದ್ದೀರಿ. ಇದುವರೆಗೆ ಸಾಹಿತ್ಯ ಕ್ಷೇತ್ರದಲ್ಲಾದರೂ ನಿಮ್ಮ ಕಾಟವಿರಲಿಲ್ಲ. ಈಗ ಇಲ್ಲಿಯೂ ತುಂಬಿಕೊಳ್ಳುತ್ತಿದ್ದೀರಿ. ನೀವೇ ಕವಿಗಳು, ನೀವೇ ಕತೆಗಾರರು, ನೀವೇ ಕಾದಂಬರಿಕಾರರು.... ನಿಮ್ಮ ಹಾವಳಿಯನ್ನು ತಡೆಯದಿದ್ದರೆ ನಮಗೆ ಉಳಿಗಾಲ ವಿಲ್ಲ. ನಮ್ಮ ಪುಣ್ಯಕ್ಕೆ ವಿಮರ್ಶಕರಾದರೂ ನಮ್ಮವರೇ ಇದ್ದಾರೆ. ಕೆಲ ದಿನ ತಡೆಯಿರಿ. ಅವರೆಲ್ಲಾ ಕೂಡಿ ನಿಮ್ಮನ್ನು ಮಟ್ಟಹಾಕುತ್ತಾರೆ...."

ಕೊಟಬಾಗಿಯ ಬಿರುನುಡಿಗಳನ್ನು ಕೇಳಿ ಸಹಿಸಿಕೊಳ್ಳಲಾಗದೆ ಸದಾನಂದ ಎದ್ದು ನಿಂತ. "ನಮ್ಮ ಬಗ್ಗೆ ನೀವು ಬಹಳ ತಪ್ಪು ಕಲ್ಪನೆ ಮಾಡಿಕೊಂಡಿದ್ದೀರಿ ಕೊಟಬಾಗಿ. ಏನು ಹೇಳಿದರೆ ನಿಮಗೆ ಮನವರಿಕೆ ಯಾಗುವದೋ!"

"ಏನು ಹೇಳಿದರೂ ಆಗುವದಿಲ್ಲ. ಅಲ್ಲಿ ಸ್ಕೂಲಿನಲ್ಲಿ ಆ ಅಯ್ಯನ ಕಾಟ. ಇಲ್ಲಿ ಖೋಲಿಯಲ್ಲಿ....ಹೂಂ.... ಸಾಕುಸಾಕಾಗಿ ಹೋಗಿದೆ ನನಗೆ. ನಿಮ್ಮಿಂದಾಗಿ ನನ್ನ ಮೇಲೂ ಪೋಲೀಸರ ಕಣ್ಣು ಬೀಳಬಹುದು. ಆ ಕಮ್ಯೂನಿಸ್ಟ ಗುಂಡಾ

ಗಳೆಲ್ಲಾ ನಿಮ್ಮ ಗೆಳೆಯರು....ಛೆ....ಛೆ....ನಾನಿನ್ನು ಬೇರೆ ರೂಮು ನೋಡಿ ಕೊಳ್ಳಬೇಕು."

ಎದ್ದು ನಿಂತಿದ್ದ ಸದಾನಂದ ಮತ್ತೆ ಕುಳಿತುಕೊಂಡು ಹೇಳಿದ:

"ನಿಮಗೆ ಇಷ್ಟು ಬೇಸರವಾಗಿದೆಯೆಂದು ನನಗೆ ಗೊತ್ತಿರಲಿಲ್ಲ ಕೊಟಬಾಗಿ. ನೀವ್ಯಾಕೆ ರೂಮು ಬಿಡಬೇಕು? ನಾನೇ ಬಿಟ್ಟು ಹೋಗುತ್ತೇನೆ."

"ಅಷ್ಟು ಮಾಡಿದರೆ ಉಪಕಾರವಾಗುತ್ತದೆ," ಎಂದು ಅಣಕದ ನಗೆ ಯೊಡನೆ ನುಡಿದ ಕೊಟಬಾಗಿ.

ಅವನು ಹಾಗೆ ಸ್ಪಷ್ಟವಾಗಿ ಹೇಳಿದ ಬಳಿಕ ಅಲ್ಲಿ ನಿಲ್ಲುವಂತಿರಲಿಲ್ಲ. ಸದಾನಂದ ಬೇರೊಂದು ಸ್ಥಳವನ್ನು ಹುಡುಕಬೇಕಾಯಿತು. ಅವನ ವರ್ಗ ದಲ್ಲಿಯೆ ಓದುತ್ತಿದ್ದ ಪರಸಣ್ಣವರ್ ಎಂಬ ವಿದ್ಯಾರ್ಥಿಯ ಕೊಟಡಿ ಸಾಕಷ್ಟು ದೊಡ್ಡದಾಗಿದ್ದು ಇನ್ನೊಬ್ಬ ವಿದ್ಯಾರ್ಥಿಗೆ ಸ್ಥಳಾನುಕೂಲವಾಗುವಂತಿತ್ತು. ಪರಸಣ್ಣವರ್ ಸಿರಿವಂತರ ಹುಡುಗ. ಕಾಲೇಜಿನಲ್ಲಿ ಒಳ್ಳೆಯ ಆಟಗಾರನೆಂದು ಹೆಸರು ಹೊಂದಿದ್ದವನು. ವ್ಯಾಸಂಗದಲ್ಲಿ ಅವನು ಮುಂದುವರೆದಿರಲಿಲ್ಲವಾದರೂ ಬುದ್ಧಿವಂತರ ಬಗೆಗೆ ಅವನಲ್ಲಿ ಆದರವಿರದಿರಲಿಲ್ಲ. ಸದಾನಂದನ ಪ್ರತಿಭೆಯನ್ನು ಕಂಡು ಮೆಚ್ಚಿಕೊಂಡಿದ್ದ ವಿದ್ಯಾರ್ಥಿಗಳಲ್ಲಿ ಅವನೂ ಒಬ್ಬನಾಗಿದ್ದ. ಸದಾನಂದ ಜಾಗ ಹುಡುಕುತ್ತಿದ್ದ ವಿಚಾರ ತಿಳಿದಾಗ ಪರಸಣ್ಣವರ್ ತಾನಾಗಿಯೆ ತನ್ನ ಕೊಟಡಿಗೆ ಅವನನ್ನು ಆಹ್ವಾನಿಸಿದ. ಅಂಥ ಸಿರಿವಂತ ವಿದ್ಯಾರ್ಥಿಯೊಡನೆ ವಾಸಿಸಲು ಸದಾನಂದನಿಗೆ ಕೊಂಚ ಸಂಕೋಚವೆನ್ನಿಸಿತಾದರೂ ಆ ಸಮಯದಲ್ಲಿ ಬೇರೆ ಕಡೆಗೆ ಕೊಟಡಿಗಳು ಸಿಗುವಂತಿರಲಿಲ್ಲವಾದುದರಿಂದ ಆತ ಪರಸಣ್ಣವರನ ಆಹ್ವಾನವನ್ನೊಪ್ಪಿಕೊಳ್ಳಲೇಬೇಕಾಗಿ ಬಂದಿತು. ಕಾಲೇಜಿನ ಹಿಂಭಾಗದಲ್ಲಿ ನಿಸರ್ಗ ಸೌಂದರ್ಯದಿಂದೊಡಗೂಡಿದ ರಮ್ಯ ತಾಣದಲ್ಲಿ ಒಂದು ಬಂಗಲೆಗೆ ಹೊಂದಿಕೊಂಡು ಆ ಕೊಟಡಿಯಿತ್ತು. ಬಂಗಲೆಯಲ್ಲಿ ಕ್ರೈಸ್ತಮತೀಯರೊಬ್ಬರು ವಾಸವಾಗಿದ್ದರು. ಪರಸಣ್ಣವರನ ಕೊಟಡಿಯಲ್ಲಿ ಎರಡು ಭಾಗಗಳಿದ್ದು ಚಿಕ್ಕ ದೊಂದು ಬಚ್ಚಲೂ ಇತ್ತು. ಸಮೀಪದಲ್ಲಿಯೆ ಬಾವಿ. ಸುತ್ತಮುತ್ತ ಜನಗಳ ಗದ್ದಲವೂ ಇರಲಿಲ್ಲ....ಎಲ್ಲ ಅಂಶಗಳಲ್ಲೂ ಅದು ವಿದ್ಯಾರ್ಥಿಗಳಿಗೆ ಅತ್ಯಂತ ಅನುಕೂಲವಾದ ಸ್ಥಳವಾಗಿದ್ದಿತಾದರೂ ಶಾಂತಳ ನಿಕಟ ಸಹವಾಸವನ್ನು ಕಳೆದುಕೊಂಡಿದ್ದ ಸದಾನಂದನಿಗೆ ಈ ಹೊಸ ಜಾಗದಲ್ಲಿ ಮನಸ್ಸು ಮುದುಡಿ

ಕೊಂಡು ಅವನು ಹಿಂದೆಂದೂ ಅನುಭವಿಸದಿದ್ದ ವಿಷಣ್ಣ ಉದಾಸೀನತೆ ಅವನನ್ನು ಮುತ್ತಿಕೊಂಡಿತು.

ದಿನಗಳುರುಳಿದ ಹಾಗೆ ಆ ಕೊಟಡಿಯಲ್ಲಿ ಕುಳಿತು ಅಭ್ಯಾಸದಲ್ಲಿ ಮನಸ್ಸು ತೊಡಗಿಸುವುದೂ ಅಸಾಧ್ಯವಾಗತೊಡಗಿತು. ಅಭ್ಯಾಸಕ್ಕೆ ಅವಶ್ಯವಾದ ನೀರವತೆ, ಶಾಂತತೆ ಕೊಂಚವೂ ಇರುತ್ತಿರಲಿಲ್ಲ ಆ ಕೊಟಡಿಯಲ್ಲಿ. ಯಾವಾಗಲೂ ಯಾವುದಾದರೊಂದು ಗದ್ದಲ ಇದ್ದೇ ಇರುತ್ತಿತ್ತು. ಕ್ರಿಕೆಟ್ ಮತ್ತು ಬ್ಯಾಡ್ಮಿಂಟನ್ ಆಟಗಳಲ್ಲಿ ಪ್ರಾವಿಣ್ಯತೆ ಪಡೆದು ಜನಪ್ರಿಯನಾಗಿದ್ದ ಪರಸಣ್ಣವರನ ಗೆಳೆಯರ ಬಳಗ ಬಲು ದೊಡ್ಡದಾಗಿತ್ತು. ಗೆಳತಿಯರಿಗೂ ಕೊರತೆಯಿರಲಿಲ್ಲ. ಕ್ರಿಶ್ಚಿಯನ್ ಮತ್ತು ಸಾರಸ್ವತ ವಿದ್ಯಾರ್ಥಿನಿಯರ ಹಿಂಡಿಗೆ ಹಿಂಡೇ ಒಂದೊಂದು ಸಂಜೆ ಅವನ ಕೊಟಡಿಗೆ ನುಗ್ಗಿ ಬಿಸ್ಕತ್ತು, ಕೇಕು, ಲಾಡುಗಳ ಮೇಲೆ ದಾಳಿ ನಡಸುತ್ತಿತ್ತು. ಅಗ್ಗದ ಸಿನಿಮಾ ಹಾಡುಗಳನ್ನು ಹಾಡುತ್ತಾ ಅವರು ಹುಚ್ಚುಹುಚ್ಚಾಗಿ ಹರಟುತ್ತಿದ್ದರು. ಅವರೊಡನೆ ವಿದ್ಯಾರ್ಥಿಗಳೂ ಸೇರಿಕೊಂಡು ಅಲ್ಲಿ ದೊಡ್ಡದೊಂದು ಗಲಭೆಯನ್ನೆ ಎಬ್ಬಿಸುತ್ತಿದ್ದರು. ಇಂಥ ವಾತಾವರಣದಲ್ಲಿ ಅಭ್ಯಾಸ ಹೇಗಾದೀತು ? ಪರಸಣ್ಣವರನಂತೂ ಕೈಯಲ್ಲಿ ಪುಸ್ತಕವನ್ನೇ ಹಿಡಿಯುತ್ತಿರಲಿಲ್ಲ. ಪರೀಕ್ಷಕರಿಗೆ ಹಣ ಕೊಟ್ಟು ಪದವಿ ಪಡೆದುಕೊಳ್ಳುವ ಸಾಮರ್ಥ್ಯ ಅವನಲ್ಲಿತ್ತು. ಪದವಿ ದೊರೆಯದಿದ್ದರೂ ಅವನು ಚಿಂತಿಸಬೇಕಾದ ಅಗತ್ಯವಿರಲಿಲ್ಲ.

"ನೀವು ಸ್ವಲ್ಪ ಕೂಡಾ ಓದುವದಿಲ್ಲವಲ್ಲ ಪರಸಣ್ಣವರೆ ?" ಎಂದು ಸದಾನಂದನೊಂದು ಸಲ ಕೇಳಿದಾಗ ಪರಸಣ್ಣವರ ನಗುತ್ತ ಉತ್ತರವಿತ್ತ :

"ಓದಿ ತಲೆ ಕೆಡಿಸಿಕೊಳ್ಳುವದಕ್ಕಿಂತ ಆಟವಾಡುತ್ತ ಸುಖವಾಗಿರುವದೇ ನನಗೆ ಪ್ರೀತಿ."

ಪರಸಣ್ಣವರನ ಗೆಳೆಯರೋ ಗೆಳತಿಯರೋ ಕೊಟಡಿಗೆ ಬಂದಾಗಲೆಲ್ಲ ಸದಾನಂದನೂ ಅನಿವಾರ್ಯವಾಗಿ ಅವರೊಡನೆ ಸೇರಿ ಹರಟೆಯಲ್ಲೋ ತಮಾಷೆಯಲ್ಲೋ ಭಾಗವಹಿಸಬೇಕಾಗುತ್ತಿತ್ತು. ಅವರನ್ನು ಬಿಟ್ಟು ಅವನೊಬ್ಬನೇ ತನ್ನ ಪುಸ್ತಕದಲ್ಲಿ ಮುಖ ಮುಚ್ಚಿಕೊಂಡು ಕುಳಿತಿರುವಂತಿರಲಿಲ್ಲ. ಮೊದಲು ಕೆಲವು ದಿನ ಅವನಿಗೆ ಬಹಳ ಸಂಕೋಚವೆನ್ನಿಸಿದರೂ ಬರಬರುತ್ತಾ ಅದೆಲ್ಲವೂ ಅಭ್ಯಾಸವಾಗತೊಡಗಿತು. ಪರಸಣ್ಣವರನಂತೆ ಸದಾನಂದನೂ ಆ ಸಂತೋಷ

ಕೂಟಗಳಲ್ಲಿ ಆಸಕ್ತಿಯಿಂದ ಭಾಗವಹಿಸತೊಡಗಿದ. ಅಗ್ಗದ ಮಾತು ಹಾಡು ಮಾತ್ರ ಅವನಿಗೆ ಹಿಡಿಸುತ್ತಿರಲಿಲ್ಲ. ಅಂಥ ಸಂದರ್ಭಗಳಲ್ಲಿ ಆತ ತಟಸ್ಥನಾಗಿರು ತ್ತಿದ್ದುದನ್ನು ಗಮನಿಸಿದ ಪರಸಣ್ಣವರ್ ಒಂದು ಸಲ ಚೇಷ್ಟೆಯ ದನಿಯಲ್ಲಿ ಹೇಳಿದ :

“ನೀವು ಕವಿಗಳು ಬಹಳ ರೋಮ್ಯಾಂಟಿಕ್ ಇರುತ್ತೀರೆಂದು ನಾ ತಿಳಿದಿದ್ದೆ. ನೀವಿಂಥ ಸಂಭಾವಿತರೆಂದು ನನಗೆ ಗೊತ್ತಿರಲಿಲ್ಲ ಬಿಡಿರಿ.”

“ಅಂದರೆ? ಕವಿಗಳೆಲ್ಲಾ ಉಡಾಳರೆಂದು ನಿಮ್ಮ ಭಾವನೆಯಿತ್ತೇ ಏನು ?”

“ಸ್ವಲ್ಪ ಹಾಗೇ ಹಾಗೇ ಅನ್ನಿರಿ. ಬೈರನ್ ಷೆಲ್ಲಿ ಎಲ್ಲಾ ದೊಡ್ಡ ಉಡಾಳರೇ ಇದ್ದರಂತಲ್ಲ !”

“ಸರಿ ! ಅವರ ಹಾಗೇ ಎಲ್ಲರೂ ಇರುತ್ತಾರೆಯೇ ?”

“ಯಾರಿಗೆ ಗೊತ್ತಪ್ಪ ! ಯಾರಿಗೂ ಗೊತ್ತಾಗದ ಹಾಗೆ ಗುಟ್ಟಾಗಿ ಮಜಾ ಮಾಡುವವರೂ ಬಹಳ ಮಂದಿ !” ಎಂದು ಮಾರ್ಮಿಕವಾಗಿ ನುಡಿದ ಪರಸಣ್ಣವರ್. ಶಾಂತಾ – ಸಂದಾನಂದರ ಪ್ರಣಯ ಸಂಬಂಧದ ಬಗೆಗೆ ಅವನೂ ಆ ಮೊದಲೇ ಕೇಳಿ ತಿಳಿದವನಾಗಿದ್ದ.

ರಾತ್ರಿ ಕಾಲದಲ್ಲಿ ಪರಸಣ್ಣವರ್ ಕೊಟಡಿಗೆ ಬರುವುದರಲ್ಲೂ ನಿಯಮಿತ ತನವಿರಲಿಲ್ಲ. ಒಂದೊಂದು ದಿನ ಹತ್ತು ಗಂಟೆಗೆಲ್ಲ ಬಂದುಬಿಟ್ಟರೆ ಒಂದೊಂದು ದಿನ ಎರಡು ಮೂರು ಗಂಟೆಗೆ ಬರುತ್ತಿದ್ದ. ನಿದ್ರಿಸುತ್ತಿದ್ದ ಸದಾನಂದ ಅಂಥ ಅವೇಳೆಯಲ್ಲೆದ್ದು ಬಾಗಿಲು ತೆಗೆಯಬೇಕಾಗುತಿತ್ತು. ನಿದ್ರಾಭಂಗದಿಂದ ಸದಾ ನಂದನಿಗೆ ತೊಂದರೆಯಾಗುವುದನ್ನರಿತ ಪರಸಣ್ಣವರ್ ಒಂದು ದಿನ ಹೇಳಿದ :

“ರಾತ್ರೆ ಮಲಗುವಾಗ ಬಾಗಿಲಿಗೆ ಬೋಲ್ಟ್ ಹಾಕಲೇ ಬೇಡಿರಿ. ಹಾಗೇ ಮುಂದೆ ಮಾಡಿದರೆ ಸಾಕು. ನಿಮ್ಮ ನಿದ್ದೆ ಯಾಕೆ ಕೆಡಬೇಕು ನನ್ನಿಂದಾಗಿ ?”

“ಛೆ. ಛೆ. ಅದೇನು ದೊಡ್ಡದು ಬಿಡಿರಿ.”

“ಚೆನ್ನಾಗಿ ಓದಿ ಫಸ್ಟ್‌ಕ್ಲಾಸ್ ಹೊಡೆಯಬೇಕಪ್ಪಾ ನೀವು. ವ್ಯರ್ಥವಾಗಿ ನಿದ್ದೆಗೆಡಬಾರದು. ಇಂದಿನಿಂದ ಬೋಲ್ಟ್ ಹಾಕಬೇಡಿರಿ.”

“ಯಾರಾದರೂ ಕಳ್ಳರು ಗಿಳ್ಳರು....”

“ಅಂಥ ಭಯವೇನೂ ಇಲ್ಲ. ಒಂದು ವೇಳೆ ಕಳವು ಆದರೂ ಏನಂತೆ.

ನಾನೇನು ಇಲ್ಲಿ ಬಂಗಾರ ಇಟ್ಟಿರುವದಿಲ್ಲವಲ್ಲ. ಬಹಳವಾದರೆ ಹತ್ತಿಪ್ಪತ್ತು ರೂಪಾಯಿ ಸಿಕ್ಕಬಹುದು ಕಳ್ಳರಿಗೆ. ಪಾಪ, ಸ್ವಲ್ಪ ಮಜಾ ಮಾಡಲಿ ಬಿಡಿರಿ!" ಎಂದ ಪರಸಣ್ಣವರ್.

ಒಂದು ರಾತ್ರಿ ಸದಾನಂದನಿಗೆ ಹಠಾತ್ತಾಗಿ ಎಚ್ಚರವಾಯಿತು. ಆತ ಕಣ್ದೆರೆದು ಸುತ್ತಲೂ ದೃಷ್ಟಿ ಹೊರಳಿಸಿದ. ಕತ್ತಲಲ್ಲಿ ಏನೂ ಕಾಣಿಸುವಂತಿರಲಿಲ್ಲವಾದರೂ ಪರಸಣ್ಣವರನ ಮಂಚದಿಂದ ಪಿಸುದನಿಯಲ್ಲಿ ಹೊರಡುತ್ತಿದ್ದ ಮಾತುಗಳು ಕೇಳಿಸಿದುವು. ಒಬ್ಬನೇ ಇರಲಿಲ್ಲ ಪರಸಣ್ಣವರ್, ಅವನೊಡನೆ ಒಬ್ಬಳು ಹುಡುಗಿಯೂ ಇದ್ದಳು. ಇಂಗ್ಲಿಷಿನಲ್ಲಿ ಮಾತು ನಡೆದಿದ್ದುದರಿಂದ, ಅವಳು ಕ್ರಿಶ್ಚಿಯನರವಳಿರಬಹುದೆಂದು ಎಂದುಕೊಳ್ಳುತ್ತಾ ಸದಾನಂದ ಮತ್ತೆ ಕಣ್ಣು ಮುಚ್ಚಿಕೊಂಡು ತನ್ನಷ್ಟಕ್ಕೆ ತಾನು ನಿದ್ರಿಸಲು ಯತ್ನಿಸತೊಡಗಿದ. ಆದರೆ, ಮರದ ಪರದೆಯ ಆಚೆ ಅಂಥ ಕೃತ್ಯ ನಡೆದಿದ್ದ ವೇಳೆಯಲ್ಲಿ ಅವನಿಗೆ ನಿದ್ರೆ ಹತ್ತುವುದೂ ಸಾಧ್ಯವಿರಲಿಲ್ಲ. ಮೂರು ನಾಲ್ಕು ಜನ ಯುವತಿಯರೊಡನೆ ಪರಸಣ್ಣವರನಿಗೆ ನಿಕಟ ಸಂಬಂಧ ಬೆಳೆದಿದ್ದ ವಿಚಾರ ಸದಾನಂದನಿಗೆ ಗೊತ್ತಿದ್ದಿತಾದರೂ ಅವರು ರಾತ್ರಿಕಾಲದಲ್ಲಿ ಅವನ ಕೊಟಡಿಗೇ ಬರುವ ವಿಷಯ ಮಾತ್ರ ಅವನಿಗೆ ಹೊಸದಾಗಿತ್ತು. "ಎಂಥ ಧೈರ್ಯಶಾಲಿ ಈ ಪರಸಣ್ಣ! ಈ ಹುಡುಗಿಯರಾದರೂ ಎಂಥ ಧೀರೆಯರು! ಇವರಿಗೆ ಯಾರ ಭೀತಿಯೂ ಇಲ್ಲವಲ್ಲಾ!" ಎಂದು ವಿಸ್ಮಯಪಟ್ಟುಕೊಳ್ಳುತ್ತಾ, ಮನಸ್ಸಿಲ್ಲದಿದ್ದರೂ ಆ ಪ್ರಣಯಿಗಳ ಉನ್ಮಾದಕಾರಕ ಮಾತುಗಳನ್ನಾಲಿಸುತ್ತಾ ಹಾಸುಗೆಯ ಮೇಲೆ ಹೊರಳಾಡಬೇಕಾಯಿತು, ಸದಾನಂದ.

ಒಂದು ಗಂಟೆ ಹಾಗೆ ಕಳೆದ ತರುವಾಯ ಅವರಿಬ್ಬರೂ ಎದ್ದು ಬಟ್ಟೆ ಹಾಕಿಕೊಂಡು ಹೊರಟು ಹೋದರು. ಹತ್ತು ನಿಮಿಷಗಳ ಬಳಿಕ ಹಿಂದಿರುಗಿ ಬಂದ ಪರಸವಣ್ಣವರ್ ಬಾಗಿಲಿನ ಚಿಲಕ ಹಾಕಿ ಗುಂಡಿಯನ್ನೊತ್ತಿ ವಿದ್ಯುದ್ದೀಪವನ್ನು ಬೆಳಗಿಸಿದ. ಸದಾನಂದ ಎಚ್ಚರವಾಗಿರಬಹುದೆಂದು ಅವನು ಭಾವಿಸಿಕೊಂಡಿರಲಿಲ್ಲ. ಕಣ್ದೆರೆದು ಮಲಗಿದ್ದ ಸದಾನಂದನನ್ನು ನೋಡುತ್ತಲೂ ಪರಸಣ್ಣವರ್ ಮುಗುಳ್ನಗುತ್ತ,

"ನಿಮಗೆ ಯಾವಾಗ ಎಚ್ಚರಾಯಿತು?" ಎಂದು ಕೇಳಿದ.

"ಸ್ವಲ್ಪ ಹೊತ್ತಾಯಿತು."

" ಅಂದರೆ....ಅಂದರೆ...."

" ಅವರು ಯಾರು ಪರಸಣ್ಣವರೆ ?"

ಪರಸಣ್ಣವರ್ ಕುರ್ಚಿಯಲ್ಲಿ ದೇಹವನ್ನೊರಗಿಸಿ ಒಂದು ಸಿಗರೇಟು ಹೊತ್ತಿಸುತ್ತಾ ಹೇಳಿದ : '

" ಅವರೇ ? ಹೀಗೆ ಒಬ್ಬ ಫ್ರೆಂಡು."

ಮರುದಿನ ಬೆಳಿಗ್ಗೆ ಚಹ ತೆಗೆದುಕೊಳ್ಳುವಾಗ ಪರಸಣ್ಣವರ್ ತಾನಾಗಿಯೆ ಅವಳ ಪ್ರಸ್ತಾಪವೆತ್ತಿ ಹೇಳಿದ :

" ರೂಮಿನಲ್ಲಿ ನಾನು ಇಂಥ ಕೆಲಸ ಮಾಡಿದ್ದಕ್ಕೆ ನಿಮಗೆ ಸಿಟ್ಟಿಲ್ಲವಷ್ಟೆ ?"

" ಸಿಟ್ಯಾಕೆ ಪರಸಣ್ಣವರೆ. ರೂಮು ನಿಮ್ಮದು. ಏನು ಮಾಡಲೂ ನಿಮಗೆ ಅಧಿಕಾರವಿದೆ."

" ಛೆ. ಛೆ. ಹಾಗಲ್ಲ. ಈ ರೂಮಿನ ಮೇಲೆ ನಿಮಗೂ ಅಧಿಕಾರವಿದೆ. ನೀವು ಬೇಡ ಅಂದರೆ ಇನ್ನು ಮೇಲೆ ಯಾರನ್ನೂ ಕರೆತರುವದಿಲ್ಲ."

ಒಂದು ನಿಮಿಶ ಸುಮ್ಮನಿದ್ದು ಅನಂತರ ಕುತೂಹಲದ ದನಿಯಲ್ಲಿ ಕೇಳಿದ ಸದಾನಂದ :

" ಎಷ್ಟು ಧೈರ್ಯವಪ್ಪಾ ನಿಮ್ಮದು ! ಯಾರಾದರೂ ನೋಡಿದರೆ ಹ್ಯಾಗೆ ?"

" ಇಂಥ ರಾತ್ರಿಯಲ್ಲಿ ಯಾರು ಬರ್ತಾರೆ ನೋಡಲಿಕ್ಕೆ? ಈ ಮನೆಯ ಮಾಲೀಕರಂತೂ ನನ್ನ ಗೆಳೆಯರು. ನಾನು ಏನೇ ಮಾಡಿದರೂ ಅವರು ಲಕ್ಷ್ಯ ಕೊಡುವದಿಲ್ಲ."

" ಆ ಹುಡುಗಿ ಯಾರು ಪರಸಣ್ಣವರೆ ?"

ಪರಸಣ್ಣವರ್ ಕೊಂಚವೂ ಸಂಕೋಚಪಟ್ಟುಕೊಳ್ಳಲಿಲ್ಲ. ನಗುನಗುತ್ತಲೇ ಹೇಳಿದ :

" ಅವಳ ಹೆಸರು ಲೂಸಿ ಅಂತ. ಗೋವಾದವಳು. ಇಂಟರಿನಲ್ಲಿದ್ದಾಳೆ."

" ಇಲ್ಲಿ ಮನೆಯಿದೆಯೇನು ಅವರದು ?"

" ಇಲ್ಲೆಲ್ಲಿಯ ಮನೆ ? ಲೇಡೀಸ್ ಹಾಸ್ಟೆಲಿನಲ್ಲಿದ್ದಾಳೆ."

" ಹಾಸ್ಟೆಲಿನಲ್ಲಿ ? ಹಾಗಾದರೆ...." ಎಂದು ಬೆರಗುಗೊಂಡ ದನಿಯಲ್ಲಿ ಉದ್ಗರಿಸಿದ ಸದಾನಂದ.

" ರಾತ್ರಿ ಹ್ಯಾಗೆ ಬರುತ್ತಾಳೆ ಅಂತಲ್ಲವೆ ನಿಮ್ಮ ಆಶ್ಚರ್ಯ. ಅದರಲ್ಲೇನಿದೆ

ಅಂಥಾದ್ದು ? ಹಾಸ್ಟೆಲ್ ಸಿಪಾಯಿಗೆ ಒಂದೆರಡು ರೂಪಾಯಿ ಕೊಟ್ಟರೆ ಮುಗಿದು ಹೋಯಿತು."

" ಸೂಪರಿಂಟೆಂಡೆಂಟರಿಗೆ ಗೊತ್ತಾಗುವದಿಲ್ಲವೇನು ?"

" ಗೊತ್ತಾದರೂ ಏನಂತೆ? ಇವಳನ್ನು ಹಿಡಿಯಲು ರಾತ್ರಿಯೆಲ್ಲಾ ನಿದ್ದೆಗೆಡಲಿಕ್ಕಾದೀತೇ ಅವರಿಂದ? ಅಂಥ ಉಸಾಬರಿ ಎಲ್ಲಾ ಯಾರಿಗೆ ಬೇಕು. ಏನಾದರೂ ಮಾಡಿಕೊಳ್ಳಲಿ ಅಂತ ಸುಮ್ಮನಿರ್ತಾರೆ, ಅಷ್ಟೆ."

" ಈ ಲೂಸಿಯನ್ನು ನೀವು ಪ್ರೀತಿಸುತ್ತೀರಾ ಪರಸಣ್ಣವರೆ?"

ಚಹದ ಕಪ್ಪನ್ನು ಮೇಜಿನ ಮೇಲಿರಿಸಿ ಪರಸಣ್ಣವರ್ ಬಿದ್ದು ಬಿದ್ದು ನಕ್ಕ.

" ಪ್ರೀತಿ! ಪ್ರೀತಿ... ಪ್ರೀತಿ... ಪ್ರೀತಿ... ನೀವು ಯಾವ ಶತಮಾನದಲ್ಲಿದ್ದೀರಿ ಸದಾನಂದ? ಎಂಥೆಂಥಾ ಹುಚ್ಚು ಮಾತಾಡ್ತೀರಲ್ಲ! ನಿಮ್ಮ ಕಲ್ಪನಾಪ್ರಪಂಚ ಬಿಟ್ಟು ಇಂದಿನ ನಿಜವಾದ ಪ್ರಪಂಚವನ್ನು ನೀವು ನೆಟ್ಟಗೆ ನೋಡಿದ ಹಾಗೇ ಕಾಣುವದಿಲ್ಲ. ಕಾಲೇಜು ವಿದ್ಯಾರ್ಥಿ ವಿದ್ಯಾರ್ಥಿನಿಯರಲ್ಲೇ ಆಗಲಿ, ಬೇರೆ ಜನರಲ್ಲೇ ಆಗಲಿ, ನಿಜವಾದ ಪ್ರೀತಿಯೆನ್ನುವದು ಔಷಧಕ್ಕೂ ಕಾಣಿಸುವಂತಿಲ್ಲ. ಲೂಸಿಯನ್ನು ನಾನು ಪ್ರೀತಿಸುವದೇ? ಅವಳು ನನ್ನನ್ನು ಪ್ರೀತಿಸುವದೇ? ನಾನ್ಸೆನ್ಸ್. ಅವಳೇನು ನನ್ನನ್ನು ಮದುವೆಯಾಗುವಂತಿಲ್ಲ. ಅವಳನ್ನು ಮದುವೆ ಯಾಗಲು ನನಗೂ ಮನಸ್ಸಿಲ್ಲ. ಏನೋ ಕೆಲವು ದಿನ ದೋಸ್ತಿ, ಅಷ್ಟೆ."

" ಇದು ತಪ್ಪಲ್ಲವೇ ಪರಸಣ್ಣವರ್ ?"

ಮೇಜನ್ನು ಬಡೆದು ಬಡೆದು ನಕ್ಕ ಪರಸಣ್ಣವರ್. " ಹ ಹಾ ಹಾ! ತಪ್ಪು....ತಪ್ಪು....ಏನು ತಪ್ಪು? ಯಾರ ತಪ್ಪು? ಪಕ್ಕಾ ಸನಾತನಿಗಳು ಮಾತಾಡಿದ ಹಾಗೆ ಮಾತಾಡುತೀರಲ್ಲ ನೀವು ಸದಾನಂದಾ? ಇಂದಿನ ಯುಗದಲ್ಲಿ ಇಂಥದನ್ನೆಲ್ಲಾ ಯಾರು ಕೇಳುತ್ತಾರೆ? ಅದೂ ಅಲ್ಲದೆ ಇದರಲ್ಲಿ ತಪ್ಪಾದರೂ ಏನಿದೆ? ಇದು quite natural. ನೀರು ಕುಡಿಯಬೇಕೆನ್ನಿಸಿದಾಗ ಕುಡಿಯುತ್ತೇವೆ, ಸಿಗರೇಟು ಬೇಕೆನ್ನಿಸಿದಾಗ ಸೇದುತ್ತೇವೆ, ಮಾತಾಡಬೇಕೆನ್ನಿಸಿದಾಗ ಮಾತಾಡುತ್ತೇವೆ. ಹಾಗೇ ಲೂಸಿಗೆ ನಾನು ಬೇಕೆನ್ನಿಸಿದಾಗ ನನಗೆ ಅವಳು ಬೇಕೆನ್ನಿಸಿದಾಗ ಇಬ್ಬರೂ ಕೂಡುತ್ತೇವೆ. ಇದರಲ್ಲೇನು ತಪ್ಪು? ಹ....ಹ.... ಹ್ಹ....ಹ್ಹಾ....ನಿಮಗೆ ಗೊತ್ತೇ ಇರಲಿಲ್ಲವೇ ಸದಾನಂದ, ಕಾಲೇಜಿನಲ್ಲಿ ಇಂಥದು

ಬೇಕಾದಷ್ಟು ನಡೆಯುತ್ತದೆ. ವಿದ್ಯಾರ್ಥಿ ವಿದ್ಯಾರ್ಥಿನಿಯರಷ್ಟೆ ಅಲ್ಲ, ಎಷ್ಟೋ ಮಂದಿ ಪ್ರೊಫೆಸರುಗಳೂ ಇಂಥವರೇ...."

"ಅಂದರೆ....ಒಳ್ಳೆಯವರು ಇಲ್ಲವೇ ಇಲ್ಲ ಅನ್ನುತ್ತೀರಾ?"

"ಇಲ್ಲವೆಂದು ನಾನೆಲ್ಲಿ ಹೇಳಿದೆ? ನಿಮ್ಮಂಥವರು ಕೆಲವರಾದರೂ ಇದ್ದೇ ಇರುತ್ತೀರಲ್ಲಾ. ಜೀವನದ ಆನಂದವೆಂದರೇನೆಂಬುದನ್ನು ಕಡೆಯವರೆಗೂ ತಿಳಿಯುವದಿಲ್ಲ ನಿಮಗೆ. ಮಜಾ ಮಾಡುವ ವಯಸ್ಸೆಂದರೆ ಇದೇ. ಈಗ ಸುಖ ಪಡದಿದ್ದರೆ ಇನ್ನಾವಾಗ ಸುಖಪಡುವದು? ಸುಮ್ಮನೆ ಪ್ರೇಮ ಪ್ರೇಮ ಪವಿತ್ರ ಪ್ರೇಮ ಅಂತ ಹೇಳಿಕೊಂಡು ಮದುವೆಯಾಗಲು ಸಾಧ್ಯವಾಗದಾಗ ಅಳುತ್ತ ಕೂಡುವದು, ಆತ್ಮಹತ್ಯೆ ಮಾಡಿಕೊಳ್ಳುವದು ಏನು ಉಪಯೋಗ? ಮದುವೆ ಯಾಗಲು ಸಾಧ್ಯವಾಗದಿದ್ದರೆ ಮೂರು ದಿನವಾದರೂ ಸುಖಪಡಬೇಕು. ಅಷ್ಟೇ ತೃಪ್ತಿಯಾದರೂ ಆದೀತು."

"ನಿಜವಾಗಿಯೂ ನೀವೊಬ್ಬ ಅದ್ಭುತ ವ್ಯಕ್ತಿ," ಎಂದ ಸದಾನಂದ.

ಪರಸಣ್ಣವರ್ ತುಂಟನಗೆ ತುಳಕಿಸುತ್ತ ಹೇಳಿದ:

"ಲೂಸಿ, ಮೇರಿ, ವನಿತಾ, ಸುಶೀಲಾ ಮೊದಲಾದವರೂ ಹೀಗೇ ಹೇಳುತ್ತಾರೆ. ನಾನೊಬ್ಬ ವಂಡರ್‌ಫುಲ್ ಆಸಾಮಿಯಂತೆ. ನನಗೇನೂ ಹಾಗನ್ನಿಸುವದಿಲ್ಲ."

ಆ ರಾತ್ರೆ ಪರಸಣ್ಣವರ್ ಕೊಟಡಿಗೆ ಬರಲೇ ಇಲ್ಲ. ಬೆಳಕು ಹರಿಯು ತ್ತಿದ್ದ ಹಾಗೆ ಆತ ಕೊಟಡಿಯಲ್ಲಿ ಅಡಿಯಿರಿಸಿದ. ಆ ವೇಳೆಗಾಗಲೆ ಸದಾನಂದ ಎದ್ದು ಸ್ನಾನ ಮಾಡುತ್ತಲಿದ್ದ.

"ರಾತ್ರಿ ಚೆನ್ನಾಗಿ ನಿದ್ದೆ ಬಂತೇ?" ಚೇಷ್ಟೆಯ ದನಿಯಲ್ಲಿ ಕೇಳಿದ ಪರಸಣ್ಣವರ್.

ನಿಜವಾಗಿ ಸದಾನಂದನಿಗೆ ಆ ರಾತ್ರೆ ನಿದ್ರೆ ಬಂದಿರಲಿಲ್ಲ. ಹನ್ನೊಂದು ಗಂಟೆಯವರೆಗೆ ಓದುತ್ತಲಿದ್ದವನು ಅನಂತರ ದೀಪವನ್ನಾರಿಸಿ ಹಾಸುಗೆಯ ಮೇಲೆ ಬಿದ್ದುಕೊಂಡಿದ್ದ. ಎಷ್ಟು ಯತ್ನಿಸಿದರೂ ನಿದ್ರೆ ಸುಳಿದಿರಲಿಲ್ಲ. ಮುನ್ನಾ ದಿನದ ರಾತ್ರಿಯ ಅನುಭವವನ್ನೆ ಮೆಲುಕುಹಾಕುತ್ತ ಮನಸ್ಸು ಅಸ್ಪಷ್ಟ ಅಪೇಕ್ಷೆ ಯೊಂದರಿಂದ ನರಳುತ್ತಿತ್ತು. ಪರಸಣ್ಣವರನ ಸಹವಾಸದಿಂದಾಗಿ ಸದಾನಂದನ ಮನಸ್ಸಿನ ಮೇಲೂ ಅವನಿಗೆ ಗೊತ್ತಾಗದಂತೆಯೆ ಸೂಕ್ಷ್ಮ ಪರಿಣಾಮವಾಗ

ತೊಡಗಿದ್ದಿತು. "ಪರಸಣ್ಣವರ್ ಹೇಳುವದೇ ನಿಜ ಅಂತ ತೋರುತ್ತದೆ. ಮೊದಲಿನ ಹಾಗೆ ಇಂದು ಪ್ರೇಮಕ್ಕೆ ಪಾವಿತ್ರ್ಯವುಳಿದಿಲ್ಲ. ಮಹತ್ವವೂ ಉಳಿದಿಲ್ಲ. ಇಂದು ಪ್ರೇಮಕ್ಕಿರುವ ಅರ್ಥವೆಂದರೆ ಕೇವಲ ಶರೀರಸಂಬಂಧ....ಲೈಂಗಿಕ ತೃಪ್ತಿ...." ಗಂಡಿಗಾಗಿ ಹೆಣ್ಣಿಗೆ, ಹೆಣ್ಣಿಗಾಗಿ ಗಂಡಿಗೆ ಉಂಟಾಗುವ ಹಸಿವೆ ಯೆಂದರೇನೇ ಪ್ರೇಮವೋ ಏನೊ ಎಂದುಕೊಂಡ ಸದಾನಂದ. "ಮದುವೆ ಯಾಗಲು ಸಾಧ್ಯವಾಗದಿದ್ದರೆ ಮೂರು ದಿನವಾದರೂ ಸುಖಪಡಬೇಕು," ಎಂಬ ಪರಸಣ್ಣವರನ ನುಡಿಗಳು ಅವನ ಕಿವಿಗಳಲ್ಲಿ ಮತ್ತೆ ಮತ್ತೆ ಮೊರೆಯುತ್ತಿದ್ದುವು. ಆ ರಾತ್ರಿಯೂ ಲೂಸಿಯ ಆಗಮನವಾಗುವುದೇನೋ ಎಂದು ಆತ ಕೊಂಚ ಉತ್ಸುಕನಾಗಿಯೆ ಕಾದುಕೊಂಡಿದ್ದ. ತನ್ನ ಉತ್ಸುಕತೆಯನ್ನು ಕಂಡುಕೊಂಡಾಗ ಅವನಿಗೇ ಅಚ್ಚರಿಯಾಗುತಿತ್ತು. ಮನಸ್ಸಿನ ಮೇಲೆ ತನಗಿದ್ದ ಹತೋಟಿ ತಪ್ಪಿ ಹೋಗುತ್ತಿದೆಯೇನೋ ಎಂದೂ ಅವನಿಗೆ ದಿಗಿಲಾಗದಿರಲಿಲ್ಲ.

ಸ್ಟವ್ ಹೊತ್ತಿಸಿ ಚಹಕ್ಕೆ ಸೀರಿಡುತ್ತಾ ಪರಸಣ್ಣವರ್ ಮಾತನಾಡಿದ:

"ನಿಮಗೆ ತೊಂದರೆ ಯಾಕೆ ಅಂತ ನಾನು ರಾತ್ರಿ ಬರಲೇ ಇಲ್ಲ."

"ಎಲ್ಲಿ ಮಲಗಿದ್ದಿರಿ? ನನಗಾಗಿ ನೀವು ನಿಮ್ಮ ರೂಮು ಬಿಟ್ಟು ತಿರುಗ ಬೇಕೇಕೆ?"

"ಫುಟ್‌ಪಾತ್ ಮೇಲೆ ಬಿದ್ದುಕೊಳ್ಳಬೇಕಾದ ಪ್ರಸಂಗವೇನೂ ಇಲ್ಲವಲ್ಲಾ! ಬೇರೆ ಕಡೆ ರೂಮು ಗೀಮು ಎಲ್ಲಾ ವ್ಯವಸ್ಥೆಯಿದೆ."

"ಮತ್ತೊಂದು ರೂಮು ಹಿಡಿದಿರಾ?"

"ಹಿಡಿಯುವ ಅಗತ್ಯವೇನು? ಬೇಕಾದಾಗ ಸಿಗುತ್ತದೆ – ಎರಡು ರೂಪಾಯಿ ಕೊಟ್ಟರೆ...."

"ಅಂದರೆ?"

"ಅಂದರೆ....ಇಂಥ ವಿಷಯ ನಿಮಗೆ ಏನೇನೂ ಗೊತ್ತಿದ್ದ ಹಾಗೆ ಕಾಣು ವದಿಲ್ಲ. ಇಲ್ಲೇ ಸಮಿಾಪದಲ್ಲಿ ಒಂದು ಚಹದಂಗಡಿ ಇದೆಯಲ್ಲಾ, ಕಾರವಾರ ದವರೊಬ್ಬರು ಇಟ್ಟಿರುವದು....ಅವರೇ ಒಂದು ರೂಮು ಬಾಡಿಗೆಗೆ ಕೊಡುತ್ತಾರೆ ನಮ್ಮಂಥವರಿಗೆ – ಯಾವಾಗಲಾದರೂ."

"ಓ! ಈಗ ಗೊತ್ತಾಯಿತು....ಗೊತ್ತಾಯಿತು....ಲೂಸಿ ಅಲ್ಲಿಗೇ ಬರುತ್ತಾಳೆ ಅಲ್ಲವೆ?"

" ಲೂಸಿಯೊಬ್ಬಳೇ ಯಾಕೆ, ಸೂಶಿಯೂ ಬರುತ್ತಾಳೆ....ಯಾರು ಬೇಕಾದರವರು ಬರಬಹುದು...."

ಬಾಚಣಿಗೆಯನ್ನು ಕೂದಲಿನ ಮೇಲಾಡಿಸುತ್ತಿದ್ದ ಹಾಗೆ ಸದಾನಂದ ಕೇಳಿದ :

" ಹೀಗೆ ನೀವು ಎಷ್ಟು ಹಣ ಖರ್ಚು ಮಾಡುತ್ತಿರಬಹುದು ಅಂತ ಆಶ್ಚರ್ಯ ನನಗೆ!"

" ಅದರಲ್ಲೇನು ಆಶ್ಚರ್ಯ? ನಮ್ಮ ತಂದೆಯ ಹತ್ತಿರ ಹಣಕ್ಕೇನು ಕೊರತೆಯಿಲ್ಲ. ನಾನು ಎಷ್ಟು ಕೇಳಿದರೂ ಕಳಿಸುತ್ತಾರೆ. ಎಷ್ಟು ಖರ್ಚು ಮಾಡಿದರೂ ಹಾನಿಯೇನೂ ಇಲ್ಲ."

ಚಹ ಕುಡಿದು ಬಟ್ಟೆ ಹಾಕಿಕೊಂಡು ಶಿವಲಿಂಗನಿಗೆ ಪಾಠ ಹೇಳಲೆಂದು ಸದಾನಂದ ಭೋಜನಾಲಯಕ್ಕೆ ಹೊರಟ. ಆತ ಪರಸಣ್ಣವರನ ಕೊಟಡಿಗೆ ಬಂದಂದಿನಿಂದ ಪಾಠದ ಬಗ್ಗೆ ಹಾಗೆ ಹೊಸ ವ್ಯವಸ್ಥೆಯಾಗಿದ್ದಿತು. ಪಾಠ ಹೇಳುವುದು ಮುಗಿದ ಬಳಿಕ ಹಾಗೆಯೆ ಊಟವನ್ನು ಮುಗಿಸಿಕೊಂಡು ಕೊಟಡಿಗೆ ಬಂದು ಪುಸ್ತಕ ತೆಗೆದುಕೊಂಡು ಕಾಲೇಜಿಗೆ ಹೋಗುತ್ತಿದ್ದ. ಸಾಯಂಕಾಲ ನೇರವಾಗಿ ಕೊಟಡಿಗೆ ಬಂದು ಹಳಗನ್ನಡ ಕಾವ್ಯಗಳ ಅಭ್ಯಾಸಕ್ಕೆ ತೊಡಗುತ್ತಿದ್ದ. ಶಾಂತಾ ಲೀಲಾ ಕುಮುದರು ಒಮ್ಮೊಮ್ಮೆ ಕಾಲೇಜಿನಲ್ಲಿಯೆ ಭೆಟ್ಟಿಯಾಗುತ್ತಿದ್ದರು. ಭಾನುವಾರಕ್ಕೊಮ್ಮೆ ನರಗುಂದನ ಕೊಟಡಿಯಲ್ಲಿ 'ಕಾವ್ಯಕೂಟ'ದ ಸಭೆಯೂ ಸೇರುತ್ತಿದ್ದಿತಾದರೂ ಮೊದಲಿನಂತೆ ಹೆಚ್ಚು ಜನ ಸಮ್ಮಿಲಿತರಾಗುತ್ತಿರಲಿಲ್ಲವಾದ್ದರಿಂದ ಅದರ ಕಳೆಯೇ ಮಾಯವಾಗತೊಡಗಿದ್ದಿತು. " ನಡೆದ ಹಾಗೆ ನಡೆಯಲಿ," ಎಂದುಕೊಂಡು ಸದಾನಂದನೂ ಅದರ ಬಗೆಗೆ ಉದಾಸೀನವಾಗಿದ್ದ. ನರಗುಂದ ಮಾತ್ರ ನಿರುತ್ಸಾಹಿಯಾಗದೆ ಕೂಟಕ್ಕೆ ಹೆಚ್ಚು ಜನರನ್ನು ಸೇರಿಸುವ ಯತ್ನವನ್ನು ಮುಂದುವರೆಸಿದ್ದ.

ಮಳೆಗಾಲ ಕಳೆದು ಚಳಿಗಾಲಕ್ಕಾರಂಭವಾಗಿದ್ದಿತು. ಕಾಲೇಜಿನ ವಾರ್ಷಿಕ ಪಂದ್ಯಾಟಗಳೂ ಉತ್ಸವಗಳೂ ವಿಜೃಂಭಣೆಯಿಂದ ಜರಗತೊಡಗಿದ್ದುವು. ಪರಸಣ್ಣವರನಿಗೆ ಒಂದು ಕ್ಷಣವೂ ಬಿಡುವು ದೊರೆಯದಂತಾಯಿತು. ಆ ವರ್ಷವೂ ಆಟಗಳಲ್ಲಿ ಅವನೇ 'ಚಾಂಪಿಯನ್‌ಷಿಪ್' ಪಡೆದು ಕಾಲೇಜಿನ 'ಹೀರೋ' ಆಗಿ ಮೆರೆಯತೊಡಗಿದ. ಶೌರ್ಯ ಸಾಹಸದ ಕೃತ್ಯಗಳಿಗೆ ಮಾರು

ಹೋಗುವ ವಿದ್ಯಾರ್ಥಿನಿಯರು ಸಹಜವಾಗಿಯೆ ಪರಸಣ್ಣವರನ ಸುತ್ತಲೂ ಹಾರಾಡತೊಡಗಿದರು. ಕೊಟಡಿಯಲ್ಲಿ 'ಪಾರ್ಟಿ'ಗಳು ನಡೆದುವು. ಎಂಟು ಹತ್ತು ದಿನಗಳವರೆಗೆ ಕೋಲಾಹಲವೋ ಕೋಲಾಹಲ. ಪುಸ್ತಕಗಳನ್ನು ಕಪಾಟಿನಲ್ಲಿಯೆ ಬಿಟ್ಟು ಸದಾನಂದ ತೆಪ್ಪಗೆ ಕುಳಿತಿರಬೇಕಾಯಿತು. ಆ ಮಹಾ ಗದ್ದಲದ ಮಧ್ಯೆ ವ್ಯಾಸಂಗದಲ್ಲಿ ಚಿತ್ತವನ್ನು ತೊಡಗಿಸುವುದು ಸಾಧ್ಯವೇ ಇರಲಿಲ್ಲ.

ಅವನ ತೊಳಲಾಟವನ್ನು ಗುರುತಿಸಿಕೊಂಡ ಶಾಂತಾ, ಒಂದು ಸಾಯಂಕಾಲ ಹೇಳಿದಳು :

" ಪರಸಣ್ಣವರ ರೂಮಿನಲ್ಲೂ ಬಹಳ ತೊಂದರೆಯೇ ಏನು ?"

ಸದಾನಂದ ತನ್ನ ಗೋಳನ್ನೆಲ್ಲ ತೋಡಿಕೊಳ್ಳತೊಡಗಿದ. ಮಾತನಾಡುತ್ತಾ ಅವರು ಬೆಳಗಾವಿ ರಸ್ತೆಯ ಕಡೆ ತಿರುಗಾಡಲು ಹೊರಟರು.

" ಪರಸಣ್ಣವರೆಂದರೆ ಎಂಥವರು ಅನ್ನುವದು ಕಾಲೇಜಿಗೆಲ್ಲಾ ಗೊತ್ತು. ಅಂಥವರ ರೂಮಿಗೆ ಸೇರುವ ಮೊದಲೇ ನೀವು ವಿಚಾರ ಮಾಡಬೇಕಾಗಿತ್ತು."

" ನನಗೂ ಸ್ವಲ್ಪ ಸ್ವಲ್ಪ ಗೊತ್ತಿತ್ತು ಶಾಂತಾ. ಆದರೂ ಅಲ್ಲಿ ಇಂಥ ಗದ್ದಲವಾದೀತೆಂದು ಮಾತ್ರ ಅನಿಸಿರಲಿಲ್ಲ. ಅಲ್ಲದೆ ವರ್ಷದ ನಡುವೆ ಈ ಊರಲ್ಲಿ ರೂಮು ಎಲ್ಲಿ ಸಿಗುತ್ತದೆ? ಪರಸಣ್ಣವರು ತಾವಾಗೇ ಕರೆದರು. ಇನ್ನು ಒಲ್ಲೆ ಅಂತ ಹೇಳುವದಾದರೂ ಹ್ಯಾಗೆ? ಹೋಗಿಬಿಡಬೇಕಾಯಿತು."

" ನಿಮ್ಮದು ಬಲು ದಾಕ್ಷಿಣ್ಯದ ಸ್ವಭಾವ."

" ಹೌದೇ? ಅಂತೂ ಸ್ವಭಾವಗಳನ್ನು ಕಂಡುಹಿಡಿಯಲು ಕಲಿತಿದ್ದೀರಿ ಅಂತಾಯಿತು."

" ಈ ದಾಕ್ಷಿಣ್ಯ ಪ್ರಕೃತಿ ಅತಿಯಾದರೆ ಒಳ್ಳೆಯದಲ್ಲ ನೋಡಿರಿ. ಎಷ್ಟಿರಬೇಕೋ ಅಷ್ಟೇ ಇದ್ದರೆ ಹಾನಿಯೇನಿಲ್ಲ. ಆದರೆ, ನಿಮ್ಮದು ಬಹಳ ಬಹಳ ದಾಕ್ಷಿಣ್ಯ. ಒಂದೊಂದು ಸಲ ನನಗನ್ನಿಸುತ್ತದೆ: ಇದರಿಂದ ನಿಮಗೆ ಯಾವಾಗ ಏನು ಹಾನಿಯಾಗುವದೋ ಅಂತ...."

ಶಾಂತಳ ಮಾತೂ ನಿಜವೆ – ಎಂದು ಮನಸ್ಸಿನಲ್ಲಿಯೆ ಹೇಳಿಕೊಂಡ ಸದಾನಂದ. ದಾಕ್ಷಿಣ್ಯಕ್ಕೆ ಕಟ್ಟುಬಿದ್ದು ತಾನು ತನ್ನ ಜೀವನವನ್ನೆ ಹಾಳುಮಾಡಿಕೊಂಡರೂ ಮಾಡಿಕೊಳ್ಳಬಹುದು ಎಂದೂ ಅವನಿಗೆನ್ನಿಸಿತ್ತು. ಇನ್ನೊಬ್ಬರ ಮನಸ್ಸು ನೋಯಿಸುವುದೆಂದರೆ ತನಗಾಗದು. ಅನ್ಯರನ್ನು ನೋಯಿಸಲಿಷ್ಟವಿಲ್ಲ

ದುದಕ್ಕೆ ತಾನೇ ಗೋಳಾಡಬೇಕಾದ ಪ್ರಸಂಗ ಒರುತ್ತವೆ. ತಂದೆ ತಾಯಿಗಳಿಗೆ ಅಸಮಾಧಾನವನ್ನುಂಟುಮಾಡಲಿಷ್ಟವಿಲ್ಲದೆ ಮೀನಾಕ್ಷಿಯನ್ನು ನೋಡಲು ಹೋದುದಾಯಿತು. ಹುಕ್ಕೇರಿಯವರ ಮತ್ತು ಮಾಲತೀದೇವಿಯವರ ಮನಸ್ಸು ನೋಯಿಸಲಿಷ್ಟವಿಲ್ಲದೆ ಮೀನಾಕ್ಷಿಯನ್ನು ಗಂಟುಹಾಕಿಕೊಳ್ಳಲು ಅರ್ಧಮರ್ಧ ಸಿದ್ಧವಾದುದಾಯಿತು. ಆ ಸಂಬಂಧವನ್ನು ತಾನು ಒಪ್ಪಿದ ಹಾಗೇ ಆಯಿತೆಂದು ಅವರೆಲ್ಲರೂ ನಂಬಿಬಿಟ್ಟಿರಲು ಸಾಕು. ಇಲ್ಲಿಯಾದರೋ ಈ ಶಾಂತಳೊಡನೆ ಗಾಢವಾದ ಸಂಬಂಧ. ಇದನ್ನೂ ಮುರಿಯುವಂತಿಲ್ಲ. ಅದನ್ನೂ ಮುರಿಯು ವಂತಿಲ್ಲ. ದೊಡ್ಡ ಪೀಕಲಾಟವೇ ಸರಿ. ತನ್ನ ದಾಕ್ಷಿಣ್ಯದ ಪ್ರಕೃತಿಯೇ ಇದಕ್ಕೆ ಕಾರಣವಲ್ಲವೆ?

"ಒಮ್ಮೊಮ್ಮೆ ಲೀಲಾ ಹೇಳುತ್ತಿರುತ್ತಾಳೆ: ನೀವಿನ್ನೂ ಸಣ್ಣ ಮಗು ಇದ್ದ ಹಾಗೆ ಇದ್ದೀರಂತೆ. ನಿಮ್ಮನ್ನು ನೋಡಿಕೊಳ್ಳಲು ಯಾವಾಗಲೂ ಯಾರಾದ ರೊಬ್ಬರು ಬೇಕಂತೆ."

ಸದಾನಂದ ಅವಳತ್ತ ತಿರುಗಿ ಮನಸೋಕ್ತವಾಗಿ ನಕ್ಕ. ನಗರವನ್ನು ಬಿಟ್ಟು ಅವರು ಹೊಲಗಳ ಹತ್ತಿರ ಬಂದಿದ್ದರು. ತಮ್ಮ ಮೆಚ್ಚುಗೆಯ ತಾಣವಾದ ಮಾವನತೋಪಿನ ಕಡೆ ತಿರುಗುತ್ತಾ ಸದಾನಂದ ಹೇಳಿದ:

"ಲೀಲಾಗೆ ಎಲ್ಲರೂ ಮಕ್ಕಳ ಹಾಗೇ ಕಾಣುತ್ತಾರೆ. ಅವಳೊಬ್ಬಳೇ ಅಜ್ಜಿ, ನಮ್ಮನ್ನೆಲ್ಲಾ ಜೋಪಾನ ಮಾಡುವವಳು!"

"ನೀವು ಆ ರೂಮು ಬಿಟ್ಟಂದಿನಿಂದ ಅವಳಿಗೆ ನಿಮ್ಮದೇ ಚಿಂತೆಯಾಗಿದೆ. ಪರಸಣ್ಣವರ ಸಹವಾಸದಲ್ಲಿ ನೀವೂ ಎಲ್ಲಾದರೂ...."

"ಛೆ. ಛೆ. ಹಾಗೆ ಪರಸಣ್ಣವರ್ ಕೆಟ್ಟವರೇನೂ ಅಲ್ಲ. ತನ್ನಷ್ಟಕ್ಕೆ ತಾನು ಏನು ಮಾಡಿದರೂ ಇನ್ನೊಬ್ಬರನ್ನು ಕೆಡಿಸಲು ಬರುವದಿಲ್ಲ. ನನಗೆ ತೊಂದರೆ ಯಾಗಬಾರದೆಂದು ರಾತ್ರಿ ರೂಮಿಗೆ ಕೂಡಾ ಬರುವದಿಲ್ಲ ಅವರು...."

"ಅವರೆಲ್ಲಿಗೆ ಹೋಗುತಾರೆನ್ನುವದು ಕಾಲೇಜಿನಲ್ಲಿ ಎಲ್ಲರಿಗೂ ಗೊತ್ತಿದೆ," ಎಂದು ಅವಳು ಥಟ್ಟನೆ ಹೇಳಿದಳು. ಸದಾನಂದ ಚಕಿತನಾಗಿ ಅವಳ ಮುಖ ವನ್ನೆ ದಿಟ್ಟಿಸತೊಡಗಿದ. ಕಾರವಾರದವರ ಚಹದಂಗಡಿಯ ವಿಷಯ ಶಾಂತಳಿಗೂ ಗೊತ್ತಿದೆ ಹಾಗಾದರೆ! ಆ ಮಾತನ್ನಾಡುವಾಗ ಅಂಥ ಸಂಕೋಚವೇನೂ

ಕಾಣಿಸಿರಲಿಲ್ಲ ಅವಳ ದನಿಯಲ್ಲಿ. ಅಂಥ ಸನ್ನಿವೇಶಕ್ಕಾಗಿ ಅವಳ ಮನಸ್ಸೂ ಗುಟ್ಟಾಗಿ ಬಯಸುತ್ತಿದೆಯೊ ಏನೊ, ಯಾರು ಬಲ್ಲರು....

ಗದ್ದೆಯ ಬದುವಿನ ಮೇಲೆ ಕುಳಿತುಕೊಳ್ಳುತ್ತ ಆತ ಕೇಳಿದ:

" ನಿಮಗೆ ಹ್ಯಾಗೆ ಗೊತ್ತಾಯಿತು ?"

" ಹ್ಯಾಗಂದರೆ ? ಹೀಗೇ. ಕ್ಲಾಸಿನಲ್ಲಿ ಹುಡುಗಿಯರು ಮಾತಾಡುತ್ತಿರುತ್ತಾರೆ."

" ಇಂಥ ಮಾತೆಂದರೆ ಹುಡುಗಿಯರಿಗೂ ಬಹಳ ಪ್ರೀತಿಯೇನು ?"

" ಮತ್ತೆ ! ಹುಡುಗಿಯರೆಂದರೇನು ಎಲ್ಲರೂ ಸೀತಾ ಸಾವಿತ್ರಿಯರ ಹಾಗಿರುತ್ತಾರೆ ಅಂತ ತಿಳಿದಿದ್ದಿರೇನು ನೀವು ! ಈ ವಯಸ್ಸಿನಲ್ಲಿ ಇಂಥದೆಲ್ಲಾ ನಡೆಯತಕ್ಕದ್ದೇ."

" ಅಂದರೆ....ಎಲ್ಲರೂ ಲೂಸಿಯ ಹಾಗೆ....?"

" ಛೆ. ಛೆ. ಹಾಗಲ್ಲ ನಾ ಹೇಳಿದ್ದು. ಎಲ್ಲರೂ ಲೂಸಿಯ ಹಾಗೆ ಯಾಕೆ ಮಾಡಿಯಾರು ! ಅವಳಂಥವರೂ ಇರುತ್ತಾರೆ, ಅಷ್ಟೆ."

ಕೆಲಹೊತ್ತು ಇಬ್ಬರೂ ಮೌನವಾಗಿದ್ದರು. ಮತ್ತೆ ಶಾಂತಳೇ ಮಾತನಾಡಿದಳು :

" ನಿಮಗೆ ಇಂಥದೆಲ್ಲ ಸರಿಬರುವದಿಲ್ಲ, ಅಲ್ಲವೆ ?"

" ಮೊದಲು ಮೊದಲು ಸರಿಬರುತ್ತಿರಲಿಲ್ಲ. ಇತ್ತೀಚೆ ಮಾತ್ರ ಇದೆಲ್ಲಾ ಸಹಜವೇ ಅಂತ ಅನ್ನಿಸುತ್ತಾ ಇದೆ. ಪರಸಣ್ಣವರೂ ಹಾಗೇ ಹೇಳುತ್ತಾರೆ." ಸ್ವಲ್ಪ ತಡೆದು, ಸಂಕೋಚದಿಂದ ತಡವರಿಸುವ ದನಿಯಲ್ಲಿ ಅವನು ಹೇಳಿದ:

" ಒಂದೊಂದು ಸಲ ನನಗೂ ಅನ್ನಿಸುತ್ತದೆ....ಇದರಲ್ಲಿ ಏನು ಅಂಥ ಹಾನಿ ಅಂತ...."

ಅವಳು ದೃಷ್ಟಿಯನ್ನು ತಗ್ಗಿಸಿ ಬೆರಳಿನಿಂದ ನೆಲವನ್ನು ತೀಡುತ್ತ ಕುಳಿತಳು. ತನ್ನ ಮಾತಿನಿಂದ ಅವಳಿಗೆ ಅಸಮಾಧಾನವಾಯಿತೇನೋ ಎಂದುಕೊಳ್ಳುತ್ತಾ ಆತ ಅವಳ ಭುಜದ ಮೇಲೆ ಮೆಲ್ಲಗೆ ಕೈಯಿಟ್ಟು,

" ಕೋಪವೇ ಶಾಂತಾ ?" ಎಂದ. ಅವಳು ಯಾವ ಭಾವವನ್ನೂ ವ್ಯಕ್ತಗೊಳಿಸದೆ ಮೌನವಾಗಿ ಕುಳಿತಿದ್ದಳು. ಮೆಲ್ಲಗೆ ಅವಳನ್ನು ಸಮೀಪಕ್ಕೆಳೆದುಕೊಂಡು ಅವಳ ದೃಷ್ಟಿಗೆ ದೃಷ್ಟಿ ಸೇರಿಸಿ ಅವನು ಕೇಳಿದ:

“ ಮಾತಾಡು ಶಾಂತಾ, ಮಾತಾಡು. ನನ್ನ ಮೇಲೆ ಸಿಟ್ಟೇ ?”

ಅವಳನ್ನಾತ ಏಕವಚನದಲ್ಲಿ ಸಂಬೋಧಿಸಿದುದು ಅದೇ ಮೊದಲ ಬಾರಿ. ಅವಳ ಹೃದಯ ಪುಲಕಗೊಂಡಿತು.

“ ಸಿಟ್ಟ್ಯಾಕೆ ?” ಎಂದಳಾಕೆ.

“ ಇಲ್ಲ ಹೌದಲ್ಲೋ, ಹಾಗಾದರೆ ನಾನು ಬದುಕಿಕೊಂಡೆ,” ಎನ್ನುತ್ತಿದ್ದ ಹಾಗೆ ಆತನಿಗೆ ತನ್ನ ಮನಸ್ಸಿನ ಮೇಲಿನ ಹತೋಟಿ ತಪ್ಪಿಹೋಯಿತು.

“ ಶಾಂತಾ, ನನ್ನ ಶಾಂತಾ,” ಎನ್ನುತ್ತಾ ಆತ ಅವಳನ್ನು ಎದೆಗೊತ್ತಿ ಕೊಂಡ.

ಅವಳಿಗೆ ಕೊಂಚ ಗಾಬರಿಯಾಗದಿರಲಿಲ್ಲ. ಅವನ ಹಿಡಿತದಿಂದ ತಪ್ಪಿಸಿ ಕೊಳ್ಳಲು ಯತ್ನಿಸಿದಳು. ಆದರೆ ಅವನ ತೋಳು ಅವಳನ್ನು ಬಿಡದಂತೆ ಬಿಗಿಯಾಗಿ ಬಂಧಿಸಿದ್ದುವು. ಅರೆಕ್ಷಣದಲ್ಲಿಯೆ ಅವನ ಬಾಯಿ ಅವಳ ಬಾಯ ಮೇಲಾಡತೊಡಗಿದ್ದಿತು. ಆ ಚುಂಬನ....ತನ್ನ ಜೀವಮಾನದಲ್ಲಿಯೆ ಅವಳು ಅನುಭವಿಸುತ್ತಿದ್ದ ಪ್ರಥಮ ಚುಂಬನ....ಕೋಮಲತೆ ಕಠೋರತೆಗಳೆರಡೂ ವಿಚಿತ್ರವಾಗಿ ಬೆರೆತುಕೊಂಡಿದ್ದುವು ಆ ಚುಂಬನದಲ್ಲಿ. ಅವನನ್ನು ದೂರ ತಳ್ಳಲು ಅವಳು ಯತ್ನಿಸಿದಳು. ಇಷ್ಟು ದೂರ ಹೋಗುವುದು ಒಳ್ಳೆಯದಲ್ಲ. ಇಲ್ಲಿಯ ತನಕ ಬರಲು ಬಿಟ್ಟರೆ ಅಲ್ಲಿಯತನಕ....ತನ್ನ ಘಾತವಾಗುವುದೆಂದು ಅವಳಿಗೆ ತೋರಿತು.

ಅವಳು ಅಲುಗಾಡದಂತೆ ಹಲವು ನಿಮಿಷಗಳವರೆಗೆ ಆತ ಅವಳನ್ನು ಅಪ್ಪಿ ಕೊಂಡಿದ್ದ. ಅವನ ಬಾಯಿ ಅವಳದನ್ನು ತೆರೆಯಿಸಿತ್ತು, ಅವನ ಹಲ್ಲುಗಳು ಅವಳ ತುಟಿಗಳನ್ನು ನೋಯಿಸುತ್ತಿದ್ದುವು. ಅವಳಿಗೆ ಕೊಂಚ ದುಃಖವಾಯಿತು, ಸಂತೋಷವೂ ಆಯಿತು.

“ ಪ್ಲೀಜ್, ಹೀಗೆಲ್ಲ ಮಾಡಬಾರದು. ಇದು ಚಲೋದಲ್ಲ...

“ ಹಿ ಹಿ,” ಎಂದನಾತ.

ಮತ್ತೆ ಅವನ ಕೈಗಳು ಅವಳ ಮುಖವನ್ನು ಮೃದುವಾಗಿ ಹಿಡಿದು ಕೊಂಡುವು. ಅವನ ಬಾಯಿ ಅವಳದನ್ನು ಮುತ್ತಿತು.

“ ಶಾಂತೀ, ನನ್ನ ಶಾಂತೀ, ನೀನು ನನ್ನವಳಲ್ಲವೆ ?” ಎಂದು ಅವನು ಹುಚ್ಚು ಹುಚ್ಚಾಗಿ ಆಡಿದ.

ಹಠಾತ್ತಾಗಿ ಮಂತ್ರದ ಬಾಗಿಲೊಂದು ತೆರೆದಂತಾಯಿತು. ಅವಳ ತೋಳುಗಳೂ ಮುಂದುವರೆದು ಅವನನ್ನು ಕಾತರದಿಂದ ಬಳಸಿಕೊಂಡುವು. ಆ ಭದ್ರಾಲಿಂಗನದಲ್ಲಿ ಅವರು ಬಾಹ್ಯ ಪ್ರಪಂಚವನ್ನೆಲ್ಲ ಮರೆತುಬಿಟ್ಟರು.

ಕೆಲ ನಿಮಿಷಗಳ ತರುವಾಯ ಅವನು ಅವಳನ್ನು ಮುಕ್ತಗೊಳಿಸಿದ. ಅವಳ ತಲೆ ಅವನ ಭುಜದ ಮೇಲೊರಗಿಕೊಂಡಿತು. ಅವಳು ದೀರ್ಘವಾಗಿ ಉಸಿರುಬಿಟ್ಟು ತೃಪ್ತಿಯಿಂದ ಅವನನ್ನು ದಿಟ್ಟಿಸುತ್ತಾ ಮೃದುವಾಗಿ ನಕ್ಕಳು.

ಮತ್ತೆ ಅವನ ಕೈಗಳು ಅವಳ ದೇಹದ ಮೇಲೆಲ್ಲ ನಿಧಾನವಾಗಿ ಆಡ ತೊಡಗಿದುವು.

" ಇನ್ನು ಹೊರಡೋಣ," ಎಂದಳಾಕೆ.

" ಈಗಲೇ ?"

" ಬಹಳ ತಡವಾಯಿತು," ಎಂದು ಅವಳು ಹೇಳಿದಳು : ತಡವಾದರೂ ಚಿಂತೆಯಿಲ್ಲ ಎನ್ನುವ ದನಿಯಲ್ಲಿ.

ಆತ ನಕ್ಕು ಮತ್ತೆ ಅವಳನ್ನು ತಬ್ಬಿಕೊಳ್ಳಲು ಮುಂದಾದ. ಆದರಾಕೆ ತನ್ನ ಕೈಗಳನ್ನು ಚಾಚಿ,

" ಬೇಡ ಬೇಡಾ," ಎಂದಳು.

" ಏನು ಬೇಡಾ ?" ಎಂದನಾತ ನಗುತ್ತಾ – ಅವನ ಕೈಗಳು ಅವಳ ಎದೆಯ ಮೇಲಾಡತೊಡಗಿದುವು. ಅವಳು ತನ್ನ ಕಣ್ಣುಗಳನ್ನು ಮುಚ್ಚಿ ಕೊಂಡಳು, ಉಸಿರು ಬಿಗಿ ಹಿಡಿದಳು. ದೇಹವನ್ನೆಲ್ಲ ಬೆಂಕಿಯಲ್ಲೊಡ್ಡುವಂಥ ಬಯಕೆ ಅವಳನ್ನಾವರಿಸಿತು. ಅವನನ್ನು ಗಟ್ಟಿಯಾಗಿ ಅಪ್ಪಿಕೊಂಡು ಅವನ ಅಂತರಂಗದಲ್ಲಿ ಪ್ರವೇಶಿಸಬೇಕೆಂದು ಅವಳಿಗೆನ್ನಿಸಿತು. ಆದರೆ....ಆದರೆ....

ಬಯಕೆಯನ್ನು ಅದುಮಿಕೊಂಡು ಅವಳು ತುಂಬ ಕಷ್ಟದಿಂದ ಹೇಳಿದಳು :

" ಇದು ಚಲೋದಲ್ಲ....ಚಲೋದಲ್ಲ....ಬೇಡ ಬೇಡ...."

ಆತ ಹಿಡಿತವನ್ನು ಸಡಲಿಸಿದ, ಅವಳ ತಲೆಗೂದಲಿನ ಮೇಲೆ ಮೆಲ್ಲಗೆ ಕೈಯಾಡಿಸುತ್ತ ಹೇಳಿದ :

" ನೀನಿಲ್ಲದೆ ನಾನು ಬದುಕುವದೇ ಸಾಧ್ಯವಿಲ್ಲ ಶಾಂತಾ. ಆದರೆ.... ಆದರೆ...."

" ಏನು ಸದಾನಂದಾ ?"

"ನಾವಿಬ್ಬರೂ ಮದುವೆಯಾಗುವದೂ ಸಾಧ್ಯವಿಲ್ಲ ಅಲ್ಲವೇ?"

ಒಂದು ಕ್ಷಣ ಮೌನವಾಗಿದ್ದು ಅನಂತರ ಅವಳೆಂದಳು :

"ಯಾಕೆ ಸಾಧ್ಯವಿಲ್ಲ ಅಂತೀರಿ?"

"ಸಾಧ್ಯವಿದೆಯೇ ಶಾಂತಾ? ನೀನು ಸಿದ್ಧಳಿದ್ದೀಯಾ?"

ಅವಳು ಹುಸಿಮುನಿಸನ್ನು ನಟಿಸುತ್ತ ನುಡಿದಳು :

"ಎಲ್ಲಾ ಬಾಯಿಬಿಟ್ಟೇ ಹೇಳಬೇಕೇನು ನಿಮಗೆ? ನೀವು ಎಳೇಮಗು ಅಂತ ಲೀಲಾ ಹೇಳುವದು ಇದಕ್ಕೇ."

ಆತ ನಗುತ್ತಾ ಕತ್ತು ಕೊಡಹಿದ. ತನ್ನ ಬಲಗೈಯ ತರ್ಜನಿಯಿಂದ ಅವಳ ಬಾಯಿಯ ಮೂಲೆಯೊಂದನ್ನು ಮೃದುವಾಗಿ ತಟ್ಟಿದ. ಆ ಕ್ರಿಯೆಯಲ್ಲೂ ಯಾವುದೋ ಬಯಕೆ ಅವಿತುಕೊಂಡಿದ್ದಿತು.

ಅವಳಿಗೆ ಸ್ವಲ್ಪ ಅತೃಪ್ತಿಯೆನಿಸಿತು. ಇವರು ಅದೇಕೆ ಇಷ್ಟು ಅನುಮಾನಿಸುತ್ತಿದಾರೆ? ಹಿಂಜರಿಯುತ್ತಿದಾರೆ? ತನ್ನನ್ನು ಮದುವೆಯಾಗಬೇಕೆಂಬ ಅಪೇಕ್ಷೆಯೇನೊ ಇವರಿಗಿರುವುದು ನಿಜ. ತನ್ನನ್ನಿವರು ಪ್ರೀತಿಸುವುದೂ ನಿಜ. ಆದರೆ, ತಮ್ಮದು ಸಾಮಾನ್ಯವಾದ ಮದುವೆಯಲ್ಲ. ತಮ್ಮಿಬ್ಬರ ನಡುವೆ ಜಾತಿಗಳ ಗೋಡೆ ಅಡ್ಡ ನಿಂತಿವೆ. ಆ ಗೋಡೆಗಳ ಮೇಲೇರಿ ದಾಟಿ ತಾವಿಬ್ಬರೂ ಒಂದುಗೂಡಬೇಕಾಗಿದೆ. ಅದಕ್ಕೆಲ್ಲ ಧೈರ್ಯ ಬೇಕು, ಸಾಹಸದ ಮನೋವೃತ್ತಿ ಬೇಕು. ಇವರಲ್ಲಿ ಆ ಸಾಮರ್ಥ್ಯವಿದ್ದ ಹಾಗೆ ತೋರುವುದಿಲ್ಲ. ಲೀಲಾ ಹೇಳುವುದೇ ನಿಜ. ಸದಾನಂದ ಒಂದು ಮಗುವಿದ್ದ ಹಾಗೆ. ತಾನೇ ಕೈ ಹಿಡಿದು ಕರೆದೊಯ್ಯಬೇಕು ಇವರನ್ನು. ತಾನು ಮುಂದಾಗದಿದ್ದಲ್ಲಿ ಇವರು ತಟಸ್ಥರಾಗಿ ಉಳಿಯುವುದು ಖಚಿತವೆಂದೇ ತೋರುತ್ತದೆ.

"ಆ ಫೌಜದಾರರ ಕಾಟ ತಪ್ಪಿತೋ, ಇನ್ನೂ ಇದೆಯೋ?" ಎಂದು ಕೇಳಿದ ಸದಾನಂದ.

ಅವಳು ಮೇಲಕ್ಕೆದ್ದು ಸೀರೆಯನ್ನು ಕೊಡಹುತ್ತ ಹೇಳಿದಳು :

"ನನ್ನ ಪರೀಕ್ಷೆ ಮುಗಿಯುವವರೆಗೂ ಸುಮ್ಮನಿರುತ್ತಾರಷ್ಟೆ. ಆಮೇಲೆ ಮತ್ತೆ...."

ಸದಾನಂದ ಮತ್ತೆ ಮಾತನಾಡಲಿಲ್ಲ. ಏನು ಮಾತನಾಡುವುದೆಂಬುದೇ ಅವನಿಗೆ ಹೊಳೆಯದಾಗಿದ್ದಿತು.

೧೫

೨೩

"ಮಾಡುವದನ್ನು ಪೂರಾ ಮಾಡಬೇಕು. ಅರ್ಧಮರ್ಧ ಮಾಡಿದರೇನು ಉಪಯೋಗ?" ಎಂದ ಪರಸಣ್ಣವರ್. ಶಾಂತಳನ್ನು ಮನೆಗೆ ಕಳುಹಿಸಿ ಕೊಟಡಿಗೆ ಮರಳಿ ಬಂದು ಕೆನ್ನೆಗೆ ಕೈಯಿಟ್ಟು ಯೋಚಿಸುತ್ತ ಕುಳಿತಿದ್ದ ಸದಾನಂದನನ್ನು ಕಂಡಾಗ ಕನಿಕರ ಬಂದಿತ್ತು ಪರಸಣ್ಣವರನಿಗೆ. ಅಳುಬುರುಕತನವನ್ನು ಅವನೆಂದೂ ಸೈರಿಸುತ್ತಿರಲಿಲ್ಲ. ಸ್ವಭಾವತಃ ಅವನು ದಿಟ್ಟ, ಧೀರ. ಗಂಡಾಂತರಗಳನ್ನು ಪ್ರೀತಿಸುವವನು. ಆ ಸ್ವಭಾವವೇ ಅವನನ್ನು ಆಟಗಳಲ್ಲಿ ತೊಡಗಿಸಿದ್ದುದು. ಕಾಲೇಜಿನ 'ಚಾಂಪಿಯನ್' ಆಗಬೇಕೆಂಬ ಅವನ ಬಲು ದಿನಗಳ ಆಕಾಂಕ್ಷೆಯೂ ಫಲಿಸಿದ್ದುದು ಅದೇ ದೃಢ ಸಂಕಲ್ಪದಿಂದ. ಸಹಜವಾಗಿಯೆ ಅವನಿಗೆ ದುರ್ಬಲತೆಯೆಂದರೆ ಬೇಸರವಾಗುತಿತ್ತು. ಅಂದು ಸಾಯಂಕಾಲ ಶಾಂತಳ ಜತೆಗೆ ಸದಾನಂದ ತಿರುಗಾಡಲು ಹೋಗುವುದನ್ನು ಪರಸಣ್ಣವರ್ ಅಕಸ್ಮಾತ್ತಾಗಿ ನೋಡಿದ್ದ. ತಿರುಗಾಟದಿಂದ ಹಿಂದಿರುಗಿದ ತರುವಾಯ ಸದಾನಂದ ಹಾಗೆ ಜೋಲುಮೋರೆ ಮಾಡಿಕೊಂಡು ಕುಳಿತುದನ್ನು ಕಂಡು ಪರಸಣ್ಣವರನಿಗೆ ಕನಿಕರವೆನಿಸಿತ್ತು.

ಅವನ್ನು ಮತ್ತೆ ಹೇಳಿದ:

"ಅರ್ಧಮರ್ಧ ಮಾಡಿ ಅಂಜಿ ಸುಮ್ಮನಾಗುವದರಿಂದ ಏನು ಉಪಯೋಗ ಸದಾನಂದ? ಕ್ರಿಕೆಟ್ ಆಡಲು ಹೋದವನು ಬೌಲಿಂಗ್‌ನ ಜೋರು ಕಂಡು ಹೆದರಿ ಬ್ಯಾಟು ಚೆಲ್ಲಿ ಬಂದ ಹಾಗೆ ಮಾಡುತ್ತೀರಿ ನೀವು."

“ ನಾನು ಏನು ಮಾಡಬೇಕು ಅನ್ನುತ್ತೀರಿ ನೀವು ?” ಬಳಲಿದ ದನಿಯಲ್ಲಿ ಕೇಳಿದ ಸದಾನಂದ.

“ ಸ್ಪಷ್ಟವಾಗಿ ಮಾತಾಡುತ್ತಿದೇನೆ. ಕ್ಷಮಿಸಿರಿ. ನಿಮ್ಮಂಥವರು ಲವ್ ಮಾಡುವದಕ್ಕೂ ನಾಲಾಯಖರು. ನಿಮ್ಮಂಥವರಿಗೆ ಮರುಳಾಗುವ ಹುಡುಗಿ ಯರೂ ಮುರ್ದೈವಿಗಳು....”

ಹಣೆಗೆ ಕೈಯಿಟ್ಟುಕೊಂಡು ಸುಮ್ಮನೆ ಕುಳಿತಿದ್ದ ಸದಾನಂದ. ಪರ ಸಣ್ಣವರ್ ಮುಂದುವರೆಸಿದ :

“ ಇಂದಿನ ಪ್ರಪಂಚವೆಂಥಾದ್ದು ಅನ್ನುವದು ಗೊತ್ತಿದೆಯೋ ಇಲ್ಲವೋ ನಿಮಗೆ ? ಇಲ್ಲಿ ಧೈರ್ಯವಿದ್ದವರು ಬದುಕುತ್ತಾರೆ. ದುರ್ಬಲರನ್ನು ಯಾರೂ ಕೇಳುವದಿಲ್ಲ. ಅವರ ಬಯಕೆಗಳೂ ಫಲಿಸುವದಿಲ್ಲ. ಸುಮ್ಮನೆ ನರಳಿ ನರಳಿ ಒಂದು ದಿನ ಸತ್ತು ಹೋಗುವದೇ ಅವರ ಪಾಡು. ನೀವೂ ಕೂಡಾ ಅಳುಬುರುಕರೇ ಎಂದು ಕಾಣುತ್ತದೆ.”

“ ನನ್ನ ತೊಂದರೆಯೇನೆಂಬುದು ನಿಮಗೆ ಸರಿಯಾಗಿ ಗೊತ್ತಿಲ್ಲ ಪರಸಣ್ಣವರ್.”

“ ಎಲ್ಲಾ ಗೊತ್ತಿದೆ. ನನಗೆ ಗೊತ್ತಿಲ್ಲದ್ದು ಏನೂ ಇಲ್ಲ. ಅವಳು ಬ್ರಾಹ್ಮಣರ ಹುಡುಗಿ. ಅವಳ ಮನೆಯವರ ಒಪ್ಪಿಗೆಯಿಂದ ನೀವು ಅವಳನ್ನು ಮದುವೆಯಾಗುವಂತಿಲ್ಲ. ಇದೇ ಅಲ್ಲವೇನು ನಿಮ್ಮ ತೊಂದರೆ ? ನಾನೇ ಏನಾದರೂ ಇಂಥ ಪ್ರಸಂಗದಲ್ಲಿ ಸಿಕ್ಕಿಕೊಂಡಿದ್ದರೆ ಏನು ಮಾಡುತ್ತಿದ್ದೆ ಗೊತ್ತೇ ?”

“ ಏನು ?”

“ ಆ ಹುಡುಗಿಯನ್ನು ನಾನು ಅಷ್ಟು ಆಳವಾಗಿ ಪ್ರೀತಿಸಿದ್ದರೆ ನಿಮ್ಮ ಹಾಗೆ ಹಣೆಗೆ ಕೈಯಿಟ್ಟು ಕೂಡುತ್ತಿರಲೇ ಇಲ್ಲ. ಎಂದೋ ಅವಳನ್ನು ಹಾರಿಸಿ ಕೊಂಡು ಹೋಗಿ ರಜಿಸ್ಟರ್ ಮ್ಯಾರೇಜ್ ಮಾಡಿಕೊಳ್ಳುತಿದ್ದೆ. ಅವಳು ವಯಸ್ಕಳಾಗಿದ್ದಾಳೆ. ತಾನು ಒಲಿದವನನ್ನು ಮದುವೆಯಾಗಲು ಅವಳಿಗೆ ಅಧಿಕಾರವಿದೆ. ಹೌದೋ ಅಲ್ಲವೋ ?”

“ ಹೌದು. ಆದರೂ....”

“ ಮತ್ತೆ ಆದರೂ ಅನ್ನುತ್ತೀರಲ್ಲ ! ನಾನೆಂದೂ ಹೀಗೆ ಮಿಾನ ಮೇಷ

ಮಾಡುತ್ತಾ ಕೂಡುವವನಲ್ಲ. ಅಲ್ಲದೆ, ಯಾವ ಹುಡುಗಿಗೂ ನಾನು ನನ್ನ ಹೃದಯವನ್ನು ಅರ್ಪಿಸುವದಿಲ್ಲ. ಹುಡುಗಿಯರನ್ನು ಪ್ರೀತಿಸಬಹುದು, ಅವರ ಸಹವಾಸ ಸುಖ ದೊರಕಿಸಬಹುದು, ಆದರೆ ಅವರಿಗೆ ಪೂರ್ಣವಾಗಿ ಹೃದಯವನ್ನೇ ಕೊಟ್ಟು ಬಿಡಬಾರದು. ಬಹಳ ಆಳವಾಗಿ ಪ್ರೀತಿಸುವುದೂ ತಪ್ಪೇ. ಎಷ್ಟು ಬೇಕೋ ಅಷ್ಟೇ ಇರಬೇಕು ಸ್ನೇಹ...."

"ಅದೆಲ್ಲಾ ನಿಮ್ಮ ತತ್ವಜ್ಞಾನವಾಯಿತು."

"ಇದು ತತ್ವಜ್ಞಾನವಲ್ಲ. ವ್ಯವಹಾರದ ಜ್ಞಾನ. ಇಂದಿನ ಪ್ರಪಂಚದಲ್ಲಿ ಪ್ರತಿಯೊಬ್ಬನೂ ತನ್ನ ಸುಖವನ್ನೇ ನೋಡಿಕೊಳ್ಳುತ್ತಾನಲ್ಲದೆ ಬೇರೆಯವರ ದನ್ನಲ್ಲ. ಶಿಕ್ಷಕರು ಪ್ರೊಫೆಸರರು ರಾಜಕಾರಣಿಗಳು ಕೂಲಿಗಳು ರೈತರು ಯಾರನ್ನೇ ನೋಡಿರಿ. ಎಲ್ಲರೂ ತಮ್ಮ ತಮ್ಮ ಸ್ವಾರ್ಥಕ್ಕಾಗೇ ದುಡಿಯು ತ್ತಿದ್ದಾರೆ. ರಾಷ್ಟ್ರಕ್ಕಾಗಿ ದುಡಿಯಬೇಕು, ತ್ಯಾಗ ಮಾಡಬೇಕು, ಸೇವೆ ಮಾಡಬೇಕು, ಆದರ್ಶವಾದಿಗಳಾಗಬೇಕು ಅನ್ನುವದೆಲ್ಲ ಬರೀ ಜೊಗಳೆ. ವಿನೋಭಾನಂಥ ನಾಲ್ಕೈದು ಮಂದಿಯನ್ನು ಬಿಟ್ಟರೆ ಇಡೀ ಹಿಂದುಸ್ಥಾನದಲ್ಲೇ ಆದರ್ಶವಾದಿಗಳು ಅಪರೂಪ. ಮನುಷ್ಯ ಮನುಷ್ಯರ ಸಂಬಂಧ ಹೆಣ್ಣು ಗಂಡಿನ ಸಂಬಂಧ ಎಲ್ಲಾ ಬದಲಾಗಿ ತಲೆ ಕೆಳಗಾಗಿ ನಿಂತಿರುವಾಗ ಆದರ್ಶ ಆದರ್ಶ ಅಂತ ಅಳುತ್ತ ಕೂಡುವದರಿಂದೇನು ಉಪಯೋಗ? ನಾಳೆ ಏನಾಗುವದೋ ನಾಡದು ಏನಾಗುವದೋ ಎಂಬ ಭರವಸೆಯಿಲ್ಲ. ಯಾವಾಗ ಮೂರನೆಯ ಮಹಾಯುದ್ಧ ಸುರುವಾದೀತೆಂಬ ನಿಯಮವಿಲ್ಲ. ಆಟಂಬಾಂಬ್, ಹೈಡ್ರೋಜನ್ ಬಾಂಬುಗಳ ಯುಗದಲ್ಲಿ ನಾವು ಬದುಕಬೇಕಾಗಿದೆ. ಧೈರ್ಯ, ಕೆಚ್ಚು ಇದ್ದವನೇ ಇಂದು ಬದುಕಬಲ್ಲ. ಇಲ್ಲದ ಆದರ್ಶ ನಂಬಿಕೊಂಡು ದುರ್ಬಲತೆಯಿಂದ ಕಣ್ಣೀರು ಸುರಿಸುವವರು ಬದುಕಿಯೂ ಸತ್ತಂತೆ. ನಾಳೆ ಹಿಂದುಸ್ಥಾನದ ಮೇಲೆ ದಾಳಿಯಾಯಿತೆಂದು ತಿಳಿದುಕೊಳ್ಳಿರಿ. ನಾನು ಸಂತೋಷದಿಂದ ಏರ್‌ಫೋರ್ಸ್ ಸೇರುತ್ತೇನೆ. ಮರುದಿನವೆ ನಾನು ಸಾಯುವ ಪ್ರಸಂಗ ಬಂದರೂ ನನಗೆ ದುಃಖವಾಗುವದಿಲ್ಲ. ಯಾಕಂದರೆ ಈ ಜಗತ್ತಿನಲ್ಲಿ ಅನುಭವಿಸಬೇಕಾದ ಯಾವ ಸುಖವನ್ನೂ ನಾನು ಅನುಭವಿಸದೆ ಬಿಟ್ಟಿಲ್ಲವಲ್ಲ....ನೀವು ಮಾತ್ರ ಸೈನ್ಯಕ್ಕೆ ಸೇರುವದಕ್ಕೂ ಹಿಂದೆ ಮುಂದೆ ನೋಡುವದು ಖಂಡಿತ. ಬೇರೆಯವರನ್ನು ಕೊಲ್ಲುವದು ಪಾಪ, ಹಿಂಸೆ ಮಾಡುವದು ಪಾಪ....ಕೈಯಲ್ಲಿ ಬಂದೂಕನ್ನಾದರೂ

ಹ್ಯಾಗೆ ಹಿಡಿಯುವದು, ಅಲ್ಲವೆ ?" ಎಂದು ಹೇಳುತ್ತಾ ಪರಸಣ್ಣವರ್ ನಗತೊಡಗಿದ.

"ಸರಿ. ಭಾಷಣ ಬಹಳ ಉದ್ದವಾಯಿತು. ನಿಮ್ಮ ಮನಸ್ಸು ನೋಯಿಸುವ ಮಾತು ಆಡಿದ್ದರೆ ಕ್ಷಮಿಸಿರಿ. ನಾನೀಗ ಹೋಗುತ್ತೇನೆ. ಲೂಸಿ ಕಾಯುತ್ತಿರಬಹುದು." ಪರಸಣ್ಣವರ್ ಎದ್ದು ಕೋಟನ್ನು ಭುಜದ ಮೇಲೊಗೆದು ಕೊಂಡು ಸಿಗರೇಟು ಪೆಟ್ಟಿಗೆಯನ್ನು ಪ್ಯಾಂಟಿನ ಕಿಸೆಗೆ ಸೇರಿಸುತ್ತ,

"ಹ್ಯಾಗೂ ರೂಮಿನಲ್ಲೆಲ್ಲಾ ನೀವೊಬ್ಬರೇ ಇರುತ್ತೀರಿ. ಆ ಹುಡುಗಿಯನ್ನು ಕರೆದುಕೊಂಡು ಬಂದು ಮಜಾ ಮಾಡಬಾರದೇಕೆ? ಏನೋಪ್ಪಾ, ಕವಿಗಳ ನಡತೆ ಅರ್ಥವೇ ಆಗುವದಿಲ್ಲ. ವಿಚಿತ್ರ ಪ್ರಾಣಿಗಳು!" ಎಂದು ಹೇಳಿ ತುಟಿಗಳಲ್ಲೇ ನಗುತ್ತಾ ಹೊರಟು ಹೋದ.

ಅವನ ಮಾತುಗಳನ್ನೇ ಮೆಲಕು ಹಾಕುತ್ತ ಎಷ್ಟೋ ಹೊತ್ತು ಹಾಗೆಯೆ ಕುಳಿತಿದ್ದ ಸದಾನಂದ. ಮಾವಿನ ಗಿಡದ ಅಡಿಯಲ್ಲಿ ಶಾಂತಳನ್ನು ತಬ್ಬಿಕೊಂಡು ಚುಂಬಿಸಿದಾಗ ರಾತ್ರೆ ಅವಳನ್ನು ಕೊಟಡಿಗೆ ಕರೆದೊಯ್ಯಬೇಕೆಂದು ಅವನಿಗೂ ಅನ್ನಿಸಿದ್ದಿತು. ಪರಸಣ್ಣವರ್ ಹಾಗೆ ಮಾಡುವದಿಲ್ಲವೆ? ಲೂಸಿ ಮಾಡುವ ದಿಲ್ಲವೆ? ಶಿವಣ್ಣ ಮಾಡಲಿಲ್ಲವೆ? ಇನ್ನೂ ಎಷ್ಟೋ ಜನ ಮಾಡುವುದಿಲ್ಲವೆ? ಅವರಂತೆ ತಾನೂ ಯಾಕೆ ಮಾಡಬಾರದು? "ಥೂ. ಅದು ಪಾಪ. ಅದು ವ್ಯಭಿಚಾರ. ಅದು ಕಾಮ. ಅದು ಪಶುತ್ವ," ಎಂದು ಅವನ ಒಳದನಿ ವಿರೋಧ ಸೂಚಿಸಿತ್ತು. ಯೌವನ ಸಹಜವಾದ ಬಯಕೆ ಸಿಡಿದೆದ್ದು ಅವನ ಆತ್ಮವನ್ನು ಗದರಿಸಿ, "ಪಾಪ, ಪಶುತ್ವ, ವ್ಯಭಿಚಾರ ಎಂಬವು ಕೇವಲ ಶಬ್ದಗಳಷ್ಟೆ. ಅವುಗಳಿಗೆ ಹೆಚ್ಚಿನ ಅರ್ಥವಿಲ್ಲ. ಮದುವೆಯಾಗದ ಪ್ರಣಯಿಗಳು ಬಯಸುವದೂ ಸಂಭೋಗವನ್ನೇ. ಮದುವೆಯಾದವರು ಮಾಡುವದೂ ಸಂಭೋಗವನ್ನೇ. ತಾಳಿ ಕಟ್ಟಿದ ಮಾತ್ರಕ್ಕೆ ಸಂಭೋಗ ಪವಿತ್ರವಾಗುವದೇನು? ಪ್ರೇಮದ ಪೂರ್ಣ ರೂಪವೇ ಕಾಮ," ಎಂದು ವಾದಿಸಿತ್ತು. ತನ್ನ ಮನಸ್ಸಿನಲ್ಲಿ ಸುಳಿಯುತ್ತಿದ್ದ ವಿಚಾರಗಳನ್ನು ಗುರುತಿಸಿಕೊಂಡಾಗ ಅವನ ಎದೆ ಅಳುಕಿದ್ದಿತು. ಶಾಂತಳ ಬಗ್ಗೆ ಅಂಥ ಯೋಚನೆ ಬಂದಿತಲ್ಲಾ ಎಂದು ವ್ಯಸನವಾಗಿತ್ತು. ಆದರೂ ವಾಸ್ತವವಾಗಿ ತನಗೆ ಅಂಥ ಬಯಕೆಯಾಯಿತೆಂಬ ಸತ್ಯವನ್ನು ಅವನು ಮರೆ ಮಾಚುವಂತಿರಲಿಲ್ಲ. "ಇದೆಲ್ಲ ನೈಸರ್ಗಿಕ, ಸಹಜ ಅನ್ನುವ ಮಾತೇ

ನಿಜವಿರಬೇಕು. ಸುಮ್ಮನೆ ಆತ್ಮವಂಚನೆ ಮಾಡಿಕೊಳ್ಳುವದರಿಂದೇನು ಪ್ರಯೋಜನ?" ಎಂದು ಅವನು ತನಗೆ ತಾನೆ ಕೇಳಿಕೊಂಡಿದ್ದ. ಆದರೂ ಪ್ರಪಂಚದಲ್ಲಿ ಒಳ್ಳೆಯದು ಕೆಟ್ಟದು ಎಂಬ ತಾರತಮ್ಯವುಂಟು. ಕಾಡು ಸ್ಥಿತಿಯಲ್ಲಿದ್ದ ಮಾನವಪ್ರಾಣಿ ಪ್ರಗತಿ ಹೊಂದುತ್ತ ಬಂದು ಇಂದು ನಾಗರಿಕತೆಯ ಶಿಖರವೇರಿ ನಿಂತಿದ್ದಾನೆ. ಅವನ ಮೂಲಭೂತ ಪ್ರವೃತ್ತಿಯೇನೂ ಮಾರ್ಪಾಡು ಹೊಂದಿರಲಿಕ್ಕಿಲ್ಲ, ಸ್ವೈಸರ್ಗಿಕ ಭಾವರಾಗಗಳು ಅಂದಿನಂತೆ ಇಂದೂ ಅವನನ್ನು ಪೀಡಿಸುತ್ತಿರಬಹುದು. ಆದರೂ ಸಮಾಜದ ಹಿತಕ್ಕಾಗಿ ಸುವ್ಯವಸ್ಥೆಗಾಗಿ ಮಾನವನು ಕೆಲವು ಕಟ್ಟುಪಾಡುಗಳನ್ನು ವಿಧಿಸಿ ಅವುಗಳಂತೆ ಆಚರಿಸಲು ಯತ್ನಿಸುತ್ತಿದಾನೆ. ಸಮಾಜದ ಹಿತಕ್ಕೆ ಘಾತವುಂಟುಮಾಡುವ ಕಾಡು ಪ್ರವೃತ್ತಿಯನ್ನು ಹತೋಟಿಯಲ್ಲಿಟ್ಟುಕೊಳ್ಳುವದೇ ನಾಗರಿಕತೆಯೆಂದು ತೋರುತ್ತದೆ....

ಹಾಗೆ ಯೋಚಿಸಿದಾಗ ಮನಸ್ಸಿನ ಮೇಲೆ ಮತ್ತೆ ಹತೋಟಿಯಿಟ್ಟುಕೊಳ್ಳಲು ಸಾಧ್ಯವಾಗಿತ್ತು.

ಅವನ ಹಾಗೆಯೆ ಶಾಂತಳ ಮನಸ್ಸಿನಲ್ಲೂ ಪರಸ್ಪರ ವಿರುದ್ಧವಾದ ಭಾವರಾಗ ವಿಚಾರಗಳ ಹೋರಾಟ ನಡೆದಿದ್ದಿತು. ಅವನ ಅಪ್ಪುಗೆಯಲ್ಲಿ ತನ್ನನ್ನು ತಾನೆ ಮರೆತಾಗ, ಅವನೊಡನೆ ಪೂರ್ಣವಾಗಿ ಐಕ್ಯಗೊಳ್ಳಲು ಅವಳ ಎದೆ ಕಾತರಿಸಿದ್ದಿತು. ಅವನು ಇನ್ನಿಷ್ಟು ಒತ್ತಾಯ ಮಾಡಿದ್ದಲ್ಲಿ ಅವಳು ವಿರೋಧಿಸದೆ ಸುಮ್ಮನಿದ್ದುಬಿಡಲೂ ಸಾಧ್ಯವಿದ್ದಿತು. ಅವನು ಕರೆದಿದ್ದಲ್ಲಿ ಅವಳು ಕೊಟಡಿಗೆ ಬರಲೂ ಸಿದ್ಧಳಾಗಬಹುದಾಗಿದ್ದಿತು. ನೂರು ಗಂಡುಗಳೆದುರಿಗೆ ವಧುವಾಗಿ ಮುಖ ತೋರಿಸಿ ವರದಕ್ಷಿಣೆಯ ಕಾರಣದಿಂದಾಗಿ ತಿರಸ್ಕೃತಳಾಗಿ ಅವಮಾನಿತಳಾಗಿದ್ದ ಆ ಹೆಣ್ಣು ಜೀವ ತನ್ನ ಎದೆಯಲ್ಲಿ ಹುದುಗಿದ್ದ ಎಲ್ಲ ದುಃಖವನ್ನೂ ಎಲ್ಲ ಯಾತನೆಯನ್ನೂ ಈ ಪ್ರಿಯಕರನ ಅಪ್ಪುಗೆಯಲ್ಲಿ ಮರೆಯಲು ಹಾತೊರೆಯುತ್ತಿದ್ದಿತು. ತಾನು ಮನಃಪೂರ್ವಕವಾಗಿ ಒಲಿದ ಗಂಡಿಗೆ ತನ್ನ ಸರ್ವಸ್ವವನ್ನೂ ಅರ್ಪಿಸುವುದರಲ್ಲಿ ಪಾಪವೇನೂ ಇಲ್ಲವೆಂದೇ ಅವಳ ಮನಸ್ಸು ವಾದಿಸಿತ್ತು. ಆದರೂ ಪ್ರಬುದ್ಧಾವಸ್ಥೆಗೆ ಬಂದಿದ್ದ ಅವಳ ವಿವೇಕ ಒಡನೆಯೆ ಅಡ್ಡಬಂದು ಅವಳ ಉದ್ರೇಕವನ್ನು ಅಡಗಿಸಿ ಮುಂದಿನ ಪರಿಣಾಮಗಳ ಕಡೆಗೆ ಅವಳ ಗಮನವನ್ನು ಸೆಳೆದಿದ್ದಿತು. ಸದಾನಂದನದು ಸ್ಥಿರಸ್ವಭಾವವಲ್ಲವೆಂಬುದನ್ನು ಅವ

ಳಾಗಲೆ ಅರಿತುಕೊಂಡಿದ್ದಳಾದುದರಿಂದ, ತನಗಾಗಿ ಎಂಥ ಸಂಕಟವನ್ನೂ ಎದುರಿಸಬಲ್ಲ ಸಿದ್ಧತೆಯನ್ನಾತ ತೋರ್ಪಡಿಸುವವರೆಗೂ ತಾನು ಸಂಯಮದಿಂದ ವರ್ತಿಸುವುದವಶ್ಯವೆಂಬ ತೀರ್ಮಾನಕ್ಕೆ ಬಂದು ಅವಳು ತನ್ನ ವಿಕಾರಗಳನ್ನು ಅಂಕೆಯಲ್ಲಿಟ್ಟುಕೊಂಡಿದ್ದಳು.

ಆದರೆ ಅವನನ್ನು ಬೀಳ್ಕೊಂಡು ಮನೆಗೆ ಬರುತ್ತಲೂ ವೆಂಕಟೇಶನಾಡಿದ ಮಾತುಗಳಿಂದಾಗಿ ಮತ್ತೆ ಅವಳ ಸಂಯಮ ಸಡಿಲವಾಗತೊಡಗಿತ್ತು. ಕೆಲವು ತಿಂಗಳುಗಳಿಂದ ವೆಂಕಟೇಶನೂ ತಂಗಿಯನ್ನು ಅಸಹನೆಯಿಂದ ನೋಡುತ್ತ ಬಂದಿದ್ದ. ಉಚ್ಚಕುಲದ ಧನಿಕ ಮನೆತನದವರೊಡನೆ ಕೂಡಿಬಂದ ಸಂಬಂಧವನ್ನು ಜಾಗರೂಕತೆಯಿಂದ ಕಾಯ್ದುಕೊಳ್ಳುವ ಹಂಬಲ ಅವನನ್ನು ನಿಷ್ಕರುಣಿಯನ್ನಾಗಿಸತೊಡಗಿದ್ದಿತು. ಗಂಡಸರ ಹಾಗೆ ಹೆಂಗಸರಿಗೂ ಎಲ್ಲ ವಿಷಯಗಳಲ್ಲೂ ಪೂರ್ಣ ಸ್ವಾತಂತ್ರ್ಯವಿರಬೇಕೆಂದು ಕೆಲದಿನಗಳ ಹಿಂದೆ ವಾದಿಸುತ್ತಿದ್ದ ವೆಂಕಟೇಶನೇ ಇಂದು ತಂಗಿಯ ಪ್ರತಿಯೊಂದು ಚಲನವಲನವನ್ನೂ ಚಟುವಟಿಕೆಯನ್ನೂ ಸಂಶಯದ ದೃಷ್ಟಿಯಿಂದ ನೋಡತೊಡಗಿದ್ದ. ತಂಗಿಯಿಂದಾಗಿ ತನ್ನ ಹೆಸರು ಕೆಟ್ಟೀತು, ಸುಭೇದಾರರ ಸಂಬಂಧಕ್ಕೆ ಕಲ್ಲು ಬಿದ್ದೀತು ಎಂಬ ಸಹಜ ಆಶಂಕೆ ಅವನನ್ನು ಯಾವಾಗಲೂ ಬಾಧಿಸುತ್ತಿತ್ತು. ಫೌಜದಾರ್ ಮುಧೋಳರನ್ನು ಲೇವಡಿಮಾಡಿ ನಕ್ಕುಬಿಟ್ಟಿದ್ದ ವೆಂಕಟೇಶನೇ, ವರ ಸಿಕ್ಕುವುದು ಕಠಿಣವಾಗಿರುವ ಈ ಕಾಲದಲ್ಲಿ ತಂಗಿಯನ್ನು ಅವರಿಗೆ ಕೊಡುವುದು ಅಷ್ಟೇನು ಅನುಚಿತವಾಗಲಾರದೆಂದು ಈಚೆಗೆ ಮತ್ತೆ ಮತ್ತೆ ಯೋಚಿಸುತ್ತ ಬಂದಿದ್ದ. ಶಾಂತಳನ್ನೊಪ್ಪಿಸಿ ಎರಡೂ ಮದುವೆಗಳನ್ನು ಒಂದೇ ದಿನ ಜರಗಿಸಿಬಿಟ್ಟು ಭಾರ ಇಳಿಸಿಕೊಳ್ಳಬೇಕೆಂದು ರಾಮಣ್ಣನ ವಿಚಾರ. ಅಣ್ಣನ ಆಲೋಚನೆಗೆ ವೆಂಕಟೇಶನೂ ಅನುಕೂಲವಾಗಿದ್ದ. ಅವಳ ಪರೀಕ್ಷೆ ಮುಗಿಯುವುದನ್ನೇ ಅವರಿಬ್ಬರೂ ಕಾದುಕೊಂಡಿದ್ದರು. ಅದುವರೆಗೂ ಅವಳು ಹಾದಿತಪ್ಪಿ ಹೋಗದಂತೆ ಎಚ್ಚರಿಕೆ ವಹಿಸುವುದು ಅವಶ್ಯವಾಗಿತ್ತು.

ಆದುದರಿಂದಲೇ, ಅಂದು ಅವಳು ರಾತ್ರೆ ಎಂಟು ಗಂಟೆಯ ವೇಳೆಗೆ ಮನೆಗೆ ಬಂದುದನ್ನು ಕಂಡು ಸಹನೆ ತಪ್ಪಿ ಮಾತನಾಡಿದ್ದ ವೆಂಕಟೇಶ.

"ಇದುವರೆಗೆ ಎಲ್ಲಿ ಏನು ಚಕ್ಕಂದ ನಡೆಸಿದ್ದೆಯೇ ಶಾಂತೀ?"

ಅವಳು ದಿಗಿಲುಗೊಂಡು ಒಂದು ಕ್ಷಣ ಜೀವವಿಲ್ಲದ ಮೂರ್ತಿಯಂತೆ

ಸ್ತಬ್ಧವಾಗಿ ನಿಂತುಕೊಂಡಿದ್ದಳು. ವೆಂಕಟೇಶನ ಬಾಯಿಯಿಂದ ಅವಳು ಅಂಥ ಬಿರುನುಡಿಗಳನ್ನು ಕೇಳುತ್ತಿದ್ದುದು ಅದೇ ಮೊದಲ ಬಾರಿ. ಸಹಜವಾಗಿಯೆ ಅವಳಿಗೆ ಬಲು ದುಃಖವಾಯಿತು, ಬೇಸರವಾಯಿತು. ನಿಧಾನವಾಗಿ ಆ ಬೇಸರು ರೋಷವಾಗಿ ಪರಿವರ್ತಿತವಾಯಿತು. ತನ್ನನ್ನು ಆ ಬಗೆಯಿಂದ ನಡಸಿ ಕೊಳ್ಳಲು ಏನು ಅಧಿಕಾರ ವೆಂಕಟೇಶನಿಗೆ?

"ನಾಲಿಗೆ ಬಿಗಿಹಿಡಿದು ಮಾತಾಡು ವೆಂಕಣ್ಣಾ."

"ಹಾ?" ಎಂದು ಉದ್ಗಾರ ತೆಗೆದು ಆತ ಒಂದು ನಿಮಿಷ ಅವಳನ್ನು ಮಿಕಿಮಿಕಿ ನೋಡುತ್ತ ನಿಂತ. ಇವಳು ತಮ್ಮನ್ನು ಪ್ರತಿಭಟಿಸಲೂ ಸಮರ್ಥ ಳಾದಳಲ್ಲವೆ! ಇವಳಿಗೆ ಸಲಿಗೆ ಕೊಟ್ಟು ಅವರಿವರೊಡನೆ ತಿರುಗಾಡುವುದಕ್ಕೂ ಸ್ವಾತಂತ್ರ್ಯ ಕೊಟ್ಟದ್ದೇ ತನ್ನ ತಪ್ಪು. ಮೊದಲಿನಿಂದಲೂ ಒಂದು ಗೆರೆಯ ಈಚೆಗೇ ಇವಳನ್ನು ನಿಲ್ಲಿಸಿಕೊಂಡಿದ್ದಲ್ಲಿ ಇವಳು ಹೀಗೆ ಉದ್ಧಟಳಾಗುತ್ತಿರಲಿಲ್ಲ. ಇನ್ನು ಇವಳು ತಮ್ಮ ಮರ್ಯಾದೆ ತೆಗೆಯುವುದು ಖಂಡಿತವೆಂದೇ ತೋರುತ್ತದೆ. ಎಲ ಎಲಾ....ಏನು ಮಾಡುವುದು?

ಮಾತಿನ ಚಾಟಿಯನ್ನು ಮಿಂಚಿನಂತೆ ಬೀಸಿ ಅವಳು ಬಿರುಬಿರನೆ ನಡೆದು ತನ್ನ ಕೊಟಡಿಗೆ ಹೊರಟುಹೋದಳು. ಹೆಡೆ ತುಳಿಸಿಕೊಂಡ ನಾಗರದಂತೆ ಅವಳ ವ್ಯಕ್ತಿತ್ವ ಕೆರಳಿ ನಿಂತಿತ್ತು. ಐದಾರು ನಿಮಿಷಗಳ ಕಾಲ ಆ ನಾರಿಯ ಮೈಯಲ್ಲಿ ಮಾರಿಯ ಸಂಚಾರವಾದ ಹಾಗಿತ್ತು. ತನ್ನ ಆತ್ಮಗೌರವವನ್ನೂ ಸ್ವಾತಂತ್ರ್ಯ ವನ್ನೂ ಉಳಿಸಿಕೊಂಡು, ಆ ಮನೆಯನ್ನು ತೊರೆದು, ಆ ರಾತ್ರಿಯೇ ಸದಾನಂದನ ಹತ್ತಿರ ಹೋಗಿ, ಅವನೊಡನೆಯೆ ಇದ್ದು, ತನ್ನ ಮೇಲೆ ದಬ್ಬಾಳಿಕೆ ನಡಸ ಬಯಸುವವರನ್ನೆಲ್ಲ ಎದುರಿಸಬೇಕೆಂಬ ಬಲವತ್ತರವಾದ ಅಪೇಕ್ಷೆ ಅವಳ ಎದೆಯಲ್ಲಿ ತುಂಬಿ ಬಂದಿತ್ತು.

ಪಡಸಾಲೆಯಲ್ಲಿ ನರಳುತ್ತ ಮಲಗಿದ್ದ ಮಧ್ವರಾಯರು, ಅಣ್ಣಾ ತಂಗಿಯರ ವಾದದಿಂದ ಬೇಸರಗೊಂಡು ಮೆಲ್ಲಗಿನ ದನಿಯಲ್ಲಿ ನುಡಿದರು:

"ಪಾಪ, ಆ ಹುಡುಗಿಯನ್ನು ನೀವು ಯಾಕೆ ಹರಿದುಕೊಂಡು ತಿನ್ನು ತ್ತೀರಿ ವೆಂಕಣ್ಣಾ?"

ಹಲವು ದಿನಗಳಿಂದ ಅವರ ಕಾಯಿಲೆ ಉಲ್ಬಣಾವಸ್ಥೆಗೇರಿದ್ದಿತು. ದಿನೇ ದಿನೇ ಅವರು ಹೆಚ್ಚು ಹೆಚ್ಚಾಗಿ ನಿಶ್ಶಕ್ತರಾಗುತ್ತ ಬಂದಿದ್ದರು. ತಮ್ಮ ಅಂತ್ಯಕಾಲ

ಸವಿಾಪಿಸುತ್ತಿದೆಯೆಂದೇ ಅವರಿಗೆನ್ನಿಸುತ್ತಿದ್ದಿತು. ಅಂತೆಯೆ, ಈಚೆಗೆ ಅನೇಕ ದಿನಗಳಿಂದ ಔಷಧಿ ತೆಗೆದುಕೊಳ್ಳುವುದನ್ನೂ ನಿಲ್ಲಿಸಿಬಿಟ್ಟಿದ್ದರು. ಮಗಳ ಮದುವೆಯಾಗಲಿಲ್ಲವೆಂಬ ಕೊರಗು ಬೇರೆ ಆ ಹಣ್ಣು ಜೀವವನ್ನು ಯಾವಾಗಲೂ ಬಾಧಿಸುತ್ತಲೇ ಇತ್ತು. ಹಾಗೆಂದು, ಅವಳ ಇಚ್ಛೆಗೆ ವ್ಯತಿರಿಕ್ತವಾಗಿ ಫೌಜದಾರ ಮುಧೋಳರ ಕೊರಳಿಗೆ ಅವಳನ್ನು ಬಿಗಿದುಬಿಡುವುದಕ್ಕೂ ಅವರ ಪ್ರೇಮಲ ಮನಸ್ಸು ಒಪ್ಪುತ್ತಿರಲಿಲ್ಲ – ಆ ತಮ್ಮ ಏಕಮಾತ್ರ ಕನ್ನೆಯನ್ನು ಅವರು ತಮ್ಮ ಪ್ರಾಣಕ್ಕಿಂತಲೂ ಅಧಿಕವಾಗಿ ಪ್ರೀತಿಸುತ್ತಿದ್ದರು. ಅವಳ ಮನಸ್ಸನ್ನು ಯಾರಾದರೂ ನೋಯಿಸಿದಾಗ ಅವರಿಗೇ ಹೆಚ್ಚಾಗಿ ವ್ಯಸನವಾಗುತ್ತಿತ್ತು. ಅಂತೆಯೆ, ಅವರು ವೆಂಕಟೇಶನನ್ನು ಸೌಮ್ಯ ಶಬ್ದಗಳಲ್ಲಿ ಗದರಿಸಿದರು.

ಆತ ಮತ್ತೊಂದು ಮಾತನಾಡದೆ ತನ್ನ ಕೊಟಡಿಗೆ ಹೊರಟುಹೋದ. ರಾಮಣ್ಣನಿನ್ನೂ ಮನೆಗೆ ಬಂದಿರಲಿಲ್ಲ. ಎದ್ದು ಹೋಗಿ ಮಗಳ ಮೈದಡವಿ ಅವಳನ್ನು ಸಂತೈಸಬೇಕೆನ್ನಿಸಿತು ಮಧ್ವರಾಯರಿಗೆ. ಹಾಳು ಸಂಧಿ – ವಾತ. ಹಾಸಿಗೆ ಬಿಟ್ಟು ಏಳುವಂತಿಲ್ಲ.

"ಸುಮ್ಮನಾಗವ್ವಾ ಶಾಂತೀ. ಅವನ ಮಾತನ್ನು ನೀನೇನೂ ಮನಸಿಗೆ ಹಚ್ಚಿಕೊಳ್ಳಬೇಡ," ಎಂದು ಅಲ್ಲಿಂದಲೇ ಕೂಗಿ ಹೇಳಿದರು.

ತಂದೆಯ ಸಹಾನುಭೂತಿಯ ಮಾತು ಕಿವಿಗೆ ಬೀಳುತ್ತಲೂ ಅವಳ ಸಂತಾಪದ ಉಗಿಯೆಲ್ಲ ಕರಗಿ ನೀರಾಯಿತು. ಗೋಡೆಯ ಮೇಲಿದ್ದ ತಾಯಿಯ ಭಾವಚಿತ್ರದ ಬಳಿ ಬಂದು ನಿಂತುಕೊಂಡಳು. ಅವಳಿಗೆ ಗೊತ್ತಾಗದಂತೆಯೆ ಅವಳ ಕಣ್ಣುಗಳಿಂದ ನೀರು ಸುರಿಯಲಾರಂಭಿಸಿತು.

ಜಾನಕಿ ಧಾವಿಸಿ ಬಂದು ನಾದಿನಿಯನ್ನು ಸಂತೈಸಿ ಅಡುಗೆ ಮನೆಗೆ ಕರೆದೊಯ್ದಳು.

ಕಂಬನಿಗಳನ್ನು ಮಿಡಿದುಕೊಂಡಳು ಶಾಂತಾ. ಮತ್ತೆ ಅವಳ ಎದೆಯಲ್ಲಿ ಸಂತಾಪ ಹೆಡೆಯಾಡತೊಡಗಿತು. ಅವಳಿಗೇ ತಿಳಿಯದಂತೆ ಕಠೋರ ನಿರ್ಧಾರವೊಂದು ಅವಳಲ್ಲಿ ಮೂಡಿ ನಿಮಿಷಗಳು ಕಳೆದ ಹಾಗೆ ಹೆಚ್ಚು ಹೆಚ್ಚು ಪ್ರಬಲವಾಗತೊಡಗಿತು.

೨೪

ಮಾರ್ಚ ತಿಂಗಳಿನ ಕೊನೆಯ ವಾರದಲ್ಲಿ ವೆಂಕಟೇಶನ ಮದುವೆ ಯಾಗುವುದೆಂದು ನಿಶ್ಚಿತವಾಗಿ, ದಿನವೂ ಮುಹೂರ್ತವೂ ಗೊತ್ತುಪಡಿಸಲ್ಪಟ್ಟಿದ್ದುವು. ಶಾಂತಳ ಪರೀಕ್ಷೆಯೂ ಮುಗಿದುಹೋಗಿ ಫಲಿತಾಂಶವೂ ಪ್ರಕಟವಾಗಿದ್ದಿತು. ನಿರೀಕ್ಷಿಸಿಕೊಂಡಿದ್ದ ಮೇರೆಗೆ ಅವಳು ಎರಡನೆಯ ವರ್ಗದಲ್ಲಿ ತೇರ್ಗಡೆ ಹೊಂದಿದ್ದಳು. ಲೀಲ ಕುಮುದರೂ ಉತ್ತೀರ್ಣರಾಗಿದ್ದರು. ಬಿ. ಎ. ಯ ಮೊದಲನೆಯ ವರ್ಷವಾದ್ದರಿಂದ ವೆಂಕಟೇಶ, ಸದಾನಂದ, ದೇಶಪಾಂಡೆ ಮೊದಲಾದವರಿಗೆ ಪರೀಕ್ಷೆಯಿರಲಿಲ್ಲ. ನರಗುಂದ ಆಗಲೆ ತನ್ನ ಹಳ್ಳಿಗೆ ಹೊರಟು ಹೋಗಿದ್ದ. ಶಿವಲಿಂಗನ ಎಸ್. ಎಸ್. ಸಿ. ಪರೀಕ್ಷೆ ಮುಗಿಯುವವರೆಗೂ ಸದಾನಂದ ಅಲ್ಲಿರಬೇಕಾದುದು ಅವಶ್ಯವಿದ್ದಿತು. ಪರಸಣ್ಣವರ್ ಇಂದು ನಾಳೆ ಹೊರಡುವುದರಲ್ಲಿದ್ದ.

ಒಂದು ದಿನ ರಾಮಚಂದ್ರ ಕಚೇರಿಯಿಂದ ಮನೆಗೆ ಬರುತ್ತಿದ್ದಾಗ ಹಾದಿಯಲ್ಲಿ ಸಿಕ್ಕಿದ ಫೌಜದಾರ ಮುಧೋಳರು ಅವನನ್ನು ತಡೆದು ಔಪಚಾರಿಕವಾಗಿ ಆ ಮಾತು ಈ ಮಾತು ಆಡುತ್ತಾ,

"ನಿಮ್ಮ ತಂಗಿಯ ಪರೀಕ್ಷೆಯಂತೂ ಮುಗಿಯಿತಲ್ಲಾ," ಎಂದು ಸೂಚ್ಯವಾಗಿ ನುಡಿದರು.

"ಮುಗಿಯಿತು ಸಾಹೇಬರೆ!" ಎಂದು ನುಡಿದು ಸುಮ್ಮನಾದ ರಾಮಚಂದ್ರ.

ಫೌಜದಾರರು ಹೇಳಿದರು :

"ನನಗೆ ಇಲ್ಲಿಂದ ವರ್ಗವಾಗುವ ಹಾಗೆ ತೋರುತ್ತದೆ. ತಿಂಗಳೆರಡು ತಿಂಗಳಲ್ಲಿಯೆ ಆದರೂ ಆದೀತು. ಮಾರ್ಚ್ ಕಡೇವಾರದಲ್ಲಿ ಒಂದೆರಡು ಮುಹೂರ್ತ ಬಿಟ್ಟರೆ ಬೇರೆ ಮುಹೂರ್ತಗಳೂ ಇಲ್ಲ ಈ ವರ್ಷ. ಇಷ್ಟು ದಿನ ತಡೆದಿದ್ದೇನೆ. ಮನೆಯಲ್ಲಿ ಬಹಳ ತೊಂದರೆಯಾಗಿದೆ. ಆದ್ದರಿಂದ...."

"ಗೊತ್ತಾಯಿತು ಸಾಹೇಬರೆ, ಗೊತ್ತಾಯಿತು. ಇನ್ನೊಂದು ವಾರದೊಳಗಾಗಿ ಮುಹೂರ್ತ ನಿಶ್ಚಯಿಸಿಬಿಡೋಣ."

"ಅಷ್ಟು ಮಾಡಿರಿ. ಒಂದುವೇಳೆ ಯಾವದೇ ಕಾರಣದಿಂದ ಈ ಕಾರ್ಯವಾಗದಂತಿದ್ದರೆ ಹಾಗೆ ಸ್ಪಷ್ಟವಾಗಿ ತಿಳಿಸಲು ಅನುಮಾನಿಸಬೇಡಿರಿ. ಇನ್ನೂ ಅನೇಕರು ನನ್ನನ್ನು ಒತ್ತಾಯಪಡಿಸುತ್ತಿದ್ದಾರೆ."

ಫೌಜದಾರರ ಸಂಬಂಧ ತಪ್ಪಿಹೋದರೆ ಮುಂದೆ ಶಾಂತಳಿಗೆ ವರ ಹುಡುಕುವುದು ತುಂಬ ಕಷ್ಟವೆಂಬುದನ್ನರಿತ ರಾಮಚಂದ್ರ, ಅಂದು ಆ ವಿಚಾರ ನಿಷ್ಕರ್ಷೆ ಮಾಡಿಯೆ ಬಿಡುವುದೆಂದು ಮನಸ್ಸಿನಲ್ಲೇ ನಿರ್ಧರಿಸಿಕೊಂಡು ಮನೆಗೆ ಬಂದ.

ಶಾಂತಾ, ವೆಂಕಟೇಶ ಇಬ್ಬರೂ ಮನೆಯಲ್ಲಿರಲಿಲ್ಲ. ಪರೀಕ್ಷೆಯಲ್ಲಿ ತೇರ್ಗಡೆಯಾದ ನಿಮಿತ್ತ ತನ್ನ ಸ್ನೇಹಿತವರ್ಗಕ್ಕೆಲ್ಲ ಲೀಲಾ ಏರ್ಪಡಿಸಿದ್ದ ಸಂತೋಷಕೂಟಕ್ಕೆ ಹೋಗಿದ್ದರು.

ಅಂದು ಸ್ವಲ್ಪ ಗೆಲುವಾಗಿದ್ದ ಮಧ್ವರಾಯರು ರಾಘವೇಂದ್ರ ಸ್ತೋತ್ರಾವಳಿಯನ್ನು ಜಪಿಸುತ್ತಾ ಸಮಾಧಾನದಿಂದ ಹಾಸಿಗೆಯಲ್ಲೊರಗಿದ್ದರು.

"ಪೂಜ್ಯಾಯ ರಾಘವೇಂದ್ರಾಯ, ಸತ್ಯಧರ್ಮರತಾಯ ಚ |
ಭಜತಾಂ ಕಲ್ಪವೃಕ್ಷಾಯ, ನಮತಾಂ ಕಾಮಧೇನವೆ |"

ಎಂದು ಹೇಳುತ್ತಿದ್ದ ಹಾಗೆ ಅವರ ಮುಖದ ಮೇಲೆ ದಿವ್ಯವಾದ ಭಾವ ಸಂಚರಿಸುತಿತ್ತು.

"ಇಂದು ಫೌಜದಾರ ಸಾಹೇಬರು ಭೆಟ್ಟಿಯಾಗಿದ್ದರಪ್ಪಾ," ಎಂದು ರಾಮಚಂದ್ರ ಆರಂಭಿಸುತ್ತಲೂ ಅವರು ತಮ್ಮ ಧ್ಯಾನದಿಂದ ಎಚ್ಚತ್ತುಕೊಂಡು ಮಗನ ಕಡೆ ದೃಷ್ಟಿ ತಿರುಗಿಸಿ,

"ಏನಂದೆ ರಾಮಣ್ಣಾ ?" ಎಂದರು.

"ಮನೆಗೆ ಬರುವಾಗ ಹಾದಿಯಲ್ಲಿ ಮುಧೋಳ ಸಾಹೇಬರು ಕೂಡಿದ್ದರಪ್ಪಾ. ಬೇಗನೆ ಮುಹೂರ್ತ ಗೊತ್ತು ಮಾಡಬೇಕು ಅಂತ ಹೇಳಿದರು."

ರಾಯರು ಬೇಸರದಿಂದ ಕಣ್ಣು ಮುಚ್ಚಿಕೊಂಡರು. ಒಂದೆರಡು ನಿಮಿಷ ಅವರು ಮಾತನಾಡಲಿಲ್ಲ. ಅನಂತರ ಮೆಲ್ಲಗಿನ ದನಿಯಲ್ಲಿ ಹೇಳಿದರು.

"ಶಾಂತಿಯನ್ನು ಕೇಳಿದಿಯಾ ರಾಮಣ್ಣಾ ?"

ರಾಮಚಂದ್ರನೂ ಬೇಸರದ ದನಿಯಲ್ಲಿಯೆ ಉತ್ತರವಿತ್ತ :

"ಅವಳನ್ನೇನು ಕೇಳುವದಣ್ಣಾ ಮತ್ತೆ ಮತ್ತೆ! ಕೇಳಲಿಕ್ಕೆ ಹೋದರೆ ಬೇಡ ಅಂದುಬಿಡುತ್ತಾಳೆ. ನನ್ನ ಮೇಲೆ ಎಂಥ ಜವಾಬ್ದಾರಿಯಿದೆ ಅನ್ನುವದು ಅವಳಿಗೆ ತಿಳಿಯದು. ಇದರಿಂದ ಪಾರಾದರೆ ದೇವರೇ ಕಾಪಾಡಿದ ಹಾಗಾಗುತ್ತದೆ."

ವಿಕಾರ ರಹಿತವೂ ಶಾಂತವೂ ಆದ ದನಿಯಲ್ಲಿ ರಾಯರು ಹೇಳಿದರು :

"ಅದೇನೋ ಸರಿಯಪ್ಪಾ ರಾಮಣ್ಣಾ. ಆದರೆ ನಾವು ಶಾಂತಿಯ ಮನಸ್ಸನ್ನು ನೋಡಬೇಕಲ್ಲ. ಮದುವೆಯಾಗುವಾಕೆ ಅವಳು. ನಾವಲ್ಲ. ಈ ಸಂಬಂಧದಿಂದ ಅವಳಿಗೆ ಸುಖ ಸಿಕ್ಕುವದೋ ಇಲ್ಲವೋ ಅನ್ನುವದನ್ನು ಅವಳೇ ನಿಶ್ಚಯಿಸಬೇಕು. ಫೌಜದಾರರನ್ನು ಆಗಲು ಶಾಂತಿಗಂತೂ ಸ್ವಲ್ಪವೂ ಇಚ್ಛೆಯಿಲ್ಲ. ಅವಳ ಇಚ್ಛೆಗೆ ವಿರುದ್ಧವಾಗಿ ನಾವು ಏನನ್ನೂ ಮಾಡಬಾರದು."

"ನನಗೇನು ಶಾಂತಿಯ ಮೇಲೆ ಪ್ರೀತಿಯಿಲ್ಲವೇನಣ್ಣಾ ? ಅವಳ ಸುಖವೇ ನನ್ನ ಸಂತೋಷ. ಅವಳಿಗೆ ಅನುರೂಪನಾದ ವರ ಸಿಕ್ಕರೆ ಕೊಡಲು ಸಿದ್ಧನೇ ಇದೇನಲ್ಲ ನಾನು. ಆದರೆ....ಮುಖ್ಯ ಸಂಕಟ ಹಣದ್ದು...."

"ನಿಜ, ನಿಜ."

"ವಯಸ್ಸು, ರೂಪ, ವಿದ್ಯೆ ಎಲ್ಲದರಲ್ಲೂ ಅವಳಿಗೆ ಯೋಗ್ಯನಾದ ವರ ಸಿಕ್ಕುವದೇನು ಕಷ್ಟವಾಗಲಿಕ್ಕಿಲ್ಲ. ಆದರೆ, ಅಂಥ ಯೋಗ್ಯ ವರನಿಗೆ ಕನಿಷ್ಠಪಕ್ಷ ಮೂರು ಸಾವಿರ ರೂಪಾಯಿಗಳನ್ನಾದರೂ ಸುರಿಯಬೇಕಾಗುತ್ತದೆ. ಯಾವ ಯೋಗ್ಯ ತರುಣನೂ ವರದಕ್ಷಿಣೆಯಿಲ್ಲದೆ ಮದುವೆಯಾಗುವ ಉದಾರತನ ತೋರಿಸುವದಿಲ್ಲ."

"ಹೌದು, ಹೌದು – ನನ್ನ ಇನ್ಶೂರನ್ಸ್ ಹಣವಾದರೂ ಕೈಗೆ ಬಂದಿದ್ದರೆ ಶಾಂತಿಯ ಮದುವೆಯ ಸಮಸ್ಯೆ ಬಗೆಹರಿಯುತಿತ್ತು."

" ಇನ್ನೂ ಮೂರು ವರ್ಷ ಕಾಯಬೇಕು ಆದಕ್ಕಾಗಿ. ಅದುವರೆಗೆ ಇವಳನ್ನು ಹೀಗೇ ಮನೆಯಲ್ಲಿಟ್ಟುಕೊಳ್ಳುವಂತಿಲ್ಲ. ಹರಯದ ಹುಡುಗಿ. ಕಾಲೇಜಿನ ಕೆಟ್ಟ ಸಹವಾಸ ಬೇರೆ. ಈಗಾಗಲೆ ಜನರು ಮನಸ್ಸಿಗೆ ಬಂದ ಹಾಗೆ ಮಾತಾಡಿ ಕೊಳ್ಳುತ್ತಿದ್ದಾರೆ. ಹೀಗೇ ಬಿಟ್ಟರೆ ಮುಂದೆ ವರದಕ್ಷಿಣೆ ಕೊಟ್ಟರೂ ಕೂಡ ಯಾರೂ ಮದುವೆಗೆ ತಯಾರಾಗಲಿಕ್ಕಿಲ್ಲ. ಮೊದಲೇ ಬ್ರಾಹ್ಮಣ ಸಮಾಜ...." ಎಂದು ಹೇಳುತ್ತಾ ನಿಟ್ಟುಸಿರು ಹಾಕಿದ ರಾಮಚಂದ್ರ.

" ನನ್ನ ಇನ್ಶ್ಯೂರನ್ಸ್ ಹಣ ಈಗಲೇ ಬಂದಿದ್ದರೆಷ್ಟು ಚೆನ್ನಾಗುತಿತ್ತು!" ಎಂದು ರಾಯರು ಅರ್ಧ ತನ್ನಷ್ಟಕ್ಕೇ ಎಂಬಂತೆ ಹೇಳಿಕೊಂಡರು.

" ಹಾಗಾದರೆ ಜೋಯಿಸರನ್ನು ವಿಚಾರಿಸಿ ಮುಹೂರ್ತ ಗೊತ್ತುಮಾಡಿ ಬಿಡೋಣವೇನಣ್ಣಾ ? ವೆಂಕಣ್ಣನ ಮದುವೆಯಾದ ಎರಡು ಮೂರು ದಿನಗಳಿಗೆ ಇದನ್ನೂ ಹೂಡಬಹುದು."

ರಾಯರು ಮಾತನಾಡಲಿಲ್ಲ. ಮೌನವಾಗಿ ಕತ್ತು ಕೊಡಹಿ ಪುನಃ ಕಣ್ಣು ಮುಚ್ಚಿಕೊಂಡರು. ಈ ಸಮಸ್ಯೆಯನ್ನು ಪರಿಹರಿಸಲು ಉಪಾಯವೇನು ?

ತಂದೆಯ ಮೌನವೇ ಸಮ್ಮತಿಯೆಂದು ಭಾವಿಸಿದ ರಾಮಚಂದ್ರ ಮತ್ತೆ ಆ ವಿಚಾರವಾಗಿ ಅವರನ್ನು ಕೇಳದೆ, ಮಾರನೆಯ ದಿನ ಜೋಯಿಸರನ್ನು ಕಂಡು ಶುಭ ಮುಹೂರ್ತವನ್ನು ಗೊತ್ತುಪಡಿಸಿಕೊಂಡು ಬಂದ.

" ಇಪ್ಪತ್ತೆಂಟನೇ ತಾರೀಖು ಮುಹೂರ್ತ ಅಣ್ಣಾ."

ಮಧ್ವರಾಯರು ಸುಮ್ಮನೆ ತಲೆ ಕೊಡಹಿದರು. ಮಾತನಾಡುವುದು ವ್ಯರ್ಥ. ದೇವರು ಮಾಡಿದಂತೆ ಆಗುತ್ತದೆ. ಶಾಂತಿಯ ಹಣೆಯ ಮೇಲೆ ಬ್ರಹ್ಮ ಬರೆದುದೇ ಹೀಗಿರಬಹುದು. ತನ್ನಂಥ ಹುಲುಮನುಜ ಅದನ್ನು ತಡೆಯುವುದು ಹಾಸ್ಯಾಸ್ಪದ....

ಆಗತಾನೆ ಮನೆಗೆ ಬಂದು ಅಡುಗೆ ಮನೆಯಲ್ಲಿ ಅತ್ತಿಗೆಗೆ ನೆರವಾಗುತ್ತ ಕುಳಿತಿದ್ದ ಶಾಂತಾ ಮಾತ್ರ ಅದನ್ನು ತಡೆಯುವ ನಿರ್ಧಾರದಿಂದ ಎದ್ದು ತಂದೆಯ ಬಳಿ ಬಂದಳು, ಅವರ ತಲೆಯ ಬಳಿ ಕುಳಿತು ದೃಢಸ್ವರದಲ್ಲಿ ಹೇಳಿದಳು :

" ನನಗೆ ಈ ಮದುವೆ ಬೇಡ ಅಣ್ಣಾ."

ರಾಯರು ಮಾತನಾಡಲಿಲ್ಲ. ತಮ್ಮ ಕ್ಷೀಣ ಹಸ್ತವನ್ನೆತ್ತಿ ತಮ್ಮ ಮುದ್ದಿನ ಕುವರಿಯ ತಲೆಯ ಮೇಲಾಡಿಸುತ್ತ ಅವರು ನೀಳವಾಗಿ ಉಸಿರು

ಬಿಟ್ಟರು. ಸಾವಿರ ಸಂಕಟಗಳನ್ನುಂಡು ಹಣ್ಣಾಗಿದ್ದ ಅವರ ವೃದ್ಧ ಮುಖ ವೇದನೆಯಿಂದ ವಿಕಾರಗೊಂಡಿತು. ಅವರ ಕಣ್ಣುಗಳಿಂದ ಒಂದೆರಡು ಹನಿಗಳೂ ತೊಟ್ಟಿಕ್ಕಿದುವು.

ಐದಾರು ನಿಮಿಷಗಳವರೆಗೆ ಮೂವರೂ ಮೌನವಾಗಿದ್ದರು.

ಆ ತರುವಾಯ ರಾಮಣ್ಣನೆಂದ :

"ನೀನು ಹೀಗೆಲ್ಲ ಹಟ ಮಾಡಬಾರದು ಶಾಂತೂ – ನಿನಗೂ ಎಲ್ಲಾ ತಿಳಿಯುವದಿಲ್ಲವೆ ? ಈ ಕಾಲದಲ್ಲಿ ಹೆಣ್ಣು ಮಕ್ಕಳ ಮದುವೆಯಾಗುವದೆಷ್ಟು ಕಷ್ಟ ಅನ್ನುವದು ನಿನಗೂ ಗೊತ್ತು."

ಅವಳು ಧೀರ ಗಂಭೀರ ಸ್ವರದಲ್ಲಿ ನುಡಿದಳು :

"ಗೊತ್ತು ಅಣ್ಣಾ, ಗೊತ್ತು. ನಾನೇನು ನಿನ್ನನ್ನು ದೂರುವದಿಲ್ಲ. ಆದರೆ, ನನಗೆ ಮಾತ್ರ ಈ ಸಂಬಂಧದ ಬಗ್ಗೆ ಒತ್ತಾಯ ಮಾಡಬೇಡ."

"ಈ ಸಂಬಂಧ ತಪ್ಪಿಹೋದರೆ ಮುಂದೆ ಯಾವನೊಬ್ಬ ಲಿಂಗಾಯತ ನನ್ನೊ ಮುಸಲನನ್ನೊ ಕಟ್ಟಿಕೊಂಡು ಓಡಿಹೋಗುವ ಪ್ರಸಂಗ ಬಂದೀತು ನಿನಗೆ. ಬುದ್ಧಿಯಿಲ್ಲದ ಹುಡುಗಿ ! ತಲೆಯೆಲ್ಲಾ ಹರಟುತ್ತೀ. ನಮ್ಮ ಕಷ್ಟ ನಿನಗೇನು ಗೊತ್ತಾದೀತು !" ಎಂದು ಕೋಪದಿಂದ ಒದರಿಕೊಂಡು ರಾಮಣ್ಣ ಅಲ್ಲಿಂದೆದ್ದು ವೆಂಕಟೇಶನ ಕೊಟಡಿಗೆ ಹೋಗಿ ಕುಳಿತುಕೊಂಡ.

"ನನ್ನ ಮನಸ್ಸಿಗೆ ಬಂದರೆ ನಾನು ಲಿಂಗಾಯತನನ್ನಾದರೂ ಕಟ್ಟಿ ಕೊಂಡೇನು, ಮುಸಲ್ಮಾನನನ್ನಾದರೂ ಕಟ್ಟಿಕೊಂಡೇನು ! ಈ ಮುದಿಯನ ಸೆರಗಿಗೆ ಮಾತ್ರ ಬೀಳುವದಿಲ್ಲ !" ಎಂದು ಅವಳೂ ಕೋಪದಿಂದಲೇ ಉತ್ತರ ವಿತ್ತಳು.

"ಇವಳು ಬಹಳ ಹದ್ದುಮೀರಿ ಹೋಗತೊಡಗಿದಳು. ಹೀಗೇ ಬಿಟ್ಟರೆ ಆ ಸದಾನಂದನ ಬೆನ್ನಹತ್ತಿ ಓಡಿಹೋದರೂ ಹೋಗಬಹುದು ಈಕೆ," ಎಂದ ವೆಂಕಟೇಶ.

"ಓಡಿಹೋಗಲಿಕ್ಕೆ ಬಿಡುವವರು ಯಾರು ? ಇನ್ನು ಮೇಲೆ ಇವಳಿಗೆ ಹೊರಗೆ ಹೋಗುವದಕ್ಕೂ ಕೊಡಬಾರದು – ಕಾರ್ಯ ಮುಗಿಯುವವರೆಗೆ," ಎಂದ ರಾಮಚಂದ್ರ.

ತಂದೆ ಮಗಳು ಇಬ್ಬರೂ ಆ ಮಾತುಗಳನ್ನಾಲಿಸುತ್ತ ಮೂಕವಾಗಿ ಕುಳಿತಿದ್ದರು.

ಹಠಾತ್ತಾಗಿ, ತಂದೆಯ ವಕ್ಷಸ್ಥಲದ ಮೇಲೆ ಮುಖವಿಟ್ಟು ಶಾಂತಾ ಬಿಕ್ಕುತ್ತ ಬಿಕ್ಕುತ್ತ ಹೇಳಿದಳು :

" ನನಗೆ ಈ ಮದುವೆ ಬೇಡ ಅಣ್ಣಾ. ನನ್ನ ಜೀವನ ಎಲ್ಲಾ ಹಾಳು ಮಾಡಬೇಡಿರಿ."

ಮಧ್ವರಾಯರು ಮಗಳ ಮೈದಡವಿ ಮೂಕವಾಗಿಯೆ ಸಹಾನುಭೂತಿ ವ್ಯಕ್ತಗೊಳಿಸಿದರು. ಅವಳ ಬೇಡಿಕೆಗೆ ಉತ್ತರವಾಗಿ ಅವರು ಏನನ್ನು ಹೇಳಲೂ ಸಾಧ್ಯವಾಗಲಿಲ್ಲ.

" ಅಣ್ಣಾ, ಅಣ್ಣಾ," ಎಂದು ಹಲುಬಿದಳು ಶಾಂತಾ.

ಮತ್ತೆ ಅವಳು ಶೋಕವನ್ನು ಅದುಮಿಕೊಂಡು ಹಿಮದ ಬೆಟ್ಟದಂತೆ ಗಂಭೀರಳಾಗಿ ತನ್ನ ಕೊಟಡಿಗೆ ಹೊರಟು ಹೋದಳು. ಬಾಗಿಲನ್ನು ಮುಚ್ಚಿ, ಒಳಗಿನಿಂದ ಚಿಲಕ ಹಾಕಿಕೊಂಡು ಮೇಜಿನ ಹತ್ತಿರ ಕುಳಿತು ಬರೆಯತೊಡಗಿದಳು.

" ಪೂಜ್ಯರಾದ ತಂದೆಯವರ ಚರಣ ಕಮಲಗಳಲ್ಲಿ – ಬಾಲಿಕೆಯ ಅನೇಕ ಶಿರಸಾಷ್ಟಾಂಗ ವಂದನೆಗಳು :

ನಿಮ್ಮ ವೃದ್ಧಾಪ್ಯದಲ್ಲಿ, ಅದರಲ್ಲೂ ಜಡ್ಡಿನಿಂದ ಜರ್ಜರಿತವಾಗಿರುವ ಸ್ಥಿತಿಯಲ್ಲಿ ನಿಮ್ಮ ಮನಸ್ಸಿಗೆ ನೋವುಂಟುಮಾಡಲು ಬಹಳ ವಿಷಾದವಾಗುತ್ತಿದೆ. ಹಿಂದಿನ ಕಾಲದ ಕರ್ತವ್ಯಬದ್ಧ ಹಿಂದೂ ಕುಮಾರಿಯಂತೆ ನಾನು ವರ್ತಿಸದೆ ನನ್ನ ಮನಸ್ಸಿಗೊಪ್ಪಿದ ರೀತಿಯಲ್ಲಿ ಆಚರಿಸುತ್ತಿರುವುದಕ್ಕಾಗಿ ನಿಮಗೆ ಅತ್ಯಂತ ದುಃಖವಾಗಬಹುದು. ನನ್ನನ್ನು ಇದುವರೆಗೆ ಬಹಳ ಪ್ರೇಮದಿಂದಲೂ ಅಕ್ಕರೆಯಿಂದಲೂ ಬೆಳಸಿಕೊಂಡು ಬಂದಿದ್ದೀರಿ. ಅಣ್ಣಂದಿರೂ ಅತ್ತಿಗೆಯೂ ಸಹ ನನ್ನ ಬಗ್ಗೆ ಬಹಳ ಮಮತೆಯನ್ನೇ ತೋರ್ಪಡಿಸುತ್ತ ಬಂದಿದ್ದಾರೆ. ನಾನು ಕಾಲೇಜು ಪ್ರವೇಶಿಸಿ ಇಷ್ಟು ಸುಶಿಕ್ಷಿತೆಯಾಗಲು ರಾಮಣ್ಣನ ತ್ಯಾಗವೇ ಮುಖ್ಯವಾಗಿದೆ. ಅವನಿಗೂ ನಿಮಗೂ ನಾನು ಬಹಳ ಋಣಿಯಾಗಿದ್ದೇನೆ. ನಿಜವಾಗಿ ನಾನು ಈಗ ನಿಮ್ಮೆಲ್ಲರ ಮಾತು ಕೇಳಿಕೊಂಡು ಈ ಮದುವೆಗೆ ಒಪ್ಪಿಕೊಳ್ಳಬೇಕಾಗಿತ್ತು. ಆದರೆ ನನ್ನ ಆತ್ಮಸಾಕ್ಷಿಯನ್ನು ಸದೆಬಡಿದು ಇಚ್ಛೆಗೆ ವಿರುದ್ಧವಾಗಿ ಈ ಸಂಬಂಧ

ವನ್ನೊಪ್ಪಿಕೊಳ್ಳಲಾರೆ. ನಾನು ದೊಡ್ಡವಳಾಗಿದ್ದೇನೆ. ನನ್ನ ಹಿತಾಹಿತಗಳು ನನಗೆ ತಿಳಿಯುತ್ತವೆ. ನನ್ನ ಹಿತಕ್ಕಾಗಿ ನಾನು ನಿಮ್ಮ ಮರ್ಯಾದೆಯನ್ನೂ ಬಲಿ ಕೊಡಬಾರದೆಂಬುದು ನಿಜವಾದರೂ ನಿಮ್ಮ ಮರ್ಯಾದೆಗಾಗಿ ನನ್ನ ಸಮಸ್ತ ಜೀವನವೂ ಹಾಳಾಗಬಾರದಲ್ಲವೆ? ಮುಧೋಳರು ನನಗೆ ತಕ್ಕ ವರ ಅಲ್ಲ. ಗಂಡನನ್ನು ಪ್ರೀತಿಸುವಂತೆ ನಾನು ಅವರನ್ನು ಪ್ರೀತಿಸಲು ಸಾಧ್ಯವಿಲ್ಲ. ಪ್ರೀತಿಯಿಲ್ಲದ ಸಂಸಾರವೆಂದರೆ ವ್ಯಭಿಚಾರ, ಅಷ್ಟೆ. ಇದರಿಂದ ನನಗೂ ಸುಖ ಸಿಕ್ಕಲಾರದು, ಅವರಿಗೂ ಸಿಕ್ಕಲಾರದು. ಎಲ್ಲವನ್ನೂ ತಿಳಿದೂ ನಾನು ಈ ಮದುವೆಗೊಪ್ಪುವುದೆಂದರೆ ನನ್ನ ಎದೆಯ ಮೇಲೆ ನಾನೇ ಕಲ್ಲು ಹೇರಿಕೊಂಡ ಹಾಗಾಗುವದು. ಆತ್ಮಹತ್ಯೆಗೂ ಇದಕ್ಕೂ ಹೆಚ್ಚಿನ ಅಂತರವೇನೂ ಇಲ್ಲ – ಈ ರೀತಿಯಾಗಿ ವಿವಾಹದ ವೇದಿಕೆಯ ಮೇಲೆ ನನ್ನನ್ನು ನಾನೆ ಬಲಿ ಕೊಟ್ಟುಕೊಳ್ಳಲು ನಾನು ಸಿದ್ಧಳಿಲ್ಲ. ನಿಮ್ಮೀ ನಿರ್ಧಾರವನ್ನು ನಾನು ಬದಲಿಸಲಾರೆ. ರಾಮಣ್ಣನೂ ತನ್ನ ನಿರ್ಧಾರವನ್ನು ತ್ಯಜಿಸುವುದಿಲ್ಲವೆಂದು ತೋರುತ್ತದೆ. ಅಂತೆಯೆ, ನನ್ನೆದುರಿಗೆ ಈಗ ಒಂದೇ ದಾರಿಯುಳಿದಿದೆ. ಅದೆಂದರೆ: ಸದ್ಯಕ್ಕಂತೂ ಈ ಮನೆಯನ್ನು ಬಿಟ್ಟು ಹೊರಟುಹೋಗುವುದು.

ನಿಮ್ಮನ್ನು, ಈ ಮನೆಯನ್ನು ಬಿಟ್ಟು ಹೋಗುವಾಗ ನನಗೆ ಎಂಥ ಸಂಕಟವಾಗುತ್ತಿದೆಯೆಂಬುದನ್ನು ಶಬ್ದಗಳಲ್ಲಿ ತಿಳಿಸಲು ಸಾಧ್ಯವಿಲ್ಲ. ಈ ದಾರಿ ಹಿಡಿಯಬೇಕೆಂದು ನನಗೇನೂ ಆತುರವಿರಲಿಲ್ಲ. ಆದರೆ ಸದ್ಯದ ಪರಿಸ್ಥಿತಿಯಲ್ಲಿ ಅದು ಅನಿವಾರ್ಯವಾಗಿದೆ.

ದಯೆಮಾಡಿ ನನ್ನನ್ನು ಕ್ಷಮಿಸಿರಿ. ನಾನೆಲ್ಲಿಯೆ ಇದ್ದರೂ ನಿಮ್ಮ ಆಶೀರ್ವಾದ ನನ್ನನ್ನು ಕಾಪಾಡುತ್ತಿರಲಿ.

ಇಂತು ಶಿರಸಾಷ್ಟಾಂಗ ನಮಸ್ಕಾರಗಳು:

ನಿಮ್ಮ ಅವಿಧೇಯ ಕುವರಿ,

ಶಾಂತಾ."

ಬರೆದು ಮುಗಿಸಿ ಕಾಗದವನ್ನು ಕವರಿನಲ್ಲಿ ಹಾಕಿ ಮೇಜಿನ ಡ್ರಾಯರಿನಲ್ಲಿ ಅದನ್ನಿಟ್ಟಳು. ಮತ್ತೆ ಯಾವುದೋ ವಿಚಾರ ಬಂದುದರಿಂದ ಪುನಃ ಕಾಗದ ತೆಗೆದುಕೊಂಡು ರವಿಕೆಯೊಳಗಡೆ ಮಡಗಿಸಿದಳು. ಕಾಗದವನ್ನು ಇಲ್ಲಿಡುವುದಕ್ಕಿಂತ, ಅಂಚೆಯಿಂದ ಕಳಿಸುವುದೇ ಒಳ್ಳೆಯದೆಂದು ಅವಳಿಗೆನ್ನಿಸಿತು.

ಜಾನಕಿ ಬಂದು ಊಟಕ್ಕೆ ಕರೆದಾಗ ಶಾಂತ ಮುಖ ಮುದ್ರೆಯಿಂದಲೇ ಹೋಗಿ ಯಾಂತ್ರಿಕವಾಗಿ ಊಟ ಮುಗಿಸಿದಳು.

" ಹೆಂಗಸರು ನಾವು ಹೀಗೆಲ್ಲ ಹಟಮಾಡಬಾರದವ್ವ – ಹಿರಿಯರು ಹೇಳಿದ ಹಾಗೆ ಕೇಳಬೇಕು," ಎಂದು ಜಾನಕಿ ಉಪದೇಶಿಸತೊಡಗಿದಳು.

ಶಾಂತಾ ಮರುಮಾತನಾಡದೆ ಮೌನವಾಗಿ ತುತ್ತು ನುಂಗುತ್ತಿದ್ದಳು.

" ನಿನ್ನ ಬಾಳುವೆ ಹಾಳಾಗುತ್ತದೆಂದು ನಿನಗಾರು ಹೇಳಿಕೊಟ್ಟರೋ ಏನೊ. ಇಂಥಾ ದೊರೆಯಂಥಾ ಗಂಡ ಎಲ್ಲರಿಗೂ ಸಿಗುವದಿಲ್ಲ ಹುಚ್ಚವ್ವಾ."

ಆಗಲೂ ಶಾಂತಾ ಮೌನ.

" ಎರಡನೇ ಸಂಬಂಧ ಅಂದರೆ ಮೊದಲು ಎಲ್ಲರಿಗೂ ಸ್ವಲ್ಪ ಬೇಸರ ವಾಗುತ್ತದವ್ವ. ಮುಂದೆ ಅವರೇ ಸಂಸಾರಕ್ಕೆ ಹತ್ತಿದಾಗ ತಮ್ಮ ಭಾಗ್ಯ ಕೊಂಡಾಡುತ್ತಾರೆ."

ಆಗಲೂ ಮಾತನಾಡಲಿಲ್ಲ ಶಾಂತಾ. ಒಂದು ಸಲ ವಿಚಿತ್ರವಾಗಿ ನಕ್ಕು, ತಟ್ಟೆಯನ್ನು ಬಿಟ್ಟೆದ್ದು ಬಚ್ಚಲಿಗೆ ಹೋಗಿ ಕೈ ಬಾಯಿ ತೊಳೆದುಕೊಂಡು ಮತ್ತೆ ಕೊಟಡಿಯನ್ನು ಸೇರಿಕೊಂಡಳು.

## ೨೫

“ ಯುಗಾದಿ ಪ್ರತಿಪದೆಯ ಶುಭ ಮುಹೂರ್ತದಂದು ನಿಶ್ಚಯ ಕಾರ್ಯ ನೆರವೇರಿಸಬೇಕೆಂದು ಗೊತ್ತಾಗಿದೆ. ನೀನು ಆ ಒಳಗಾಗಿ ಇಲ್ಲಿಗೆ ಬರುವಿಯಷ್ಟೆ.” ಎಂದು ಬಸವಂತಪ್ಪನವರು ಬರೆದಿದ್ದರು. ‘ ಅಂತೂ ಈ ಪೀಕಲಾಟದಿಂದ ನಾನು ಪಾರಾಗುವಂತೆ ಕಾಣುವದಿಲ್ಲ,’ ಎಂದು ಹೇಳಿಕೊಳ್ಳುತ್ತಾ ಸದಾನಂದ ಭೋಜನಾಲಯದ ಕಡೆ ಸಾಗಿದ್ದ. ನಗರ ಸಭೆಯೆದುರಿಗೆ ಆತ ಹಾದು ಹೊರಟಿದ್ದ ಹಾಗೆ ಆಗತಾನೆ ಕಚೇರಿಗೆ ಬರುತ್ತಿದ್ದ ಶಿವಣ್ಣ ಅವನನ್ನು ಕಂಡು,

“ ಸಂಜೆ ನಾನೇ ಬರೋಣ ಅಂತಿದ್ದೆ. ಅಷ್ಟರಲ್ಲಿ ನೀನೇ ಭೆಟ್ಟಿಯಾದೆ ಯಲ್ಲ. ಚಲೋದಾಯಿತು. ನಿನ್ನೆ ಹುಕ್ಕೇರಿ ಸಾಹೇಬರಿಂದ ಪತ್ರ ಬಂದಿದೆ;” ಎಂದು ಹೇಳಿದ.

“ ತಂದೆಯವರು ನನಗೂ ಬರೆದಿದ್ದಾರೆ.”

“ ಆಯಿತಲ್ಲ. ಶುಭಸ್ಯ ಶೀಘ್ರಂ. ಇನ್ನಾದರೂ ಸ್ವಲ್ಪ ನಗುನಗುತ್ತಾ ಇರಪ್ಪಾ.”

ಸದಾನಂದ ಬೇಸರದ ದನಿಯಲ್ಲಿ,

“ ಎಲ್ಲಿಯ ನಗು, ಏನು ಕತೆ ಶಿವಣ್ಣಾ. ನನಗೆ ಒಂದೂ ಹೊಳೆಯ ದಂತಾಗಿದೆ,” ಎಂದ.

“ ಯಾಕಯ್ಯಾ, ಮತ್ತೇನಾಯಿತು ನಿನಗೆ ? ಏನು ರೋಗ ?” ಎಂದ

ಶಿವಣ್ಣ. ನಗರ ಸಭೆಯೆದುರಿನ ಉದ್ಯಾನಕ್ಕೆ ಬಂದು ಒಂದು ಬೆಂಚಿನ ಮೇಲೆ ಕುಳಿತುಕೊಂಡರು.

ಸದಾನಂದ ಹೇಳಿದ:

"ನಾವು ಬೆಳಗಾವಿಗೆ ಬರಲೇಬಾರದಾಗಿತ್ತು ಶಿವಣ್ಣಾ. ವಧು ನೋಡಲು ಹೋಗಿ ದೊಡ್ಡ ಮೂರ್ಖತನ ಮಾಡಿದೆ."

"ಯಾಕೆ ? ಯಾಕೆ ?"

"ಈ ವಧುವನ್ನು ಮಾಡಿಕೊಳ್ಳುವ ಮನಸ್ಸು ನನಗಿರಲಿಲ್ಲ. ಈಗಲೂ ಇಲ್ಲ. ಸುಮ್ಮನೆ ನಿನ್ನ ಒತ್ತಾಯಕ್ಕೆ, ಹಿರಿಯರ ಒತ್ತಾಯಕ್ಕೆ ಸಿಕ್ಕು ಕನ್ಯೆ ನೋಡಲು ಹೋದದ್ದಾಯಿತು. ಈಗ ಪಶ್ಚಾತ್ತಾಪ ಪಡಬೇಕಾಗಿದೆ."

ಶಿವಣ್ಣ ಒಂದು ನಿಮಿಷ ಮೌನವಾಗಿದ್ದು ಅನಂತರ ಹೇಳಿದ:

"ಮತ್ತೆ ನಿನ್ನ ಮೊದಲಿನ ರಾಗವನ್ನೇ ಸುರುಮಾಡಿದೆಯಲ್ಲ!" ಆ ಹಾರುವರ ಹುಡುಗಿಯ ಹುಚ್ಚು ಇನ್ನೂ ಹೋಗಲಿಲ್ಲವೇ ?"

ಕಳವಳದಿಂದ ಕಂಪಿಸುವ ದನಿಯಲ್ಲಿ ಸದಾನಂದನೆಂದ:

"ಅದು ಹುಚ್ಚಲ್ಲ ಶಿವಣ್ಣಾ. ನಿಜವಾಗಿ ಹುಚ್ಚಲ್ಲ. ರಜೆ ಮುಗಿಸಿಕೊಂಡು ಇಲ್ಲಿಗೆ ಬಂದ ಬಳಿಕ ನಾನು ಈ ವಿಷಯ ಬಹಳ ವಿಚಾರ ಮಾಡಿದ್ದೇನೆ. ಶಾಂತಿಯನ್ನಲ್ಲದೆ ಬೇರಾರನ್ನೂ ನಾನು ಮದುವೆಯಾಗಲಾರೆ. ಅವಳನ್ನು ಮರೆತು ನಾನು ಬದುಕುವದೇ ಸಾಧ್ಯವಿಲ್ಲ."

"ಸರಿ. ಸರಿ. ನೀನೊಬ್ಬ ಹುಚ್ಚ. ಸ್ವಲ್ಪವೂ ವ್ಯವಹಾರ ಜ್ಞಾನವಿಲ್ಲ. ಇಂದಿನ ಸಮಾಜ ಹೇಗಿದೆಯೆಂಬುದನ್ನಾದರೂ ಲಕ್ಷ್ಯಕ್ಕೆ ತಂದುಕೊಳ್ಳಬಾರದೇ ಸದಾನಂದಾ ? ಜನಿವಾರ ಶಿವದಾರಗಳು ಎಂದಾದರೂ ಕೂಡುವದು ಸಾಧ್ಯವೇ ? ಅವೆರಡಕ್ಕೂ ಬದ್ಧವೈರ. ಒಂದು ವೇಳೆ ನೀನು ಅವಳನ್ನೇ ಮದುವೆಯಾದೆಯೆಂದು ತಿಳಿಯೋಣ. ನಿಮ್ಮಿಬ್ಬರ ಗತಿಯೇನಾದೀತು ? ಬ್ರಾಹ್ಮಣರು ನಿಮ್ಮನ್ನು ದ್ವೇಷಿಸುವರು. ಲಿಂಗಾಯತರು ನಿಮ್ಮನ್ನು ಹಾಸ್ಯಮಾಡಿ ನಗುವರು. ಯಾವ ಸಮಾಜವೂ ನಿಮ್ಮನ್ನು ಆದರದಿಂದ ನೋಡುವದಿಲ್ಲ. ನಿಮಗೆ ಬಹಳ ಅವಮಾನವಾಗುವದು. ಮುಂದೆ ನಿಮ್ಮಿಬ್ಬರಿಗೂ ಬಹಳ ಪಶ್ಚಾತ್ತಾಪವಾಗುವದು."

"ಹಾಗೆಲ್ಲ ಆಗುವದೆಂದು ನನಗೂ ಅನ್ನಿಸುತ್ತದೆ ಶಿವಣ್ಣಾ. ಆದರೂ,

ಏನೇ ಆದರೂ ನಾನು ಅವಳನ್ನು ಕೈಬಿಡಲು ಸಾಧ್ಯವಿಲ್ಲ. ಮೊನ್ನೆ ಲೀಲಾ ಶಾಂತಾ ಇಬ್ಬರೂ ಬಂದಿದ್ದರು ರೂಮಿಗೆ. ಬಹಳ ಹೊತ್ತು ಚರ್ಚಿಸಿ ನಿರ್ಧಾರಕ್ಕೆ ಬಂದಿದ್ದೇವೆ."

"ನಿಮ್ಮ ಮದುವೆಗೆ ಲೀಲಾ ಒಪ್ಪುತ್ತಾಳೇನು ?"

"ಒಪ್ಪದಿರುವಳೇ ? ನಾನು ಉತ್ಸಾಹ ಕಳೆದುಕೊಂಡು ಕೂತಿದ್ದಾಗ ಲೀಲಳೇ ಹುರುಪು ಕೊಟ್ಟು ನಾನು ನಿರ್ಧಾರಕ್ಕೆ ಬರುವಂತೆ ಮಾಡಿದಳು."

ಮತ್ತೆ ಒಂದೆರಡು ನಿಮಿಷ ಮೌನವಾಗಿ ಕುಳಿತಿದ್ದ ಶಿವಣ್ಣ.

"ಹಾಗಾದರೆ ನಿನ್ನದು ನಿಶ್ಚಯವಾದ ಹಾಗೇ ಅನ್ನು. ಈಗ ನಾನು ಹುಕ್ಕೇರಿ ಸಾಹೇಬರಿಗೇನೆಂದು ಬರೆಯಲಿ ? ಮೀನಾಕ್ಷಿಯನ್ನು ನೀನು ಒಪ್ಪಿಕೊಂಡಿರುವಿಯೆಂದೇ ಅವರೆಲ್ಲಾ ನಂಬಿದ್ದಾರೆ. ತಮ್ಮ ಆಪ್ತ ಮಿತ್ರರಿಗೂ ಸಹ ಈ ಸುದ್ದಿ ತಿಳಿಸಿರಬಹುದು. ಈಗ ನೀನು ನಿರಾಕರಿಸಿಬಿಟ್ಟರೆ ಅವರಿಗೆಲ್ಲಾ ಎಷ್ಟು ಆಘಾತವಾದೀತು....ಜನರಲ್ಲಿ ಎಷ್ಟು ನಗೆಗೀಡಾದೀತು.... ಛೆ. ಛೆ."

"ನನಗೂ ಆ ಕಲ್ಪನೆಯಿಲ್ಲವೆಂದು ತಿಳಿಯಬೇಡ ಶಿವಣ್ಣಾ. ನಾನಾಗಿಯೆ ತಂದುಕೊಂಡ ಈ ಪೇಚಾಟ ಕಂಡಾಗ ಯಾರಿಗೂ ಮುಖ ತೋರಿಸದೆ ಎಲ್ಲಾದರೂ ಹಾಳಾಗಿ ಹೋಗಬೇಕು ಅನ್ನಿಸುತ್ತದೆ. ಅಷ್ಟು ಬೇಸರವಾಗಿದೆ ಜೀವಕ್ಕೆ," ಎಂದು ಸಂತ್ರಸ್ತ ಸ್ವರದಲ್ಲಿ ಹೇಳಿದ ಸದಾನಂದ.

ಶಿವಣ್ಣ ಚಕಿತನಾಗಿ ಗೆಳೆಯನನ್ನು ಸಹಾನುಭೂತಿಯ ದೃಷ್ಟಿಯಿಂದ ದಿಟ್ಟಿಸಿನೋಡಿದ. ಸದಾನಂದನ ಭಾವನಾಪರವಶ ಸ್ವಭಾವವನ್ನು ಚೆನ್ನಾಗಿ ಬಲ್ಲವನು ಶಿವಣ್ಣ. ಉದ್ವೇಗದ ಭರದಲ್ಲಿ ಸದಾನಂದ ನಿಜವಾಗಿಯೂ ಜೀವಕ್ಕೆ ಅಪಾಯ ಮಾಡಿಕೊಂಡರೂ ಮಾಡಿಕೊಳ್ಳಬಹುದು, ಈ ಪ್ರಸಂಗವನ್ನು ಹೆಚ್ಚಿಗೆ ಬೆಳಸಬಾರದು, ಅವನು ತನಗೆ ತಿಳಿದ ಹಾಗೆ ಮಾಡಲಿ – ಎಂದುಕೊಂಡು, ಗೆಳೆಯನನ್ನು ಸಂತೈಸುತ್ತ,

"ಹೋಗಲಿ ಬಿಡು ಸದಾ. ನಾನಿನ್ನು ನಿನಗೆ ಒತ್ತಾಯ ಮಾಡುವದಿಲ್ಲ. ಆದರೆ, ಹುಚ್ಚನ ಹಾಗೆ ಏನಾದರೂ ಅನಾಹುತ ಮಾಡಿಬಿಡಬೇಡಪ್ಪ. ನನ್ನಾಣೆ ನಿನಗೆ," ಎಂದ. "ನಿಶ್ಚಯ ಕಾರ್ಯವನ್ನು ಮುಂದುವರಿಸಲು ಬರೆದುಬಿಡುತ್ತೇನೆ ಹುಕ್ಕೇರಿಯವರಿಗೆ."

"ಮುಂದುವರಿಸುವದು ?"

" ಹಾಗೆ ಬರೆಯುತ್ತೇನೆ ಮೊದಲು. ಆ ಮೇಲೆ ರಜಾ ಸಿಕ್ಕಿದಾಗ ನಾನೇ ಹೋಗಿ ಭೆಟ್ಟಿಯಾಗಿ ನಿಜವಾದ ವಿಷಯವೆಲ್ಲಾ ಹೇಳಿ ಅವರನ್ನು ಸಮಾಧಾನ ಪಡಿಸುತ್ತೇನೆ. ಅವರೂ ಸುಸಂಸ್ಕೃತರು. ನಿನ್ನ ಪರಿಸ್ಥಿತಿಯನ್ನು ಅರ್ಥ ಮಾಡಿಕೊಳ್ಳಬಲ್ಲರು.'

ಸದಾನಂದನ ಮುಖದಲ್ಲಿ ಆನಂದದ ನಗೆ ಆಡತೊಡಗಿತು.

" ಅವರೇನೂ ತಪ್ಪು ತಿಳಿದುಕೊಳ್ಳಲಿಕ್ಕಿಲ್ಲವಲ್ಲ ಶಿವಣ್ಣಾ ?"

" ಇಲ್ಲ. ಅವರೂ ತಿಳಿದವರು. ಸುಶಿಕ್ಷಿತರು. ನಿನ್ನನ್ನು ಸಹಾನುಭೂತಿ ಯಿಂದಲೇ ನೋಡಬಹುದು."

ತನ್ನೆದೆಯ ಮೇಲಿನ ದೊಡ್ಡ ಭಾರವೊಂದು ತೊಲಗಿದಂತಾಗಿ ಸದಾನಂದನಿಗೆ ಹಾಯೆನ್ನಿಸಿತು.

ಶಿವಣ್ಣನೂ ನಗುತ್ತಾ ಕಚೇರಿಯ ಕಡೆ ನಡೆದ. ಶಾಂತಳಿಗೂ ಸದಾ ನಂದನಿಗೂ ಮದುವೆಯಾಗಬಹುದೆಂದು ಅವನೇನೂ ನಂಬಿಕೊಂಡಿರಲಿಲ್ಲ. ಮನೆಯವರನ್ನೆಲ್ಲ ತ್ಯಜಿಸಿ ಸಮಾಜವನ್ನೆದುರಿಸಿ ಈ ಕವಿಯೊಡನೆ ಹೊರಟು ಬಿಡುವಂಥ ಹುಚ್ಚುತನಕ್ಕೆ ಆ ಹುಡುಗಿ ತೊಡಗಲಿಕ್ಕಿಲ್ಲವೆಂದೇ ಅವನಿಗೆನ್ನಿ ಸುತ್ತಿತ್ತು. ಈ ಪ್ರಣಯಸಂಬಂಧ ಇನ್ನು ಕೆಲವು ದಿನ ನಡೆಯಬಹುದು, ಮುಂದೆ ಶಾಂತಳಿಗೆ ಮದುವೆಯಾಗಬಹುದು, ಸದಾನಂದ ಕೆಲವು ದಿನ ನರಳಿ ಅನಂತರ ನಿಧಾನವಾಗಿ ಸುಧಾರಿಸಿಕೊಂಡು ಮೀನಾಕ್ಷಿಯನ್ನು ಮದುವೆ ಯಾಗಲು ಒಪ್ಪಬಹುದು. ಎಷ್ಟೋ ಕಡೆ ಎಷ್ಟೋ ಸಲ ಹೀಗೆಯೆ ಆಗಿಲ್ಲವೆ? ಸದಾನಂದನದೂ ಹೀಗೇ ಆಗಬಹುದು — ಎಂದು ಶಿವಣ್ಣನ ಯೋಚನೆ.

ಸದಾನಂದನ ಯೋಚನೆ ಮಾತ್ರ ಹಾಗಿರಲು ಸಾಧ್ಯವಿರಲಿಲ್ಲ. ಅಪಘಾತ ಕ್ಕೊಳಗಾಗುವ ಪ್ರಸಂಗವೊಂದರಿಂದ ಸುಖರೂಪವಾಗಿ ತಪ್ಪಿಸಿಕೊಂಡವರಂತೆ ಆತ ಸಂತೋಷದಿಂದ ಭೋಜನಾಲಯದತ್ತ ಸಾಗಿದ್ದ. ಉಲ್ಲಸದ ಉಯ್ಯಾಲೆ ಯೊಡನೆ ತೂಗಿಕೊಳ್ಳುತಿತ್ತು ಅವನ ಮನಸು.

ಶಿವಲಿಂಗನಿಗೆ ಪಾಠ ಹೇಳಿ, ಊಟ ಮುಗಿಸಿಕೊಂಡು ಅವನು ಕೊಟಡಿಯ ಕಡೆ ನಡೆದಿದ್ದ ಹಾಗೆ ರಸ್ತೆಯಲ್ಲಿ ಹೊರಟಿದ್ದ ಶೇಶಪಾಂಡೆ ಮತ್ತು ಕೊಟಬಾಗಿ ಯವರನ್ನು ಕಂಡು ಸಂತೋಷದಿಂದಲೇ ಮಾತನಾಡಿಸಿದ. ತನ್ನೊಡನೆ ಅವರು ಅನುಚಿತ ರೀತಿಯಲ್ಲಿ ವರ್ತಿಸಿದುದರ ನೆನಪು ಅವನಿಗಿರಲಿಲ್ಲ. ಕೊಟಬಾಗಿ

ತನ್ನನ್ನು ಅಸಭ್ಯತನದಿಂದ ಕೊಟಡಿಯಿಂದ ಹೊರದೂಡಿದುದರ ಜ್ಞಾಪಕ ಅವನಿಗಿರಲಿಲ್ಲ. ಅವರ ದ್ವೇಷ, ಅವರ ಅಸೂಯೆ, ಅವರ ಅವಹೇಳನಕರ ನುಡಿಗಳು ಎಲ್ಲವನ್ನೂ ಆತ ಮರೆತುಬಿಟ್ಟಿದ್ದ. ಜಗತ್ತಿನೆಲ್ಲ ಜನರ ಬಗೆಗೂ ಅವನೆದೆಯಲ್ಲಿ ಪ್ರೀತಿ ತುಂಬಿ ಬಂದಿರುವಾಗ ಈ ಹಳೆಯ ಗೆಳೆಯರನ್ನಾತ ದ್ವೇಷಿಸುವುದುಂಟೇ ?

" ಹಲೋ ಕೊಟಬಾಗಿ, ಸುಖವಾಗಿದ್ದಿರಾ ?"

" ಹಲೋ ದೇಶಪಾಂಡೆ, ಕ್ಷೇಮವೆ ?"

" ನಿಮ್ಮಂಥಾ ಸುಖ ನಮಗೆಲ್ಲಿಂದ ಬರಬೇಕಪ್ಪಾ !" ಎಂದು ಅಣಕದ ನಗೆಯೊಡನೆ ನುಡಿದ ಕೊಟಬಾಗಿ.

" ನಾವು ಯಾವಾಗಲೂ ಕ್ಷೇಮದಿಂದಲೇ ಇರ್ತೇವೆ," ಎಂದು ಒರಟಾಗಿ ಉತ್ತರವಿತ್ತ ದೇಶಪಾಂಡೆ.

" ಇನ್ನೂ ಬರಲಿಲ್ಲವಲ್ಲಾ ನಿಮ್ಮ ಚೊಚ್ಚಿಲ ಕಂದ ?" ಎಂದು ಮತ್ತೆ ಕೇಳಿದ ಕೊಟಬಾಗಿ.

" ಕಂದ ?" ಸದಾನಂದನಿಗೆ ಅವನ ಪ್ರಶ್ನೆ ಅರ್ಥವಾಗಲಿಲ್ಲ.

" ಅಂದರೆ, ನಿಮ್ಮ ಪ್ರಪ್ರಥಮ ಕವನ ಸಂಗ್ರಹ....ಎರಡು ತಿಂಗಳ ಹಿಂದೇ ಬರಬೇಕಾಗಿತ್ತಲ್ಲ !"

" ಪ್ರೆಸ್ಸಿನಲ್ಲೇನೋ ಅನಾನುಕೂಲವಂತೆ. ಇನ್ನೇನು ವಾರ ಎರಡು ವಾರಗಳಲ್ಲೇ ಬಂದೀತು."

" ಇನ್ನೆರಡು ದಿನಗಳಲ್ಲೇ ಕೊಟಬಾಗಿಯವರ ಕವನ ಸಂಗ್ರಹ ಬರುತ್ತದೆ," ಎಂದು ನುಡಿದು ಕಣ್ಣುಗಳನ್ನು ಕುಣಿಸಿದ ದೇಶಪಾಂಡೆ.

" ಹೀಗೇನು ? ಬಹಳ ಚಲೋದಾಯಿತು, ಬಹಳ ಚಲೋದಾಯಿತು," ಎಂದು ತನ್ನ ಹೃತ್ಪೂರ್ವಕ ಸಂತೋಷವನ್ನು ವ್ಯಕ್ತಗೊಳಿಸಿದ ಸದಾನಂದ. ಅವನಿಗೆ ನಿಜವಾಗಿಯೂ ಸಂತೋಷವಾಗಿದೆಯೆಂದು ಅವರು ಭಾವಿಸಲಿಲ್ಲ. ಒಳಗೊಳಗೇ ಅಸೂಯೆಯಿಂದ ತಳಮಳಿಸುತ್ತಿದ್ದರೂ ಬಾಯೋಪಚಾರಕ್ಕೆ ಹೀಗೆ ಹೇಳುತ್ತಿರಬೇಕು ಕಳ್ಳ ! ಎಂದುಕೊಂಡರು.

" ಪ್ರಕಾಶಕರು ಯಾರು ?" ಎಂದು ಕುತೂಹಲದಿಂದ ಕೇಳಿದ ಸದಾನಂದ.

" ಪ್ರಕಾಶಕರಿಗೇನು ಕೊರತೆ! ಅಭಿಮಾನವಿರುವ ಜನ ಇನ್ನೂ ಇದ್ದಾರೆ ಸಾಕಷ್ಟು," ಎಂದ ದೇಶಪಾಂಡೆ.

" ಪ್ರಕಾಶ ಪ್ರಕಟನಾಲಯದಿಂದ ಹೊರಬೀಳುತ್ತದೆ ಸದಾನಂದಾ," ಎಂದ ಕೊಟಬಾಗಿ. ಕಾಗದ ಮುದ್ರಣಾದಿಗಳ ವೆಚ್ಚವನ್ನೆಲ್ಲ ತಾನೇ ವಹಿಸಿ ಕೊಂಡಿದ್ದರೂ ಹೆಸರಿಗೆ ಮಾತ್ರ ಕೇಶವರಾಯರು ಪ್ರಕಾಶಕರಾಗಿದ್ದುದನ್ನು ಅವನು ಹೇಳಲಿಲ್ಲ. ಅದು ಹೇಳತಕ್ಕ ಮಾತೂ ಆಗಿರಲಿಲ್ಲ!

" ನಿಮ್ಮ ಸಂಘ ಹ್ಯಾಗೆ ನಡೆದಿದೆ ಕೊಟಬಾಗಿ?"

" ಗ್ರ್ಯಾಂಡ್!" ಎಂದ ಕೊಟಬಾಗಿ.

" ನಿಮ್ಮ ಕೂಟ?" ಎಂದು ಕೇಳಿದ ದೇಶಪಾಂಡೆ.

" ನೀವು ಹೋದಾಗಲೇ ಅದೂ ಹೋಯಿತು. ಸರಿ. ನನಗೇನೂ ವ್ಯಸನವಿಲ್ಲ. ನಿಮ್ಮ ಸಂಘವೂ ನಮ್ಮದೇ ಅಲ್ಲವೇ?"

ದೇಶಪಾಂಡೆ ಕೊಟಬಾಗಿ ಇಬ್ಬರೂ ವ್ಯಂಗ್ಯ ನಗೆ ಚಿಮುಕಿಸುತ್ತ ಅಲ್ಲಿಂದ ಹೊರಟುಬಿಟ್ಟರು. ಉಲ್ಲಸಿತವಾಗಿದ್ದ ಸದಾನಂದನ ಮನಸ್ಸು ಮತ್ತೆ ವ್ಯಗ್ರ ವಾಯಿತು. ತಾನು ಅಷ್ಟು ಪ್ರೇಮದಿಂದ ವರ್ತಿಸಿದರೂ ಕೂಡ ಅವರು ಹೀಗೆ ಆಚರಿಸಲು ಏನು ಕಾರಣವೋ. ತಾನು ಅವರಿಗೆಸಗಿದ ಅಪರಾಧವಾದರೂ ಏನು? ತಾನು ಶಿವದಾರದವನಾಗಿ ಹುಟ್ಟಿದುದೇ ಒಂದು ಅಪರಾಧವೋ ಏನೊ ಯಾರು ಬಲ್ಲರು. ಯುವಕ ಪೀಳಿಗೆಯಲ್ಲೂ ಈ ಜಾತೀಯ ಭಾವನೆಯುತ್ಪನ್ನ ವಾದರೆ ಮುಗಿದೇ ಹೋಯಿತು. ಮುಂದೆ ಕರ್ನಾಟಕದ ಗತಿಯೇನೊ. ಭಾರತದ ಗತಿಯೇನೊ....

ಅಂದು ರಾತ್ರೆ ಪರಸಣ್ಣವರ್ ಎಲ್ಲಿಗೂ ಹೋಗದೆ ಕೊಟಡಿಯಲ್ಲೇ ಇದ್ದ. ಸದಾನಂದನಿಗೆ ತುಸು ವಿಸ್ಮಯವಾಗದಿರಲಿಲ್ಲ.

" ಯಾಕೆ ಪರಸಣ್ಣವರೆ, ಲೂಸಿ ಊರಲ್ಲಿಲ್ಲವೆ?"

" ಪರೀಕ್ಷೆ ಹತ್ತರ ಬಂತಲ್ಲ. ಅವಳು ಸ್ವಲ್ಪವಾದರೂ ಅಭ್ಯಾಸ ಮಾಡ ಬೇಡವೆ? ಪಾಸಾಗದಿದ್ದರೆ ಮತ್ತೊಂದು ವರ್ಷ ವ್ಯರ್ಥವಾಗಿ ಕಷ್ಟ," ಎಂದ ಪರಸಣ್ಣವರ್. " ಹೂಂ. ನಿಮ್ಮದೇನಾಯಿತು? ನಿಮ್ಮ ಪ್ಯಾರಿಯ ಮದುವೆ ಗೊತ್ತಾಯಿತೋ ಏನು?"

"ಮಾತು ನಡೆದಿದೆಯಂತೆ. ಅವಳೇನು ಒಪ್ಪಿಕೊಳ್ಳುವದಿಲ್ಲ. ಬಹಳ ಮಾಡಿ ಮದುವೆ ಮುಂದಕ್ಕೆ ಹೋಗುತ್ತದೆ...."

"ಅವಳ ಮನೆಯವರು ಕೇಳದಿದ್ದರೆ? ಮದುವೆಯನ್ನು ನಿಶ್ಚಯಿಸಿಯೇ ಬಿಟ್ಟರೆ?"

"ಅಂಥ ಪ್ರಸಂಗ ಬಂದಾಗ ನೋಡಬೇಕು. ಏನಾದರೂ ಮಾಡ ಬೇಕಲ್ಲ?"

ಪರಸಣ್ಣವರ್ ನಗುತ್ತ ಕೇಳಿದ:

"ಏನು ಮಾಡುವ ವಿಚಾರ ನಿಮ್ಮದು?"

ಸದಾನಂದ ತಲೆ ಕೆರೆದುಕೊಳ್ಳುತ್ತ ಯೋಚನಾಮಗ್ನನಾಗಿ ಕುಳಿತು ಕೊಂಡಿದ್ದ. ಅಂಥ ಪ್ರಸಂಗ ಬಂದಾಗ ಏನು ಮಾಡಬೇಕು? ಶಾಂತಳನ್ನು ಬಿಟ್ಟು ತಾನು ಬೇರೆಯವರನ್ನು ಲಗ್ನವಾಗುವುದು ಅಸಾಧ್ಯವೆಂಬ ತೀರ್ಮಾನಕ್ಕೆ ಅವನು ತಲುಪಿದ್ದನಾದರೂ ನಿಕಟಭವಿಷ್ಯದಲ್ಲಿ ಶಾಂತಳನ್ನೇ ಮದುವೆಯಾಗುವ ಪ್ರಸಂಗ ಬಂದಲ್ಲಿ ಏನು ಮಾಡುವುದೆಂದು ಆತ ಯೋಚಿಸಿರಲಿಲ್ಲ. ಲೀಲಾ ಸಹ ಆ ವಿಚಾರವಾಗಿ ಸಲಹೆಯಿತ್ತಿರಲಿಲ್ಲ. ಮದುವೆಯ ಸಂದರ್ಭ ಇನ್ನೂ ಬಲು ದೂರವಿದೆಯೆಂದೇ ಅವನು ಭಾವಿಸಿದ್ದ. ಅಷ್ಟರೊಳಗಾಗಿ ತಾನೊಂದು ಪದವಿ ಪಡೆದುಕೊಳ್ಳಬಹುದು, ಒಂದು ಕೆಲಸವನ್ನೂ ಸಂಪಾದಿಸಬಹುದು, ಶಾಂತಾ ಸಹ ಬಿ.ಎ. ಮುಗಿಸಬಹುದು, ಅವಳೂ ಎಲ್ಲಾದರೂ ಒಂದು ಕೆಲಸಕ್ಕೆ ಸೇರ ಬಹುದು, ಮುಂದೆ ತಾವಿಬ್ಬರೂ ಸುಲಭವಾಗಿ ರಜಿಸ್ಟರ್ ಪದ್ಧತಿಯಂತೆ ಮದುವೆ ಯಾಗಬಹುದು, ಎಂದು ಅವನು ಎಣಿಕೆ ಹಾಕಿಕೊಂಡಿದ್ದ.

ಸದಾನಂದ ಗೊಂದಲಕ್ಕೊಳಗಾದುದನ್ನು ಕಂಡು ಪರಸಣ್ಣವರ್ ಮತ್ತೆ ನಕ್ಕು,

"ಕವಿಗಳದೆಲ್ಲಾ ಸ್ಫೂರ್ತಿಯ ಕೆಲಸವೇ ಅಂತ ಕಾಣುತ್ತದೆ," ಎಂದಿಷ್ಟೆ ನುಡಿದು ಮಂಚದ ಮೇಲುರುಳಿಕೊಂಡ.

ಮಧ್ಯರಾತ್ರಿಯ ಸಮಯದಲ್ಲಿ ಅವನಿಗೆ ಹಠಾತ್ತಾಗಿ ಎಚ್ಚರವಾಯಿತು. ಕಿಟಕಿಯಾಚೆ ನಿಂತುಕೊಂಡು ಯಾರೋ ಮೆಲ್ಲಗಿನ ದನಿಯಲ್ಲಿ ಕೂಗುತ್ತಿದ್ದರು.

ಅವನು ಎದ್ದು ದೀಪ ಅಂಟಿಸುವುದರೊಳಗಾಗಿ ಸದಾನಂದನಿಗೂ ಎಚ್ಚರ ವಾಗಿದ್ದಿತು.

" ಯಾರವರು ಪರಸಣ್ಣವರ್ ?"

ಕಿಟಕಿಯಾಚೆಯಿಂದ ಶಾಂತಳ ದನಿ ಕೇಳಬಂದಿತು :

" ನಾನು."

ಹೊದೆದುಕೊಂಡಿದ್ದ ಕಾಲನ್ನು ದೂಡಿ ಅವನು ಹಾಸಿಗೆಯ ಮೇಲೆದ್ದು ಕುಳಿತ. ಮರುಕ್ಷಣವೆ ಆ ಸನ್ನಿವೇಶವೆಲ್ಲ ಅವನಿಗೆ ಸ್ಪಷ್ಟವಾಗಿ ಅರ್ಥವಾಯಿತು. ಓಡಿಹೋಗಿ ಬಾಗಿಲು ತೆರೆದು ಅವಳನ್ನು ಒಳಗಡೆ ಬರಮಾಡಿಕೊಂಡ.

" ಏನಾಯಿತು ಶಾಂತಾ, ಏನಾಯಿತು ?"

ಪರಸಣ್ಣವರ್ ಕೊಟಡಿಯಲ್ಲಿರಬಹುದೆಂದು ಭಾವಿಸಿರದಿದ್ದ ಅವಳಿಗೆ ಅವನನ್ನು ಅಲ್ಲಿ ಕಂಡಾಗ ತುಂಬ ಸಂಕೋಚವೆನ್ನಿಸದಿರಲಿಲ್ಲ. ಅವನ ಸಮಕ್ಷಮದಲ್ಲಿ ತಾನು ಬಾಯಿಬಿಡುವುದಾದರೂ ಹೇಗೆ? ಅದರಲ್ಲೂ ಇದು ವಿಲಕ್ಷಣ ಸಮಯ, ವಿಲಕ್ಷಣ ಸನ್ನಿವೇಶ....

ಅವಳ ಸಂಕೋಚವನ್ನು ತಕ್ಷಣ ಗುರುತಿಸಿಕೊಂಡ ಪರಸಣ್ಣವರನೇ ಮೊದಲು ಮಾತನಾಡಿದ :

" ನೀವು ಸ್ವಲ್ಪವೂ ಸಂಕೋಚ ಮಾಡಿಕೊಳ್ಳಬೇಡಿರಿ ಶಾಂತಾ. ನಿಮ್ಮಿಬ್ಬರ ಸಂಬಂಧದ ಬಗ್ಗೆ ನನಗೆ ಪೂರಾ ಗೊತ್ತಿದೆ. ನಾನೂ ನಿಮ್ಮ ಹಿತಚಿಂತಕನೆಂದೇ ತಿಳಿದುಕೊಳ್ಳಿರಿ. ಈಗ ಒಮ್ಮೆಲೆ ಅಂಥಾದ್ದು ಏನಾಯಿತು ?"

ತಲೆ ತಗ್ಗಿಸಿ ಕುಳಿತುಕೊಂಡು ಅವಳು ನಿಧಾನವಾಗಿ ಅಂದು ನಡೆದುದನ್ನೆಲ್ಲ ವಿವರಿಸಿದಳು.

" ಮನೆಯನ್ನಂತೂ ಬಿಟ್ಟಾಯಿತಲ್ಲ. ಮುಂದೇನು ಮಾಡಬೇಕೆಂದಿದ್ದೀರಿ ?" ಎಂದು ಕೇಳಿದ ಪರಸಣ್ಣವರ್.

" ಇಷ್ಟು ಬೇಗ ಮನೆ ಬಿಡುವ ಪ್ರಸಂಗ ಬಂದೀತೆಂದು ನನಗೂ ಅನ್ನಿಸಿರಲಿಲ್ಲ."

" ನೀವು ಈಗಿಂದೀಗ ಎಲ್ಲಿಗಾದರೂ ಹೊರಟುಬಿಡಬೇಕು," ಎಂದ ಪರಸಣ್ಣವರ್.

" ಎಲ್ಲಿಗೆ ಪರಸಣ್ಣವರ್ ?" ಎಂದ ಸದಾನಂದ.

" ಎಲ್ಲಿಗೆಂದರೆ ಎಲ್ಲಿಗಾದರೂ. ಪುಣೆ....ಮುಂಬಯಿ....ಬೆಂಗಳೂರು....

ಅಥವಾ ಮದ್ರಾಸು....ಅಂತೂ ಎಲ್ಲಿಗಾದರೂ ದೂರ ಹೋಗಿಬಿಡಬೇಕು. ಅಲ್ಲೇ ರಜಿಸ್ಟರ್ ಮ್ಯಾರೇಜ್ ಆಗಲು ಬಂದೀತು."

"ಅದೆಲ್ಲ ಸರಿ ಪರಸಣ್ಣವರ್....ಆದರೆ....ನನ್ನ ಪರಿಸ್ಥಿತಿಯೇನು ಅನ್ನುವದನ್ನು ಮರೆಯುವಂತಿಲ್ಲವಲ್ಲಾ. ಮುಂಬಯಿ ಮದರಾಸು ಅಂದರೆ ಹುಡುಗಾಟವೇನು? ನೂರಾರು ರೂಪಾಯಿ ಬೇಕು....ಅಲ್ಲದೆ ಅಲ್ಲಿಗೆ ಹೋಗಿ ಮಾಡುವದಾದರೂ ಏನು?"

ಪರಸಣ್ಣವರ್ ರೇಗಿ ನುಡಿದ: "ಏನು ಮಾಡುವದೆಂದರೆ, ಕೂಲಿಯನ್ನಾದರೂ ಮಾಡುವದು. ಅದೂ ಆಗದಿದ್ದರೆ ಇಬ್ಬರೂ ಕೂಡಿ ಸಮುದ್ರದಲ್ಲಿ ಬೀಳುವದು. ಎಷ್ಟೋ ಲವರ್ಸು ಸಾಯುವದಿಲ್ಲವೆ, ಹಾಗೆ...."

ಬಾಗಿಸಿದ್ದ ತಲೆಯನ್ನು ಮೇಲೆತ್ತಿ ಕನಿಕರದ ದೃಷ್ಟಿಯಿಂದ ಸದಾನಂದನನ್ನು ನೋಡುತ್ತ ಶಾಂತಳೆಂದಳು:

"ನಿಮಗೆ ತೊಂದರೆಯಾಗುವ ಹಾಗಿದ್ದರೆ ನಾನೊಬ್ಬಳೇ ಹೋಗುತ್ತೇನೆ. ನನ್ನದೇನೂ ಒತ್ತಾಯವಿಲ್ಲ."

ಅವಳ ಮಾತಿನಿಂದಾಗಿ ಸದಾನಂದನ ಎದೆಯಲ್ಲಿ ಮಿಂಚಿನ ಸಂಚಾರವಾದಂತಾಯಿತು. ಹೇಡಿಯ ಹಾಗೆ ತಾನು ಮಾತನಾಡಿದುದಕ್ಕಾಗಿ ತುಂಬಾ ಸಂತಾಪವಾಯಿತು. ಅವನು ಚಪಲತೆಯಿಂದ ಬಟ್ಟೆ ಹಾಕಿಕೊಂಡು ಅವಶ್ಯಕ ವಸ್ತುಗಳನ್ನು ಬ್ಯಾಗಿಗೆ ತುಂಬುತ್ತಾ ಹೇಳಿದ:

"ಮದರಾಸೂ ಬೇಡ, ಮುಂಬಯಿಯೂ ಬೇಡ. ಸದ್ಯಕ್ಕಂತೂ ನಾವು ನರಗುಂದನ ಊರಿಗೆ ಹೋಗುತ್ತೇವೆ, ಪರಸಣ್ಣವರ್."

"ಎಲ್ಲಾದರೂ ಹೋಗಿರಿ. ಅಂತೂ ಬೇಗ ಹೋಗಿರಿ – ಈಗ ಮೂರು ಗಂಟೆಗೊಂದು ರೈಲಿದೆಯಲ್ಲಾ, ಅದನ್ನೇ ಹಿಡಿಯಬಹುದು," ಎಂದು ನುಡಿದು ಪರಸಣ್ಣವರ್ ಶಾಂತಳ ಕಡೆ ತಿರುಗಿ, "ಈ ಕವಿಗಳಿಗಿಂತ ನೀವೇ ಧೈರ್ಯಶಾಲಿ," ಎಂದು ಮೆಚ್ಚುಗೆಯ ದನಿಯಲ್ಲಿ ಹೇಳಿದ.

"ಮನೆಯಿಂದ ಬರುವಾಗ ಯಾರಾದರೂ ನಿಮ್ಮನ್ನು ನೋಡಿದರೇ?"

"ಇಲ್ಲ. ಈ ವೇಳೆಯಲ್ಲಿ ಯಾರು ಎಚ್ಚರವಾಗಿರುತ್ತಾರೆ?"

"ಮನೆಯವರಿಗೂ ಎಚ್ಚರವಾಗಿರಲಿಕ್ಕಿಲ್ಲ, ಅಲ್ಲವೇ?"

"ಇಲ್ಲ."

ಅವರನ್ನು ರೈಲಿನಲ್ಲಿ ಕೂಡಿಸಿ ಬರಲು ಪರಸಣ್ಣವರನೂ ಬಂದಿದ್ದ. ಅವರಿಬ್ಬರೂ ಬೇಡವೆಂದರೂ ಕೇಳವೆ ಅವನೇ ಇಂಟರ್ ವರ್ಗದ ಟಿಕೀಟು ತೆಗೆಸಿದ. ರೈಲು ಬರುತ್ತಲೂ ಡಬ್ಬಿಯಲ್ಲಿ ಅವರನ್ನು ಕೂಡಿಸಿ,

"ನಾನು ಇನ್ನೂ ಒಂದೆರಡುವಾರ ಇಲ್ಲೇ ಇರಬೇಕಾಗಿದೆ. ನಿಮಗೇ ನಾದರೂ ತೊಂದರೆ ಬಂದರೆ ನನಗೊಂದು ಟೆಲಿಗ್ರಾಂ ಕೊಟ್ಟು ಬಿಡಿರಿ," ಎಂದು ಹೇಳಿ ಸದಾನಂದನ ಕೈಗಳನ್ನು ಸ್ನೇಹದಿಂದ ಕುಲಕಿಸಿ, ಜೇಬಿನಿಂದ ದಪ್ಪಗಿನ ದೊಂದು ಕವರು ತೆಗೆದು ಅವನ ಕೈಗೆ ಹಾಕಿದ.

"ಇದೇನು? ಬೇಡ ಬೇಡ!" ಎಂದು ಸದಾನಂದ ಹೇಳುತ್ತಿದ್ದ ಹಾಗೆ, ಸಿಳ್ಳು ಹಾಕಿ ರೈಲು ಮುಂದೆ ಹೊರಟಿತು. ದೊಡ್ಡದೊಂದು ಪಂದ್ಯಾಟದಲ್ಲಿ ವಿಜಯಿಯಾದಾಗ ಹೆಮ್ಮೆಯಿಂದಲೂ ಸಂತಸದಿಂದಲೂ ನಗುವಂತೆ ನಗುತ್ತಾ ಫ್ಲಾಟ್‌ಫಾರ್ಮಿನ ಮೇಲೆ ನಿಂತು ಕೈ ಬೀಸುತ್ತಲಿದ್ದ ಪರಸಣ್ಣವರ್.

ರಾತ್ರಿಯ ಗಾಡಿಯಾದುದರಿಂದ ಡಬ್ಬಿಯಲ್ಲಿನ ಪ್ರಯಾಣಿಕರೆಲ್ಲ ತೂಕಡಿಸುತ್ತಲಿದ್ದರು. ಹೊಸದಾಗಿ ರೈಲು ಹತ್ತಿದ ಈ ಜೋಡಿಯ ಕಡೆಗೆ ಯಾರ ಗಮನವೂ ಹೊರಳಿರಲಿಲ್ಲ.

ತುಂಬ ಸಂಕೋಚದಿಂದ ಸದಾನಂದ ಕವರನ್ನು ತೆರೆದು ನೋಡಿದ: ಹತ್ತು ರೂಪಾಯಿ ನೋಟುಗಳದೊಂದು ಕಟ್ಟು ಅದರಲ್ಲಿತ್ತು.

"ಇದನ್ಯಾಕೆ ಕೊಟ್ಟನೋ ಏನೊ. ಪರಸಣ್ಣವರ್ ಬಹಳ ಉದಾರಿ!"

"ಲೀಲಾ ಕೂಡಾ ಇವರಂತೆಯೇ ಬಹಳ ದೊಡ್ಡ ಮನಸ್ಸಿನಾಕೆ. ನಾನು ಬೇಡ ಬೇಡಾಂದರೂ ಕೇಳದೆ ಎರಡು ನೂರು ರೂಪಾಯಿ ತಂದು ಸೆರಗಿಗೆ ಕಟ್ಟಿ ಬಿಟ್ಟಳು."

"ಅಂದರೆ? ನೀನು ಬರುವದು ಗೊತ್ತೇ ಲೀಲಾಗೆ?"

"ಇವತ್ತೇ ಹೊರಡಬೇಕಾದೀತು ಅಂತ ನನಗೂ ಅನ್ನಿಸಿರಲಿಲ್ಲ, ಅವಳಿಗೂ ಅನ್ನಿಸಿರಲಿಲ್ಲ. ಆದರೂ ಅಂಥ ಪ್ರಸಂಗ ಬರಬಹುದೆಂದು ಯೋಚಿಸಿ ಮಧ್ಯಾಹ್ನವೇ ಎಲ್ಲಾ ತಯಾರಿ ಮಾಡಿದ್ದೆವು."

"ಅಂತೂ ಕೆಲದಿನಗಳವರೆಗಾದರೂ ಚಿಂತೆ ತಪ್ಪಿತು," ಎಂದು ಮನಸ್ಸಿನಲ್ಲೇ ಹೇಳಿಕೊಂಡ ಸದಾನಂದ.

ಅವಳು ಅವನ ಭುಜದ ಮೇಲೆ ಕೊಂಚ ಬಾಗಿ ಕುಳಿತುಕೊಂಡಿದ್ದಳು.

ಆತ ಅವಳ ಕೈಯನ್ನು ತನ್ನ ಕೈಯಲ್ಲಿಟ್ಟುಕೊಂಡಿದ್ದ. ಅವಳ ಸುಗಂಧಯುಕ್ತವಾದ ಕೂದಲುಗಳಲ್ಲಿ ಅರೆಬರೆಯಾಗಿ ಕಾಣುತ್ತಿದ್ದ ಅವಳ ಕಿವಿ ಅವನಿಗೆ ತೀರ ಹತ್ತಿರ ಬಂದಿತ್ತು. ರೈಲು ಅಲುಗಾಡಿದಾಗ ಅವಳ ದೇಹವೂ ಅಲುಗಾಡುತಿತ್ತು – ಅವನ ದೇಹದ ಮೇಲೆ. ಅವಳ ಕಣ್ಣುಗಳು ನರ್ತಿಸುವಂತೆ ತೋರುತ್ತಿದ್ದರೂ ಸ್ತಬ್ಧವಾಗಿದ್ದುವು. ಈಗ ಇನ್ನೊಂದು ಗಳಿಗೆಗೆ ನಗೆಯನ್ನು ಸೂಸುವಂತೆ ಬಾಯಿ ಅರೆತೆರೆದಿತ್ತು. ಅವಳು ಏನನ್ನೋ ಯೋಚಿಸಿ ಒಂದುಬಾರಿ ಕೆಳದುಟಿಯನ್ನು ಕಚ್ಚಿಕೊಂಡಳು. ಅವಳ ಕೈ ಅವನದನ್ನು ಬಿಗಿಯಾಗಿ ಹಿಡಿದುಕೊಂಡಿತು.

ಅವಳ ಕಡೆ ನೋಡುತ್ತಿದ್ದ ಹಾಗೆ ಅವಳ ಕಣ್ಣುಗಳು ಕಂಬನಿಗಳಲ್ಲಿ ಮುಳುಗಿದ್ದುದನ್ನು ಕಂಡು ಅವನು ಚಕಿತನಾದ. ಇಂಥ ಸಂದರ್ಭಗಳಲ್ಲಿ ಹೆಣ್ಣು ಕಂಬನಿಗರೆಯುವುದು ಸಹಜವಾಗಿರಬಹುದೆಂದೂ ಅವನಿಗೆನ್ನಿಸಿತು. ಅವಳು ಮತ್ತು ಸ್ವಲ್ಪ ಅವನತ್ತ ಸರಿದು ಅವನ ಭುಜದ ಮೇಲೆ ತಲೆಯನ್ನೊರಗಿಸಿದಳು.

ನರಗುಂದನ ಹಳ್ಳಿಯ ಹತ್ತಿರದ ನಿಲ್ದಾಣದಲ್ಲಿ ಅವರು ಇಳಿದಾಗ ಮೇಲಕ್ಕೇರಿ ಬಂದ ಸೂರ್ಯನ ಪ್ರಖರ ಕಿರಣಗಳಲ್ಲಿ ಸುತ್ತಲಿನ ಸೃಷ್ಟಿಯೆಲ್ಲವೂ ಒಂದು ರಮ್ಯ ಚಿತ್ರದಂತೆ ಕಾಣಿಸುತ್ತಲಿತ್ತು. ಮಾವಿನ ಚಿಗುರಿನ ಗಂಧವನ್ನು ಹೊತ್ತ ಗಾಳಿ ಹಾಯಾಗಿ ಸುಳಿಯುತ್ತಿತ್ತು.

ಅವನ ಕೈಯಲಿ ಬ್ಯಾಗು, ಅವಳ ಕಂಕುಳಲ್ಲಿ ಚೀಲ. ಹಾಗೆ ಅವರು ಜತೆಯಾಗಿ ಪ್ಲಾಟ್‌ಫಾರ್ಮಿನ ಮೇಲೆ ನಡೆದು ಬರುತ್ತಿದ್ದಾಗ ಅವರು ವನಭೋಜನಕ್ಕೆಂದು ಬಂದ ಶ್ರೀಮಂತ ದಂಪತಿಗಳಾಗಿರಬಹುದೆಂದು ಸ್ಟೇಶನ್ ಮಾಸ್ತರರಿಗೆನ್ನಿಸಿತು.

ನಿಲ್ದಾಣದ ಹೊರಗಡೆ ಬರುತ್ತಲೂ ಎದುರಿಗೆ ತಲೆಯೆತ್ತಿ ನಿಂತ ಗುಡ್ಡವನ್ನು ಕಂಡಾಗ ಶಾಂತಳ ಮನಸ್ಸು ಪ್ರಫುಲ್ಲಿತವಾಯಿತು. ಹಳದಿ ಹಸುರಾಗಿ ನೀಲಿಯಾಗಿ ಅಕ್ಕಪಕ್ಕದಲ್ಲೊರಗಿದಂತಿದ್ದ ಗುಡ್ಡಗಳ ಮಾಲೆ ಮಾಲೆ....ಸ್ವಚ್ಛವೂ ಹಿತಕರವೂ ಆದ ಗಾಳಿ....ಎಲ್ಲೆಲ್ಲೂ ಎದ್ದು ಕಾಣುತ್ತಿದ್ದ ಸ್ವತಂತ್ರ ಸ್ವಚ್ಛಂದ ಪ್ರಸನ್ನತೆ. ತನ್ನ ಆಯಾಸವೆಲ್ಲವನ್ನೂ ಮರೆತು ಅವಳು ಆ ಅದ್ಭುತ ಪ್ರಸನ್ನತೆ

ಯಲ್ಲಿ ಮಿಾಯತೊಡಗಿದಳು. ಈ ಸುಂದರ ಶುಭ್ರ ಸೃಷ್ಟಿ, ಅದರ ಆಸ್ವಾದವನ್ನು ಸವಿಯುವವರು ತಾವಿಬ್ಬರೇ ಇಬ್ಬರು....

ಹಳ್ಳಿಯ ಕಡೆ ಹೊರಳಿದ್ದ ಕಾಲುಹಾದಿಯಲ್ಲಿ ನಡೆದಿದ್ದ ಹಾಗೆ ಬ್ಯಾಗನ್ನು ಕೆಳಗಿಟ್ಟು ಸದಾನಂದ ಗಾಳಿಯನ್ನು ಆಳವಾಗಿ ಎಳೆದುಕೊಳ್ಳುತ್ತ ಉದ್ಗಾರ ತೆಗೆದ: “ಎಷ್ಟು ಚಂದಾಗಿದೆ ನೋಡಿದೆಯಾ ಶಾಂತಾ!”

“ಚಂದ, ಬಹಳ ಚಂದ!”

ಹಾದಿಗೆ ಅಡ್ಡವಾಗಿ ಹರಿಯುತ್ತಿದ್ದ ತೊರೆಯೊಂದನ್ನು ದಾಟಿ ಬರುತ್ತಲೂ ಕಬ್ಬಿನ ತೋಟವೊಂದು ಕಾಣಿಸಿತು. ತೊರೆಗೆ ಹತ್ತಿಕೊಂಡಿದ್ದ ಯಾತದ ಬಾವಿಯ ಮೇಲೆ ಎತ್ತುಗಳು ಮೊಟ್ಟೆಯನ್ನೆಳೆಯುತ್ತಿದ್ದುವು. ಮೊಟ್ಟೆಗಳ ಹಗ್ಗ ಮೇಲಕ್ಕೆ ಬರುವಾಗ ‘ಜೀಂ ಜೀಂ ಜೀಂ’ ಎಂದು ವಿಲಕ್ಷಣ ಮಧುರವಾದ ಸದ್ದು ಸಂಗೀತದಂತೆ ಕೇಳಬರುತ್ತಿತ್ತು. ಅದರೊಡನೆ ಎತ್ತುಗಳ ಕೊರಳ ಗಂಟೆಗಳ ಟಂಟಣಿ ನಾದವೂ ಸೇರಿ ಆ ಗಾನ ಇನ್ನೂ ಮನಮೋಹಕವಾಗಿತ್ತು. ಅನೇಕ ವರ್ಷಗಳಿಂದ ಹಳ್ಳಿಯನ್ನೇ ಕಾಣದಿದ್ದ ಶಾಂತಾಗೆ ಆ ವಾತಾವರಣ ಹುಚ್ಚು ಹಿಡಿಸಿತು.

ಮೊಟ್ಟೆ ಹೊಡೆಯುತ್ತಿದ್ದ ರೈತ ಇವರನ್ನು ಕಂಡೊಡನೆ ಎತ್ತುಗಳನ್ನು ನಿಲ್ಲಿಸಿ, ಬಾರುಕೋಲನ್ನು ಹೆಗಲ ಮೇಲೊಗೆದು ಮುಂದೆ ಬಂದು ಕೈ ಜೋಡಿಸಿ ವಂದಿಸುತ್ತ ಕೇಳಿದ:

“ಯಾವೂರಿಗೆ ಹೊರಟರಿ ಧಣೇರು?”

ಪ್ರಣಯಿಗಳಿಬ್ಬರೂ ನಕ್ಕರು. ಧಣೇರು! ಬಿಳಿಯರಿವೆ ಧರಿಸಿದವರೆಲ್ಲ ಧಣಿಯರೇ ಎಂದು ತೋರುತ್ತದೆ ಈ ಸರಳ ರೈತರಿಗೆ....

“ಬಾಬಾಸಾಹೇಬರ ಹತ್ತರ ಹೋಗಬೇಕು ಹೌದಲ್ಲೋ? ತರ್ರಿ ಅದನ್ನ,” ಎನ್ನುತ್ತಾ ಆ ರೈತ ಬ್ಯಾಗನ್ನೆತ್ತಿಕೊಳ್ಳಲು ಮುಂದೆ ಬಂದ.

“ನರಗುಂದರು ಬಹಳ ಪಾಪ್ಯುಲರ್ ಇದ್ದ ಹಾಗಿದೆ,” ಎಂದಳು ಶಾಂತಾ.

“ಅವರು ಸೋಶಲಿಸ್ಟರಲ್ಲವೆ? ರೈತರಿಗೂ ಅವರಿಗೂ ಬಹಳ ಒಳ್ಳೆಯ ಸಂಬಂಧವಿರುವದು ಸಹಜವೇ. ಅಲ್ಲದೆ ನರಗುಂದ ನಾಲ್ಕು ಜನರನ್ನು ಹಚ್ಚಿಕೊಳ್ಳುವ ಜೀವ.”

ಬ್ಯಾಗನ್ನು ತಲೆಯ ಮೇಲೆ ಹೊತ್ತು, ಶಾಂತಳ ಚೀಲವನ್ನು ಕೈಯಲ್ಲಿ ಹಿಡಿದು ಆ ರೈತ ಮುಂದಾಗಿ ನಡೆಯುತ್ತ ಮತ್ತೆ ಕೇಳಿದ:

"ಬಾಬಾಸಾಹೇಬರದೂ ನಿಮ್ಮದೂ ಬಹಳ ದೋಸ್ತಿಯೇನ್ರೀ?"

"ಹೌದು. ಅವರೂ ನಾವೂ ಕೂಡೇ ಕಾಲೇಜಿನಲ್ಲಿದ್ದೇವೆ."

"ಹಿಂಗೇನು? ಬಾಳ ಚಲೋ ಮಾಡಿದಿರಿ ನಮ್ಮೂರಿಗೆ ಬಂದು. ತಿಂಗಳೊಪ್ಪತ್ತು ಇರ್ತೀರಿ ಹೌದಲ್ಲೋ?"

"ತಿಂಗಳೊಪ್ಪತ್ತೇ ಯಾಕೆ, ಇಲ್ಲೇ ಕಾಯಂ ಆಗಿ ಇರಬೇಕು ಅಂತ ಬಂದಿದ್ದೇವೆ."

"ಎಲ್ಲೀ ಮಾತು ಬಿಡಿರೀ. ನಿಮ್ಮಂಥಾವ್ರು ಯಾತಕ್ಕ ಇದ್ದೀರಿ ಇಂಥಾ ಕಾಡಿನಾಗ?" ಎಂದ ರೈತ.

ಅರ್ಧ ಫರ್ಲಾಂಗು ನಡೆದು ಬಂದಾಗ ಗುಡ್ಡದ ಅಡಿಯಲ್ಲಿ ನಮ್ರವಾಗಿ ನಿಂತಂತಿದ್ದ ಆ ಪುಟ್ಟಹಳ್ಳಿ ಕಾಣಿಸಿಕೊಂಡಿತು. ಹೊಲದಲ್ಲಿ ಕೆಲಸ ಮಾಡುತ್ತಿದ್ದ ರೈತರು ಓಡಿಹೋಗಿ ಸುದ್ದಿ ತಿಳಿಸುತ್ತಲೂ ನರಗುಂದ ಆನಂದ ಆತುರಗಳಿಂದ ಓಡುತ್ತ ಬಂದು ಅವರನ್ನು ಸ್ವಾಗತಿಸಿದ.

"ದೀಪಾವಳಿ ರಜೆಗೆ ಊರಿಗೆ ಹೋಗುವಾಗ ನೀವು ಆಮಂತ್ರಣ ಕೊಟ್ಟಿದ್ದಿರಲ್ಲ, ನರಗುಂದ, ಅದು ಈಗ ಫಲಿಸಿತು."

"ಒಬ್ಬರನ್ನು ಆಮಂತ್ರಿಸಿದರೆ ಇಬ್ಬರು ಬಂದಿರಲ್ಲ!" ಎಂದು ಚೇಷ್ಟೆಗಾಗಿ ನುಡಿದ ನರಗುಂದ.

ಸದಾನಂದನೂ ಚೇಷ್ಟೆಯ ದನಿಯಲ್ಲೇ ಹೇಳಿದ:

"ಇಬ್ಬರೆಲ್ಲಿದ್ದೇವೆ ನರಗುಂದ? ಇಬ್ಬರೂ ಒಬ್ಬರೇ ಈಗ."

## ೨೬

ಗುಡ್ಡದಾಚೆಯಿಂದ ರವಿಬಿಂಬವೆದ್ದು ಇನ್ನೂ ಬಹಳ ವೇಳೆಯಾಗಿರಲಿಲ್ಲ. ಹಕ್ಕಿಗಳ ಗಾನದಿಂದಾಗಿ ಸದಾನಂದನಿಗೂ ಎಚ್ಚರವಾಯಿತು. ಕಣ್ದೆರೆದು ಅವನು ಸುತ್ತಲೂ ದೃಷ್ಟಿ ತಿರುಗಿಸಿದಾಗ ಕೊಟಡಿಯ ಕಿಟಕಿಯಿಂದ ತೂರಿ ಬರುತ್ತಿದ್ದ ಬೆಳಗಿನ ಸುಂದರ ಪ್ರಕಾಶ ಕಣ್ಣು ಕುಕ್ಕಿದಂತಾಯಿತು. ಪಕ್ಕದಲ್ಲೊರಗಿಕೊಂಡು ಸುಖನಿದ್ರೆಯಲ್ಲಿ ಮುಳುಗಿದ್ದ ಶಾಂತಳ ಚೆಲುವಾದ ಮುಖವನ್ನು ದಿಟ್ಟಿಸುತ್ತಿದ್ದ ಹಾಗೆ ಅವಳ ಬಗೆಗಿದ್ದ ಪ್ರೀತಿಯಿಂದ ಅವನ ಎದೆಯುರಳಿತು. ಮೆಲ್ಲನೆ ಬಾಗಿ ಅವಳ ನಿದ್ರಾಭಂಗವಾಗದಂತೆ ತುಂಬ ಎಚ್ಚರಿಕೆಯಿಂದ ಅವಳ ಕೆನ್ನೆಯನ್ನು ಮುದ್ದಿಸಿದ. ಅವಳೀಗ ತನ್ನವಳು....ಪೂರ್ತಿಯಾಗಿ ತನ್ನವಳು....ಇನ್ನೊಂದು ದಿನಕ್ಕೆ ಕಾನೂನೂ ಕೂಡ ತಮ್ಮ ಮಿಲನಕ್ಕೆ ಮುದ್ರೆಯೊತ್ತುವುದು. ನರಗುಂದನನ್ನು ಕರೆದುಕೊಂಡು ಬೆಳಗಾವಿಗೆ ಹೋಗಿ ಮದುವೆಯನ್ನು ರಜಿಸ್ಟರ್ ಮಾಡಿಸುವುದೆಂದು ಮುನ್ನಾದಿನವೆ ಗೊತ್ತಾಗಿದ್ದಿತು.

ಸದಾನಂದ ಎದ್ದು ಕಿಟಕಿಯ ಬಳಿ ಬಂದು ನಿಂತುಕೊಂಡ. ಗುಡ್ಡದ ಮೇಲೆ ಸೂರ್ಯ ನಿಧಾನವಾಗಿ ಏರಿ ಬರತೊಡಗಿದ್ದ. ಆಗತಾನೆ ಮುಖ ತೊಳೆದುಕೊಂಡು ಬಂದ ಮಗುವಿನ ಹಾಗೆ ಕಾಂತಿಯುತವಾಗಿದ್ದ ಸೂರ್ಯನ ಕಿರಣಗಳಲ್ಲಿ ಸುತ್ತಲಿನ ಸೃಷ್ಟಿ ಸುಂದರವಾಗಿ ಬೆಳಗುತ್ತಿತ್ತು. ಗಾಳಿ ಸುಳಿಯುತ್ತಿರಲಿಲ್ಲ– ಎದುರಿಗಿದ್ದ ಗಿಡಮರಗಳು, ಬಿದಿರುಮೆಳೆಗಳು, ಅವುಗಳಾಚೆಗಿನ ತೆಂಗಿನ ಗಿಡಗಳು, ಅವುಗಳ ಹಿಂಬದಿಯ ಗುಡ್ಡಗಳು ಎಲ್ಲವೂ ನೆರಳಾಕೃತಿ ತಳೆದು

ಚಿತ್ರಸ್ಥವಾಗಿ ನಿಂತುಕೊಂಡಿದ್ದುವು. ಹತ್ತಿರದ ಬಾವಿಯ ಮೇಲೆ ಮೊಟ್ಟೆ ಹೊಡೆಯುವ ಹುಡುಗ ಹಾಡುತ್ತಿದ್ದ ಹಳ್ಳಿಯ ಹಾಡು ಹವೆಯಲ್ಲಿ ಹರಿದು ಬಂದು ಕಿವಿಗಳನ್ನು ತಬ್ಬಿಕೊಳ್ಳುತ್ತಿತ್ತು. ಹತ್ತಿರದಲ್ಲಿದ್ದ ಕಬ್ಬಿನ ಬೆಳೆಯ ನಡುವೆ ನಿಂತು ಹುಡುಗನೊಬ್ಬ ನೀರು ಹಾಯಿಸುತ್ತಿದ್ದ. ಹೊಸದಾಗಿ ಬಿತ್ತಿದ ಬೀಜ. ಇನ್ನೂ ಮೊಳಕೆಯೊಡೆದಿರಲಿಲ್ಲ. ಐದಾರು ಬೆಳ್ಳಕ್ಕಿಗಳು ಅವನ ಬಳಿ ಸುಳಿದಾಡುತ್ತ ಆಹಾರದ ಶೋಧದಲ್ಲಿ ನಿರತವಾಗಿದ್ದುವು. ತೋಟದ ಪುಟ್ಟ ಕಾಲುವೆಗಳಲ್ಲಿ ಹರಿದು ಹೋಗುತ್ತಿದ್ದ ನೀರು ದೊಡ್ಡದೊಂದು ಹೆಬ್ಬಾವಿನಂತೆ ಕಾಣಿಸಿತು ಸದಾನಂದನಿಗೆ.

ಬಾವಿಯ ಮೇಲೆ ಎತ್ತು ಕೋಣಗಳು ತಮ್ಮ ನಿತ್ಯಕಾರ್ಯಕಕ್ಕಾರಂಭಿಸಿದ್ದುವು. ಮೊಟ್ಟೆಯನ್ನೆಳೆಯುತ್ತಾ ಮುಂದೆ ಬರುವುದು, ನೀರು ಮೇಲಕ್ಕೆ ಬಂದು ಬೀಳುತ್ತಲೂ ಮತ್ತೆ ಹಿಂದೆ ಸರಿಯುವುದು. ಮತ್ತೆ ಮುಂದೆ, ಮತ್ತೆ ಹಿಂದೆ. ಆ ಮೂಕ ಪ್ರಾಣಿಗಳ ರೂಪದಲ್ಲಿ ಆ ಬಾವಿಯ ಮೇಲೆ ಜೀವನವೇ ಚಲಿಸುತ್ತಿದ್ದ ಹಾಗೆ ಭಾಸವಾಯಿತು ಸದಾನಂದನಿಗೆ. ಸಮೀಪದ ಹೊಲದಲ್ಲಿ ಕಸಕಡ್ಡಿ ಮೆಲ್ಲುತ್ತ ಎಮ್ಮೆಗಳು ಸೋಮಾರಿಗಳಂತೆ ನಿಧಾನವಾಗಿ ಅಡಿಯಿಡುತ್ತಿದ್ದುವು. ನೀರ ಮೇಲೆಸೆದ ಬಲೆಯಂತೆ ಹೊಲದ ಮೇಲೆ, ಹಳ್ಳಿಯಿಂದೆದ್ದ ಹೊಗೆ ತೇಲುತ್ತಿತ್ತು.

ಆ ವೇಳೆಗಾಗಲೆ ಪ್ರಾತರ್ವಿಧಿಗಳನ್ನು ಮುಗಿಸಿಕೊಂಡು ಬಂದ ನರಗುಂದ ಕಿಟಕಿಯಲ್ಲಿ ನಿಂತಿದ್ದ ಸದಾನಂದನನ್ನು ಕಂಡು,

"ನಿದ್ದೆಯಾಯಿತೇ ಚೆನ್ನಾಗಿ? ಶಾಂತಕ್ಕ ಎದ್ದರೇ?" ಎಂದ.

"ಇಲ್ಲ, ಅವಳಿನ್ನೂ ಕನಸು ಕಾಣುತ್ತಿದ್ದಾಳೆ," ಎನ್ನುತ್ತಾ ಬಾಗಿಲು ತೆರೆದು ಹೊರಗಡೆ ಬಂದ ಸದಾನಂದ.

ಉಪಾಹಾರ ಮುಗಿದ ಬಳಿಕ ಮೂವರೂ ಸೇರಿ ಗುಡ್ಡಗಳ ಕಡೆ ತಿರುಗಾಡಲು ಹೊರಟರು. ಶಾಂತಳ ಮುಖ ಮ್ಲಾನವಾಗಿದ್ದುದನ್ನು ಕಂಡು ನರಗುಂದ ಕೇಳಿದ:

"ಯಾಕ್ರೀ, ಮನೆಯ ನೆನಪಾಯಿತೋ ಏನು?"

ಒಂದು ಕ್ಷಣ ಸುಮ್ಮನಿದ್ದು ಅವಳೆಂದಳು:

"ನಮ್ಮ ತಂದೆಯವರ ಪ್ರಕೃತಿ ಚೆನ್ನಾಗಿಲ್ಲ ನರಗುಂದ. ನಾನು ಮನೆ ಬಿಟ್ಟು ಬಂದದ್ದಕ್ಕೆ ಅವರಿಗೆ ಶಾಕ್ ಹೊಡೆದಂತಾಗಿರಬಹುದು."

"ಹೌದು. ಈ ವಯಸ್ಸಿನಲ್ಲಿ ಹಾಗಾಗುವದು ಸಹಜ."

"ನನ್ನ ಮೇಲೆ ಅವರದು ಬಹಳ ಪ್ರೀತಿ ನರಗುಂದ. ನಿಜವಾಗಿ ಅವರಿಗೂ ನನ್ನನ್ನು ಆ ಫೌಜದಾರರಿಗೆ ಕಟ್ಟುವ ಮನಸ್ಸಿರಲಿಲ್ಲ. ಆದರೆ...."

ಮೂವರೂ ಮೌನವಾಗಿ ಗುಡ್ಡವೇರತೊಡಗಿದರು. ಸದಾನಂದನ ಮುಖದಲ್ಲಿ ತುಂಬಿ ಬಂದಿದ್ದ ಉಲ್ಲಸದ ಕಳೆಯೂ ಮಾಯವಾಗಿದ್ದಿತು.

"ಬೆಳಗಿನಿಂದ ಯಾಕೋ ನನ್ನ ಕರುಳು ತಳಮಳಿಸುತ್ತಿದೆ," ಎಂದಳು ಶಾಂತಾ. ಗುಡ್ಡದ ಮೇಲೆ ಬಹಳ ಹೊತ್ತು ಕಳೆಯದೆ ಅವರು ಮನೆಗೆ ಮರಳಿದರು.

ಅವರು ಮನೆಯನ್ನು ಸಮೀಪಿಸುತ್ತಿದ್ದಂತೆ ನರಗುಂದನ ಚಿಕ್ಕ ಸೋದರ ಓಡಿಬಂದು ಹೇಳಿದ:

"ಯಾರೋ ಸಾಹೇಬ್ರು ಬಂದಾರೆ ಅಣ್ಣಾ."

ಶಾಂತಾ ಸದಾನಂದ ಇಬ್ಬರೂ ಪರಸ್ಪರ ಮುಖಗಳನ್ನು ದಿಟ್ಟಿಸಿದರು.

"ಪೋಲೀಸರಿರಬಹುದೋ ಏನೊ," ಎಂದ ನರಗುಂದ.

"ಇಷ್ಟು ಬೇಗ ಹ್ಯಾಗೆ ಬಂದಾರು ಅವರು? ನಾವಿಲ್ಲಿಗೆ ಬಂದದ್ದಾದರೂ ಅವರಿಗೆ ಹ್ಯಾಗೆ ಗೊತ್ತಾಗುತ್ತದೆ?" ಎಂದ ಸದಾನಂದ.

"ನಮ್ಮಿಬ್ಬರ ಗಾಢಸ್ನೇಹ ಅವರಿಗೂ ಗೊತ್ತಿದೆಯಲ್ಲ. ಕೊಟಬಾಗಿ ದೇಶಪಾಂಡೆ ಅಂತೂ ಇದ್ದೇ ಇದ್ದಾರೆ ಹೇಳಲಿಕ್ಕೆ. ನೀವು ಇಲ್ಲಿಗೇ ಬಂದಿರ ಬೇಕೆಂದು ಅವರಿಗೆನ್ನಿಸುವದೂ ಸ್ವಾಭಾವಿಕ."

"ಈಗ ಹ್ಯಾಗೆ ಮಾಡುವದು ನರಗುಂದ?"

"ನೀವು ಧೈರ್ಯ ಬಿಡಬಾರದು. ಶಾಂತಕ್ಕ ವಯಸ್ಕರಾಗಿದ್ದಾರೆ. ಪೋಲೀಸರು ನಿಮಗೇನೂ ಮಾಡಲಾರರು."

ಅವರು ಮನೆಯ ಬಳಿ ಬರುತ್ತಲೂ, ಕಟ್ಟೆಯ ಮೇಲೆ ನರಗುಂದನ ತಂದೆ ಯೊಡನೆ ಮಾತನಾಡುತ್ತ ಕುಳಿತಿದ್ದ ಮುಧೋಳ ಫೌಜದಾರರ ಪರಿಚಿತ

ಮೂರ್ತಿ ಕಾಣಿಸಿತು. ಅವರು ಪೋಲೀಸ್ ವೇಷದಲ್ಲಿರಲಿಲ್ಲ. ಸಾದಾ ಸೂಟು ಧರಿಸಿ ಬಂದಿದ್ದರು.

ಇವರನ್ನು ನೋಡುತ್ತಲೂ ಮುಧೋಳರು ಕೊಂಚ ವ್ಯಂಗ್ಯ ಬೆರೆತ ದನಿಯಲ್ಲಿ ಹೇಳಿದರು :

"ಬೇಗ ಬಂದಿರಿ ವಾಕಿಂಗ್ ಮುಗಿಸಿಕೊಂಡು. ಊಟ ಮುಗಿಸಿಕೊಂಡು ತಯಾರಾಗಿರಿ. ಈಗ ಹನ್ನೊಂದು ಗಂಟೆಗೊಂದು ರೈಲಿದೆ...."

"ಅಂದರೆ? ನೀವು ನಮ್ಮನ್ನು ಅರೆಸ್ಟ್ ಮಾಡುತ್ತಿದ್ದೀರೋ ಹ್ಯಾಗೆ?" ಎಂದು ಗಂಭೀರವಾಗಿ ಕೇಳಿದ ನರಗುಂದ.

"ಅರೆಸ್ಟ್? ನೋ ಸರ್. ನಾನೀಗ ಪೋಲೀಸ್ ಆಫೀಸರಾಗಿ ಇಲ್ಲಿಗೆ ಬಂದಿಲ್ಲ. ರಾಮಣ್ಣನ ಗೋಳು ನೋಡಲಾರದೆ ಈಕೆಯನ್ನು ಕರೆದೊಯ್ಯಲು ಬಂದೆ."

"ನಾನು ನನ್ನ ಸ್ವಂತ ಇಚ್ಛೆಯಿಂದ ಇವರೊಡನೆ ಬಂದಿದ್ದೇನೆ. ನೀವು ನಮಗೆ ಏನನ್ನೂ ಮಾಡಲಾರಿರಿ," ಎಂದಳು ಶಾಂತಾ.

"ನಾನು ನಿಮಗೆ ಏನನ್ನೂ ಮಾಡುವದಿಲ್ಲ. ನೀವು ಮತ್ತೆ ಇವರೊಡನೆಯೆ ಹೋದೀರಂತೆ. ಮೊದಲು ಊರಿಗೆ ನಡೆಯಿರಿ. ನಿಮ್ಮನ್ನು ಕರೆದೊಯ್ದು ನಾನು ಲಗ್ನವಾಗುವೆನೆಂತಲೂ ತಿಳಿಯಬೇಡಿರಿ – ಸ್ವತಃ ನೀವೇ ನನ್ನ ಕಾಲಿಗೆ ಬಿದ್ದು ಅತ್ತು ಕರೆದು ಬೇಡಿಕೊಂಡರೂ ಇನ್ನು ನಿಮ್ಮನ್ನು ಕಟ್ಟಿಕೊಳ್ಳಲಿಕ್ಕಿಲ್ಲ ನಾನು."

"ಹಾಗಾದರೆ ಇವರನ್ನು ಯಾತಕ್ಕಾಗಿ ಕರೆದೊಯ್ಯುವವರು?" ಎಂದು ವಿಸ್ಮಯದ ದನಿಯಲ್ಲಿ ಕೇಳಿದ ನರಗುಂದ.

ಮುಧೋಳರು ಮೇಲಕ್ಕೆದ್ದು ಓಣಿಯಲ್ಲಿ ಅಡಿಯಿಡುತ್ತಾ ಮುಖವನ್ನು ಬೇರೆಡೆಗೆ ತಿರುಗಿಸಿ ಹೇಳಿದರು :

"ಕಡೇಸಲ ತಂದೆಯ ಮುಖ ನೋಡಲಿ ಅಂತ."

"ಹಾ!"

"ನಿನ್ನೆ ರಾತ್ರಿಯೆ ಅವರು ಹೋಗಿಬಿಟ್ಟರು...."

"ಹೀಗೆ ಒಮ್ಮಿಂದೊಮ್ಮೆಲೆ....?"

"ಬಹಳ ವರ್ಷಗಳಿಂದ ಜರ್ಜರಿತವಾದ ದೇಹ ಅವರದು – ಮಗಳ

ರೋಮಾನ್ಸ್ ತಡೆದುಕೊಳ್ಳಲಾಗದೆ ಹಾರ್ಟ್‌ಫೇಲ್ ಆದದ್ದು ಸ್ವಾಭಾವಿಕ. ಹರಿ ಅಪ್ ಫ್ರೆಂಡ್ಸ್!" ಎಂದರು ಮುಧೋಳರು.

ಅವರು ನಗರಕ್ಕೆ ಬಂದು ಮುಟ್ಟಿದಾಗ ಸೂರ್ಯಾಸ್ತದ ಸಮಯ ಸಮೀಪಿಸುತ್ತಿತ್ತು. ಕುದುರೆ ಗಾಡಿಗಳನ್ನೇರಿ ಅವರು ಮನೆಗೆ ಬರುವವೇಳೆಗೆ ಮಧ್ವರಾಯರ ಕಳೇಬರ ಅಂತ್ಯ ಸಂಸ್ಕಾರಕ್ಕೆಂದು ಶ್ಮಶಾನದತ್ತ ಹೊರಡುವುದರಲ್ಲಿದ್ದಿತು.

ಎಲ್ಲವೂ ಮುಗಿದು ಅವರು ಮನೆಗೆ ಮರಳಿದಾಗ, ತಂದೆಯನ್ನು ಕಳೆದುಕೊಂಡ ಮನೆಯೂ ಒಂದು ಶ್ಮಶಾನದಂತೆಯೆ ಕಾಣಿಸಿತು ಶಾಂತಾಗೆ. ಪಡಸಾಲೆಯಲ್ಲಿನ ಪೆಟ್ಟಿಗೆಯ ಮೇಲೆ ಅನಾಥ ಮಕ್ಕಳಂತೆ ಬಿದ್ದುಕೊಂಡಿದ್ದ ಭಗವದ್ಗೀತೆ, ಮಧ್ವವಿಜಯಗಳನ್ನು ಹುಚ್ಚಿಯಂತೆ ದಿಟ್ಟಿಸುತ್ತ ಅವಳು ಗೋಡೆಗೊರಗಿ ಕುಳಿತುಕೊಂಡಳು. ಸಂಸ್ಕಾರಕ್ಕೆಂದು ಸೇರಿದ್ದ ಜನರೆಲ್ಲ ಹೊರಟುಹೋಗಿದ್ದರು. ವೆಂಕಟೇಶ ತನ್ನ ಕೊಟಡಿಯಲ್ಲಿ ಬಿದ್ದುಕೊಂಡಿದ್ದ. ಅವಳನ್ನು ಪರಿಪರಿಯಾಗಿ ಸಂತೈಸಿ ಲೀಲಳೂ ತನ್ನ ಮನೆಗೆ ಹೋಗಿದ್ದಳು.

ಅರ್ಧ ಗಂಟೆಯವರೆಗೂ ಅಲ್ಲಿಯೆ ಮೂಕವಾಗಿ ಕುಳಿತಿದ್ದಳು ಶಾಂತಾ. ಸ್ನಾನ ತೀರಿಸಿಕೊಂಡು ಪಡಸಾಲೆಗೆ ಬಂದ ರಾಮಚಂದ್ರ ಅವಳನ್ನು ಕಂಡು ಕೆರಳಿದ ದನಿಯಲ್ಲಿ ಹೇಳಿದ :

"ಈಗಾದರೂ ಶಾಂತಿಯಾಯಿತೇನು ನಿನ್ನ ಆತ್ಮಕ್ಕೆ !"

ಅವಳು ಮಿಸುಕಾಡಲಿಲ್ಲ. ಭಗವದ್ಗೀತೆಯ ಮೇಲೆಯೆ ದೃಷ್ಟಿಯಿಟ್ಟು ಮೌನವಾಗಿ ಕುಳಿತುಕೊಂಡಳು.

ರಾಮಚಂದ್ರ ಮತ್ತೆ ಹೇಳಿದ :

"ಇಷ್ಟು ಬೇಗ ಅಣ್ಣಾ ಹೋಗುತ್ತಿರಲಿಲ್ಲ. ನೀನೇ.... ನೀನೇ ಅವರನ್ನು ತೀರಿಸಿಬಿಟ್ಟೆ. ಹಾರ್ಟ್‌ಫೇಲ್ ಆಗಿ ಸಾಯಲಿಲ್ಲ ಅವರು. ನಿನಗಾಗಿ ಆತ್ಮಹತ್ಯೆ ಮಾಡಿಕೊಂಡರು...." ದುಃಖವೂ ಕ್ರೋಧವೂ ಅವನ ದನಿಯಲ್ಲಿ ಸಮಸಮವಾಗಿ ಬೆರೆತುಕೊಂಡಿತ್ತು.

ನಿಧಾನವಾಗಿ ಮುಖವೆತ್ತಿ ಶಾಂತಾ ಅಣ್ಣನ ಕಡೆ ದೃಷ್ಟಿ ತಿರುಗಿಸಿ ಕೇಳಿದಳು :

"ಆತ್ಮಹತ್ಯೆ ?"

“ಹೌದು ಆತ್ಮಹತ್ಯೆ,” ಗೂಟಕ್ಕೆ ನೇತಾಡುತ್ತಿದ್ದ ತನ್ನ ಕೋಟಿನಿಂದ ಕಾಗದವೊಂದನ್ನು ತೆಗೆದು ಅವಳ ಮೇಲೆಸೆದು ಆತ ಒಳಗಡೆ ಹೊರಟುಹೋದ.

ನಡುಗುವ ಕೈಗಳಿಂದ ಅದನ್ನೆತ್ತಿಕೊಂಡು ಅವಳು ಓದತೊಡಗಿದಳು :

“ಚಿರಂಜೀವಿಗೆ – ಅನೇಕಾಶೀರ್ವಾದಗಳು :

ಶಾಂತಿ ಮನೆಬಿಟ್ಟು ಹೋದಾಗಿನಿಂದ ನನಗೆ ಸ್ವಲ್ಪವೂ ಶಾಂತಿಯಿಲ್ಲ. ನಾವೇ ಆಕೆಯನ್ನು ಮನೆಯಿಂದ ಓಡಿಸಿದೆವೆಂದು ನನಗೆನ್ನಿಸುತ್ತದೆ. ಅವಳ ಇಚ್ಛೆಗೆ ವಿರುದ್ಧವಾಗಿ ಅವಳ ಲಗ್ನ ಮಾಡಲು ಹೊರಟದ್ದು ನಮ್ಮ ತಪ್ಪು. ಆದದ್ದು ಆಗಿಹೋಯಿತು. ಈಗ ಅವಳು ಎಲ್ಲಿದ್ದರೂ ಹುಡುಕಿ ಕರೆದುಕೊಂಡು ಬಂದು ಸಂಭಾಳಿಸಿಕೊಂಡು ಹೋಗುವುದು ನಿನ್ನ ಕರ್ತವ್ಯ. ಮೂರು ಸಾವಿರ ವರದಕ್ಷಿಣೆ ಕೊಟ್ಟರೆ ಅವಳು ಒಪ್ಪುವಂಥ ವರ ನಮ್ಮ ಮತದಲ್ಲೇ ಸಿಗಬಹುದು. ನನಗಿನ್ನು ಬದಕುವ ಇಚ್ಛೆಯಿಲ್ಲ. ಆದ್ದರಿಂದಲೇ ನಿದ್ರೆಯ ಮಾತ್ರೆಗಳನ್ನು ತೆಗೆದುಕೊಂಡು ಚಿರನಿದ್ರೆಯಲ್ಲಿ ಮುಳುಗುತ್ತಿದ್ದೇನೆ. (ಈ ವಿಚಾರವನ್ನು ಯಾರಿಗೂ ತಿಳಿಸಬೇಡ.) ನನ್ನ ವಿಮೆಯ ಹಣವನ್ನುಪಯೋಗಿಸಿಕೊಂಡು ಶಾಂತಿಯ ಲಗ್ನಕಾರ್ಯ ಮುಗಿಸು. ವೆಂಕಣ್ಣನ ತಲೆಯ ಮೇಲೂ ಶಾಂತಿಯ ತಲೆಯ ಮೇಲೂ ಅಕ್ಷತೆ ಬೀಳುವುದನ್ನು ನೋಡುವ ಆಸೆಯಿತ್ತು. ಆದರೆ, ಉಪಾಯವಿಲ್ಲ. ಅವರ ಯೋಗಕ್ಷೇಮ ನೋಡಿಕೊಳ್ಳಲು ನೀನು ಸಮರ್ಥನಿರುವೆ. ಶಾಂತಿ ಮಗುವಾಗಿದ್ದಂದಿನಿಂದ ಅವಳನ್ನು ನಾನು ಕಣ್ಣುಗೊಂಬೆ ಯೋಪಾದಿಯಲ್ಲಿ ಜೋಪಾನ ಮಾಡುತ್ತ ಬಂದಿದ್ದೇನೆ. ನೀನೂ ಇನ್ನು ಮುಂದೆ ಅವಳನ್ನು ಹಾಗೇ ನೋಡಿಕೊಂಡರೆ ನನ್ನ ಆತ್ಮಕ್ಕೆ ಶಾಂತಿ ದೊರೆಯುವುದು. ಇತ್ಯಾಶೀರ್ವಾದಗಳು.”

ಓದಿ ಮುಗಿಸಿ, ಕಂಬನಿಗಳಿಂದ ಟಿವಟಿವಿಸುತ್ತಿದ್ದ ಕಣ್ಣುಗಳನ್ನು ಅವಳು ಅತ್ತಿತ್ತ ತಿರುಗಿಸಿದಾಗ ಬಾಗಿಲಿನಲ್ಲಿ ಬಂದು ನಿಂತುಕೊಂಡಿದ್ದ ಸದಾನಂದನ ಆಕೃತಿ ಅಸ್ಪಷ್ಟವಾಗಿ ಗೋಚರವಾಯಿತು.

ಒಳಗಡೆ ಹೆಜ್ಜೆಯಿಡಲಾರದೆ, ಹೊಸ್ತಿಲ ಮೇಲೆಯೆ ನಿಂತು ಅವನು ರುದ್ಧ ಕಂಠದಿಂದ ನುಡಿದ :

“ಶಾಂತಾ....”

ಸದಾನಂದನ ದನಿ ಕೇಳಿಸಿದರೂ ವೆಂಕಟೇಶ ತನ್ನ ಕೊಟಡಿಯನ್ನು ಬಿಟ್ಟು ಬರಲಿಲ್ಲ. ರಾಮಚಂದ್ರನಿಗಂತೂ ಆ ಸಮಯದಲ್ಲಿ ಯಾವುದೂ ಬೇಡವಾಗಿತ್ತು.

ಒಂದು ಹೆಜ್ಜೆಯನ್ನು ಮುಂದಿರಿಸಿ ಸದಾನಂದ ಮತ್ತೆ ಕರೆದ:

“ ಶಾಂತಾ....”

ಮೆಲ್ಲನೆ ಮೇಲೆದ್ದು ಅವಳು ನಿಧಾನವಾಗಿ ಹೆಜ್ಜೆ ಹಾಕುತ್ತ ಅವನ ಬಳಿ ಬಂದಳು.

---

ಮಾಲಾಮರಡಿ. ಏಪ್ರಿಲ್, ೧೯೫೪.

## ಮುಂದಿನ ಪ್ರಕಟನೆಗಳು

### ಗ್ಯಾಲಿಯ ಗುಲಾಮ

ಶ್ರೀ ತ. ರಾ. ಸು ರವರ ಕಾದಂಬರಿ



### ಮಲ್ಲಿ

ಶ್ರೀ 'ದೇವುಡು'ರವರ ಕಾದಂಬರಿ



### ಕಾಂಚನ ಗಂಗಾ

('ಕಾಮಿನಿ – ಕಾಂಚನ'ದ ಎರಡನೆಯ ಭಾಗ)

ಶ್ರೀ ಅ. ನ. ಕೃ ರವರ ಕಾದಂಬರಿ



### ಬಣ್ಣದ ಮಾಲಿಂಗ

ಶ್ರೀ ಕುಮಾರ ವೆಂಕಣ್ಣನವರ ಕಾದಂಬರಿ



### ಆನಂದ ಲಹರಿ

ಶ್ರೀ 'ಆನಂದ'ರ ಸಂಕಲನ



### ತೂಗು ಮಂಚ

ಶ್ರೀ 'ಚದುರಂಗ'ರ ಕಾದಂಬರಿ